


ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ
ನಿರ್ವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ ||



ತ್ರೈಲೋಕ್ಯಸಂಪಾದಾಲೇಖ್ಯಸಮುಲ್ಲೇಖನಭಿತ್ತಯೇ |
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ ||





# ಅರ್ಪಣೆ

ಜಗದ್ಗುರುಗಳಾದ
ಶ್ರೀ ಶ್ರೀ ಶ್ರೀ ಪಂಚಾಚಾರ್ಯರ
ಪಾದಪದ್ಮಂಗಳಲ್ಲಿ ಈ
ಗ್ರಂಥಪುಷ್ಪ ಅರ್ಪಣೆ

---

*"ಕಷ್ಟಗಳು ಒದಗುವುದು ಮನುಷ್ಯನನ್ನು ಗಟ್ಟಿ ಮಾಡುವುದಕ್ಕೆ.
ಆದ್ದರಿಂದ ನಿರಾಶೆ ಕೂಡದು"*

## ಆರಾಧ್ಯಸುರಭಿ ಪಸರಿಸಿದವರು

*ಪ್ರಧಾನ ಸಂಪಾದಕರು*

ಶ್ರೀ ಜಿನ್ನಹಳ್ಳಿ ನಾಗಭೂಷಣಾರಾಧ್ಯ



*ಗೌರವ ಸಂಪಾದಕರು*

ಪ್ರೊ. ಶ್ರೀನಿವಾಸಮೂರ್ತಿ

ಪ್ರೊ. ಎಸ್. ಲೋಕೇಶಾರಾಧ್ಯ

ಪ್ರೊ. ಜಗದಾಂಬಾ ಮಲ್ಲೇದೇವರು

ಶ್ರೀ ಬಿ. ಎಂ. ಎಂ. ಆರಾಧ್ಯ

ಡಾ. ಟಿ.ವಿ. ಸತ್ಯನಾರಾಯಣ

ಡಾ. ಅರ್ಜುನಪುರಿ ಅಪ್ಪಾಜಿಗೌಡ

ಶ್ರೀ ಮಹೇಶ್‌ಕುಮಾರ್, ಉಪನ್ಯಾಸಕರು

ಶ್ರೀ ಯ. ಮ. ಹೇಮಂತ ಕುಮಾರ್



*"ಏನನ್ನೂ ನಿರೀಕ್ಷಿಸದವನು ಸುಖಿ, ಏಕೆಂದರೆ ಅವನಿಗೆ ನಿರಾಶೆ ಎಂಬುದೇ ಇಲ್ಲ.*

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ||



ದಿ|| ಜಿನ್ನಹಳ್ಳಿ ಕುಮಾರಾರಾಧ್ಯರು



ದಿ|| ಪಾರ್ವತಾಂಬಾ ಹೆಬ್ಬಲಗುಪ್ಪೆ



*" ದೈವಚಿಂತನ, ಧಾರ್ಮಿಕಮಂಥನ, ಸೇವಾಮನೋಭಾವ ಬೆಳೆಸಿಕೊಂಡು.*
*ಜನಸೇವೆಯೇ ಜನಾರ್ದನ ಸೇವೆಯೆಂದು ಮನಗಂಡು ನುಡಿದಂತೆ ನಡೆದು*
*ಎಲ್ಲರ ಪ್ರೀತಿ ಆದರಗಳ ಹೊಂದಿದ ನನ್ನ ಪೂಜ್ಯ ಮಾತಾಪಿತೃಗಳ*
*ಪಾದಾರವಿಂದಗಳಲ್ಲಿ ನನ್ನ ಅನಂತಾನಂತಪ್ರಣಾಮಗಳ ಅರ್ಪಣೆ "*

ಜಿನ್ನಹಳ್ಳಿ ನಾಗಭೂಷಣಾರಾಧ್ಯ
ಮತ್ತು ಕುಟುಂಬವರ್ಗ



ನಾಗಭೂಷಣಾರಾಧ್ಯ



ಪ್ರೊ. ಶ್ರೀನಿವಾಸಮೂರ್ತಿ



ಪ್ರೊ. ಎಸ್. ಲೋಕೇಶಾರಾಧ್ಯ



ಡಾ. ಟಿ.ವಿ. ಸತ್ಯನಾರಾಯಣ



ಪ್ರೊ. ಜಗದಾಂಬಾ ಮಲ್ಲೇದೇವರು



ಡಾ. ಅರ್ಜುನಪುರಿ ಅಪ್ಪಾಜಿಗೌಡ



ಶ್ರೀ ಮಹೇಶ್‌ಕುಮಾರ್,
ಉಪನ್ಯಾಸಕರು



ಶ್ರೀ ಬಿ. ಎಂ. ಎಂ. ಆರಾಧ್ಯ,
ವಕೀಲರು



ಶ್ರೀ ಹೇಮಂತ ಕುಮಾರ್,
ಪರಿಸರ ಪ್ರೇಮಿ

# ಸುರಭಿ ಒಡಲೊಳಗೆ

* * *





**ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮**
**ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು,**
ಬಾಳೆಹೊನ್ನೂರು - 577 112 (ಚಿಕ್ಕಮಗಳೂರು ಜಿಲ್ಲೆ)

---

ದಿನಾಂಕ :

## ಶುಭಾಶೀರ್ವಾದ ಸಂದೇಶ

ಬದುಕು ಒಂದು ಹೂದೋಟ. ಇಲ್ಲಿ ಸುಖಶಾಂತಿ ಸಮೃದ್ಧಿಯಿಂದ ಬದುಕಿ ಬಾಳಿದರೆ ಜೀವನ ಸ್ವರ್ಗ ಸುಖ. ಜೀವನದ ಉನ್ನತಿಗೆ ಮತ್ತು ಅವನತಿಗೆ ಅವರವರ ಗುಣಧರ್ಮಗಳೇ ಮೂಲ ಕಾರಣ. ಆದರ್ಶ ವ್ಯಕ್ತಿಗಳ ಸಹಯೋಗದಲ್ಲಿ ಬೆಳೆದರೆ ಜೀವನ ಸರ್ವಾಂಗೀಣ ಪ್ರಗತಿ. ಅಲ್ಲದವರ ಒಡನಾಟ ಅಧಃಪತನಕ್ಕೆ ಕಾರಣವಾಗಬಲ್ಲುದು. ಲಿಂಗೈಕ್ಯ ಶ್ರೀ ಆರ್. ಕುಮಾರಾರಾಧ್ಯರು ತಮ್ಮ ನಿರಂತರ ಪರಿಶ್ರಮ ಮತ್ತು ಕ್ರಿಯಾಶೀಲ ಬದುಕಿನಿಂದಾಗಿ ಇತರರಿಗೆ ಕಣ್ಣಾಗಿ ಬಾಳಿದರು.

ಹಳ್ಳಿಯ ಬದುಕಿನಲ್ಲಿ ಹುಟ್ಟಿ ಬೆಳೆದ ಶ್ರೀ ಆರ್. ಕುಮಾರಾರಾಧ್ಯರು ಶಿಕ್ಷಕತನದಲ್ಲಿ ಉನ್ನತ ಉದ್ದೇಶ ಮತ್ತು ಅವುಗಳ ಸಾಧನೆಗಾಗಿ ಪ್ರಾಮಾಣಿಕ ಪ್ರಯತ್ನ ಮಾಡಿದವರು. ದೇಶಭಕ್ತಿ, ಧರ್ಮನಿಷ್ಠೆ, ಧರ್ಮಸಾಮರಸ್ಯ ಹುಟ್ಟುಹಾಕುವಲ್ಲಿ ಗಟ್ಟಿ ಹೆಜ್ಜೆಯನ್ನಿಟ್ಟವರು. ಗ್ರಾಮದ ಮುಖ್ಯಸ್ಥರಾಗಿ ಜನಕಲ್ಯಾಣ ಕಾರ್ಯಗಳನ್ನು ನೆರವೇರಿಸಿದ ಕೀರ್ತಿ ಇವರದು. ಬಡಜನತೆಯ ಉದ್ಧಾರಕ್ಕಾಗಿ ತ್ಯಾಗ, ಔದಾರ್ಯಗಳನ್ನು ಮಾಡಿ ಮುನ್ನಡೆದವರು. ಓದುವ ಬಡಮಕ್ಕಳಿಗೆ ಉಚಿತವಾಗಿ ವಿದ್ಯಾಭ್ಯಾಸ ಊಟ ವಸತಿ ಸೌಕರ್ಯಗಳನ್ನು ಕಲ್ಪಿಸಿದ ಕೀರ್ತಿ ಇವರದು.

ಹಲವಾರು ದೇವಾಲಯಗಳ ಪುನರುದ್ಧಾರ ಮಾಡುವುದರ ಜೊತೆಗೆ ಸಾಮಾಜಿಕ ಕಾರ್ಯಗಳನ್ನು ನಿರಂತರ ಮಾಡಿ ಜನಮನದಲ್ಲಿ ಹಸಿರಾದವರು. ಮನೆಗೆ ಬಂದ ಅತಿಥಿ ಅಭ್ಯಾಗತರನ್ನು ತಮ್ಮ ಕುಟುಂಬದವರೇ ಅನ್ನುವ ಹಾಗೆ ಕಾಳಜಿ ವಹಿಸಿ ನೋಡಿಕೊಳ್ಳುತ್ತಿದ್ದವರು. ಶ್ರೀ ಕುಮಾರಾರಾಧ್ಯರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರು ಪತಿಯ ಎಲ್ಲಾ ಧರ್ಮಕಾರ್ಯಗಳಲ್ಲಿ ಸಹಕರಿಸಿ ಕಾರ್ಯಮಾಡುತ್ತಿದ್ದವರು. ಆರತಿಗೆ ಒಬ್ಬ ಮಗಳು, ಕೀರ್ತಿಗೆ ಒಬ್ಬ ಮಗ ಅನ್ನುವಂತೆ ಮಿತ ಸಂತಾನ ಹೊಂದಿದವರಾಗಿದ್ದವರು. ಶ್ರೀ ಚನ್ನಹಳ್ಳಿ ನಾಗಭೂಷಣಾರಾಧ್ಯರು, ಶ್ರೀ ಆರ್. ಕುಮಾರಾರಾಧ್ಯರ ಏಕೈಕ ಪುತ್ರರಾಗಿದ್ದು ಅವರ ಆದರ್ಶ ಧ್ಯೇಯೋದ್ದೇಶಗಳನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು ಹೆಮ್ಮೆಯ ಸಂಗತಿ. ಶ್ರೀ ಕುಮಾರಾರಾಧ್ಯರ ಜೀವನಾದರ್ಶಗಳು ಈ ಸಾಹಿತ್ಯ ಕುಸುಮದಲ್ಲಿ ಸಂಗ್ರಹಿತಗೊಂಡು ನಾಡಿಗರಿಗೆ ಪರಿಚಯ ಮಾಡುತ್ತಿರುವುದು ಸಂತೋಷದ ಸಂಗತಿ. ಇದಕ್ಕಾಗಿ ಶ್ರಮಿಸಿದವರೆಲ್ಲರಿಗೂ ಶುಭ ಹಾರೈಕೆಗಳು.

ಪರಮದಯಾಳು ಶ್ರೀ ಪಾರ್ವತೀ ಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಗಳನ್ನೀಯಲಿ.



## ಜಿನ್ನಹಳ್ಳಿ ಗುರುಮಠದ ವೇ.ಬ್ರ.ಶ್ರೀ. ರೇವಣಾರಾಧ್ಯ ಮತ್ತು ಶ್ರೀಮತಿ ಬಸವಾಜಮ್ಮನವರ ವಂಶಾವಳಿ



| 1 | 2 | 3 | 4 |
|---|---|---|---|
| ಶ್ರೀಮತಿ ಪಾರ್ವತಮ್ಮ<br>ಮತ್ತು<br>ಶ್ರೀ ಚಿಕ್ಕಮಲ್ಲಾರಾಧ್ಯ | ಶ್ರೀಮತಿ ದೇವಾಜಮ್ಮ<br>ಮತ್ತು<br>ಸಾಗರೆ<br>ಶ್ರೀ ಚಂದ್ರಶೇಖರಾರಾಧ್ಯ | ಶ್ರೀ ಆರ್. ಕುಮಾರಾರಾಧ್ಯ<br>ಮತ್ತು<br>ಶ್ರೀಮತಿ ಪಾರ್ವತಮ್ಮ | ಶ್ರೀ ಆರ್. ರೇವಣಾರಾಧ್ಯ<br>ಮತ್ತು<br>ಶ್ರೀಮತಿ ಪುಟ್ಟಮ್ಮಣ್ಣಿ |



| 1 | 2 |
|---|---|
| ಶ್ರೀಮತಿ ಅಂಬುಜಾಕ್ಷಮ್ಮ<br>ಮತ್ತು<br>ಶ್ರೀ ಜೆ. ಸಿ. ಚಂದ್ರಶೇಖರಾರಾಧ್ಯ, ಸಾಗರೆ, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಶಿಕ್ಷಕರು | ಶ್ರೀ ನಾಗಭೂಷಣಾರಾಧ್ಯ<br>ಮತ್ತು<br>ಶ್ರೀಮತಿ ಲೀಲಾ ನಾಗಭೂಷಣ್ |



| 1 | 2 | 3 | 4 |
|---|---|---|---|
| ಶ್ರೀಮತಿ ಎನ್. ಕವಿತಾ<br>ಮತ್ತು<br>ಶ್ರೀ ಎಂ. ಸ್ವಾಮಿ (ಬಾಬು) ಮಂಡ್ಯ<br>↓<br>ಕು. ಎಂ. ಪರೀಕ್ಷಿತ್ | ಆರಾಧ್ಯ ಪೂರ್ಣತೇಜಸ್ವಿ | ಆರಾಧ್ಯಪೂರ್ಣ ಚೈತನ್ಯರೇಣುಕೇಶ್ | ಕು. ಎನ್. ಕಾಂಚನ |

ಸತ್ಯೇನೋತ್ತಭಾತಾಭೂಮಿಃ || ನ ಹಿ ಸತ್ಯಾತ್ಪರೋ ಧರ್ಮಃ




**ಜಗದ್ಗುರು ಪಂಚಾಚಾರ್ಯರ ಜಯಂತ್ಯುತ್ಸವಗಳು ಇಂತಿವೆ : -**

1) ವೈಶಾಖಮಾಸ, ಶುಕ್ಲಪಕ್ಷ, ತದಿಗೆ, ರೋಹಿಣೀ ನಕ್ಷತ್ರದಲ್ಲಿ - ಶ್ರೀ ಏಕೋರಾಮಾರಾಧ್ಯರ ಜಯಂತಿ

2) ವೈಶಾಖಮಾಸ, ಶುಕ್ಲಪಕ್ಷ, ಪಂಚಮಿ, ಮೃಗಶಿರಾ ನಕ್ಷತ್ರದಲ್ಲಿ - ಶ್ರೀ ದಾರುಕಾಚಾರ್ಯರ ಜಯಂತಿ

3) ಮಾಘಮಾಸ, ಕೃಷ್ಣಪಕ್ಷ, ಚತುರ್ದಶೀ, ಮಹಾಶಿವರಾತ್ರಿಯಂದು - ಶ್ರೀ ಪಂಡಿತಾರಾಧ್ಯ ಮತ್ತು ಶ್ರೀ ವಿಶ್ವಾರಾಧ್ಯರ ಜಯಂತಿ.

4) ಫಾಲ್ಗುಣಮಾಸ, ಶುಕ್ಲಪಕ್ಷ, ತ್ರಯೋದಶಿಯಂದು - ಶ್ರೀ ರೇಣುಕಾಚಾರ್ಯರ ಜಯಂತಿ.

* * *

# ಸುರಭಿ ಅರಳುವ ಮುನ್ನ

ಸಂಸ್ಕೃತಿಯ ಲಘುಪ್ರಭಾವದಿಂದ, ಸಾಮಾಜಿಕ ಅಸಮತೋಲನ ಬದಲಾವಣೆಗಳಿಂದ ನಮ್ಮ ಸಮಾಜವು ಘಾಸಿಯಾಗದಂತೆ ಅಭಿವೃದ್ಧಿಗೊಳ್ಳಲು ನಮ್ಮಲ್ಲಿ ಅತಿಮುಖ್ಯವಾಗಿ ಸಂಘಟನೆ, ಸೌಹಾರ್ದ ಮತ್ತು ಮನಸ್ಥೈರ್ಯ ಅತಿಮುಖ್ಯ ಎಂಬುದನ್ನು ಅರಿಯಬೇಕು. ಅರಿತು ನಡೆಯಬೇಕು.

ಇಡೀ ಭಾರತದಲ್ಲಿ ನಮ್ಮದೊಂದು ಚಿಕ್ಕ ಜನಾಂಗ (ಅಲ್ಪಸಂಖ್ಯಾತ)ವಾಗಿದ್ದು, ಇಂಥಹ ಜನಾಂಗದ ಅಭ್ಯುದಯ ಕಾರ್ಯವನ್ನು ಬಯಸಿ ಕೈ ಹಾಕಿದವರಿಗೆ ಕೈ ಜೋಡಿಸಬೇಕು. ಇದನ್ನು ಮಾಡಲಾಗದವರು ಸುಮ್ಮನಿರುವುದು ಲೇಸು, ಅದನ್ನು ಬಿಟ್ಟು ಅನ್ಯಮಾರ್ಗ ಹುಡುಕುವವರು ಕುಹಕಿಗಳು. ಇವರು ಹೆಚ್ಚುವುದು ಸಮಾಜಕ್ಕೆ ಕಂಟಕವಾಗುತ್ತದೆ. ಅಂತಹವರನ್ನು ಜನಾಂಗ ಎಚ್ಚರಿಸಿ, ಅವರ ದಾರಿ ದುರ್ಗಮವಾದುದೆಂದು ತಿಳಿಸಿ, ಆ ಮಾರ್ಗದಿಂದ ಸನ್ಮಾರ್ಗಕ್ಕೆ ನಡೆಸುವುದು ಮುಖ್ಯಕೆಲಸ. ಇದು ವ್ಯಕ್ತಿಯನ್ನು, ಸಮಾಜವನ್ನು ಹಾಗೂ ಸಂಸ್ಥೆಯನ್ನು ಸುಧಾರಿಸುವಂತಹ ಕೆಲಸವಾಗುತ್ತದೆ. ಸಮಾಜದಲ್ಲಿ ವೈರ, ಅಸೂಯೆಗಳನ್ನು ಬದಿಗೊತ್ತಿ ಸ್ನೇಹಜೀವಿಯಾಗುವುದು ಉತ್ತಮರ ಗುಣವೆಂದು ನಮ್ಮ ಹಿರಿಯರು ಸೂಚಿಸಿದ್ದಾರೆ. ಅದನ್ನು ನಾವು ತಳಹದಿಯಾಗಿ ಮಾಡಿ ಮುಂದಿನ ಪೀಳಿಗೆಗೆ ತೋರ್ಪಡಿಸುವುದು ನಮ್ಮ ಆದ್ಯಕರ್ತವ್ಯ. ಆದ್ದರಿಂದ ಈ ರೀತಿಯ ಸುಧಾರಣೆಯ ಮಾರ್ಗವನ್ನು ಮನಗಂಡು ಮುಂದಡಿ ಇಡುವುದು ಉತ್ತಮರ ಲಕ್ಷಣ.



**- ಜೆನ್ನಹಳ್ಳಿ ನಾಗಭೂಷಣಾರಾಧ್ಯ**

ಸಂಪಾದಕರು ಮತ್ತು ಅಧ್ಯಕ್ಷರು

ಆರಾಧ್ಯಧರ್ಮಸಭಾ ಟ್ರಸ್ಟ್ (ರಿ)

ಮೈಸೂರು - 23.

ದೂ - 0821-2362204

Mob : 9449406828

ಪ್ರಕೃತ *"ಆರಾಧ್ಯಸುರಭಿ"* ಎಂಬ ಸಂಭಾವನಾಗ್ರಂಥಕ್ಕೆ ಖ್ಯಾತ ಬರಹಗಾರರರು, ಲೇಖಕರು ಹಾಗೂ ಸಾಹಿತಿಗಳನ್ನು ಪ್ರಾರ್ಥಿಸಿದ ಮೇರೆಗೆ ಎಣೆ ಮೀರಿದ ಲೇಖನಗಳು ಹಾಗೂ ಕವನಗಳು ಬಂದವು. ಅವುಗಳನ್ನೆಲ್ಲಾ ಕೈವಲ್ಯಮೂರ್ತಿ ಪಿತಾಶ್ರೀಯವರಾದ ವೇ|| ಬ್ರ|| ಶ್ರೀ ಆರ್. ಕುಮಾರಾರಾಧ್ಯರನ್ನು ಹತ್ತಿರದಿಂದ ಬಲ್ಲ , ಅನುಭವವೇದ್ಯ, ಪ್ರಭಾವಪೂರ್ಣವಾದ, ನೈಜ ಸಂಗತಿಗಳನ್ನೊಳಗೊಂಡ ಸತ್ತ್ವಪೂರ್ಣಲೇಖನಗಳೇ ಆಗಿರುವುದಂತೂ ಈ ಗ್ರಂಥ *ಸಾರ್ಥಕತೆಗೆ ಪ್ರಮುಖಸಾಧನಗಳು* ಹೀಗಾಗಿ ಲೇಖನಗಳಲ್ಲಿ "ಚರ್ವಿತಚರ್ವಣ" ಸಂಗತಿಗಳಿದ್ದರೂ ಅವು ಪೂಜ್ಯ ಶ್ರೀಯವರ ಬಗ್ಗೆ ಲೇಖಕರ ಅಂತರಂಗದ ನೈಜ ತರಂಗಗಳೇ ಆಗಿವೆ ಎಂಬುದು ಸತ್ಯಸ್ಯಸತ್ಯವೇ ಹೊರತು ಉತ್ಪ್ರೇಕ್ಷೆಗಾಗಲಿ, ಅತಿಶಯೋಕ್ತಿಗಾಗಲೀ ಕಿಂಚಿತ್ತೂ ಅವಕಾಶಲಭಿಸಿಲ್ಲ. ಪ್ರತಿಯೊಬ್ಬ ಲೇಖಕರ ಅಭಿಪ್ರಾಯಗಳೂ ಸಹ ಇಕ್ಷುಖಂಡದ ಚರ್ವಣದಂತಿವೆ. ಪ್ರತಿಪರ್ವರಸೋದಯಗಳೇ ಆಗಿವೆ. ಜೊತೆಗೆ ಪೂಜ್ಯಶ್ರೀಯವರ ವಿಚಾರ ಮಂಥನಗಳಿಗೆ ಪೂರಕವಾಗಿವೆ. ಆರಾಧ್ಯಸಮಾಜದ ಮೂಲಭೂತ ಧ್ಯೇಯ. ಅನುಷ್ಠಾನ-ಆಚರಣೆ, ಕರ್ತವ್ಯಗಳಿಗೆ ಹಿಡಿದ ದರ್ಪಣಗಳಾಗಿವೆ. ವಸ್ತುನಿಷ್ಠಗಳಾಗಿವೆ. ಒಟ್ಟಿನಲ್ಲಿ ಅಮೂಲ್ಯ ಲೇಖನಗಳು ಈ ಗ್ರಂಥವನ್ನು "ಸುಧಾರಸಪಾಕ" ಮಯವನ್ನಾಗಿಸಿವೆ. ಸಹೃದಯರು ಮನಸಾರೆ ಸವಿಯಲು ಪೂರಕ ವೇದಿಕೆಯನ್ನು ನಿರ್ಮಿಸಿವೆ.

ಸತ್ತ್ವ ಮತ್ತು ತತ್ತ್ವ ಪ್ರತಿಪಾದಕರ ಸಾಧನೆಗಳ ಬಗ್ಗೆ ಕಿಂಚಿತ್ತಾದರೂ "ಸಾಹಿತ್ಯ ಪಾಕ"ವನ್ನು ಸಿದ್ಧಪಡಿಸಬೇಕೆಂದು ಚಿಂತಿಸಿದುದರ ಫಲವೇ ಈ ಅಮೋಘ ಗ್ರಂಥದ ಅವತಾರವಾಗಿದೆ. ಈ ಗ್ರಂಥದ ಘನತೆ ಹೆಚ್ಚಿದೆ. ಈ ಎಲ್ಲಾ ಲೇಖಕಮಿತ್ರರಿಗೂ ಹೃತ್ಪೂರ್ವಕವಾಗಿ ನೋಮೋವಾಕಂ ಪ್ರಶಾಸ್ಮಹೇ.

ಅದನ್ನು ಇಲ್ಲಿನ ಲೇಖನಗಳಿಂದಲೂ ಗುರುತಿಸಬಹುದು. ಅಲ್ಲದೆ ಅವರು ವೈಯಕ್ತಿಕ ಶಕ್ತಿಯಿಂದ ಚೈತನ್ಯಪಡೆದವರಾದ್ದರಿಂದಲೂ, ಮಹಾಜನತೆಯಲ್ಲಿ ಬೆರೆತ ಮಹಾಶಕ್ತಿಯಾಗಿರುವುದರಿಂದಲೂ ಗುರುತಿಸಲು ಸಾಧ್ಯವಾಗಿರುತ್ತದೆ. ಆದುದರಿಂದ ಈ ಗೌರವಗ್ರಂಥ' ನಾಡಿಗೆ ಸಮರ್ಪಣೆಯಾಗಿದೆ. ಪ್ರಯೋಗಶೀಲಮನಸ್ಸುಗಳಿಗೆ ವಿಶೇಷತೆಯ ಕಾರ್ಯವಿಧಾನವಾಗಿದೆ. ನೆನಪಿನ ಗ್ರಂಥವೈಖರಿಯನ್ನು ತಂದುಕೊಟ್ಟಿದೆ. ಹಾಗೂ ಹೊಸ ಹೊಳಪನ್ನು ಮೂಡಿಸಿದೆ. ಇದಕ್ಕೆ ಆಸರೆಯಾಗಿ ಆರಾಧ್ಯಧರ್ಮಸಭಾ (ರಿ), ಮೈಸೂರು ಒತ್ತುಕೊಟ್ಟಿದೆ. ಮೈಸೂರು ಕವಿತಾ ಸಾಹಿತ್ಯಮಾಲೆ, ಈ ಗ್ರಂಥ ಪ್ರಕಟಿಸಿರುತ್ತೆ.

ಸಮಾಜಕ್ಕಾಗಿ ಅವರೇನು ಮಾಡಿದರು? ಇವರೇನು ಮಾಡಿದರು? ಎನ್ನುವ ಬದಲು, ನಾನೇನು ಮಾಡಿದೆ, ಎಂದು ಮನದಲ್ಲಿ ಮೂಡಿದಾಗ ಸಮಾಜಕ್ಕೆ ಕಿಂಚಿತ್ ಸೇವೆ ಖಂಡಿತ

ಸಿಗುತ್ತದೆ. ಅದು ಸಮಾಜದ ಪ್ರತಿಯೊಬ್ಬರ ಮನಸ್ಸಿನ ಪರಿವರ್ತನೆಯಾದಾಗ ಮಾತ್ರಸಾಧ್ಯ. ಆಗ ಸಮಾಜ ಸದೃಢವಾಗಿ ಮೇಲೇಳುತ್ತದೆ. ಅದಕ್ಕೆ ಕಾಲ ಪಕ್ವಗೊಳ್ಳುತ್ತಲಿದೆ.

ಸಮಾಜಕ್ಕಾಗಿ ದುಡಿದವರನ್ನು ಸ್ಮರಿಸುವುದು ಭಾರತೀಯರ ಕರ್ತವ್ಯ. ವ್ಯಕ್ತಿಯೊಬ್ಬ ಸ್ಮರಣೆಗೆ ಅರ್ಹನಾಗಲು ಕಾರಣಗಳು ಅನಂತ, ಅಪೂರ್ವ, ಸತ್ತ್ವಪೂರ್ಣ ಸಾಧನೆಗಳೂ ಆಗಿವೆ. ಇಂತಹ ಸೇವೆಯಲ್ಲಿ ಜನಹಿತ ಬಯಸುವವರೇ ಸ್ಥಿತಪ್ರಜ್ಞರೂ, ಕೊಡುಗೈವೀರರೂ, ಮಾತಿಗೆ ತಪ್ಪದ ಸಜ್ಜನರೂ, ವಿನಯ ಸಂಪನ್ನರೂ ಇನ್ನೊಬ್ಬರ ಮನನೋಯಿಸದ ಉತ್ತಮರೂ ಆಗಿದ್ದ ಜಿನ್ನಹಳ್ಳಿ ಗುರುಮಠದ ವೇ|| ಬ್ರ|| ಶ್ರೀ ಆರ್. ಕುಮಾರಾರಾಧ್ಯರು. ಅವರ ಹೆಸರಿನಲ್ಲಿ *"ಆರಾಧ್ಯಸುರಭಿ"* ಎಂಬ ಗ್ರಂಥವನ್ನು ಸಮಾಜಕ್ಕೆ ಅರ್ಪಿಸುವುದು ಉತ್ತಮ ಕಾರ್ಯವಾಗಿದ್ದು ಸಹಕರಿಸಿದವರೆಲ್ಲರಿಗೂ ದೇವರು ಒಳಿತನ್ನು ನೀಡಲೆಂದು ಪ್ರಾರ್ಥಿಸುವೆ.

*"ಆರಾಧ್ಯಸುರಭಿ"* ಸ್ಮರಣಸಂಪುಟದ ಸಿದ್ಧತೆಯಲ್ಲಿ ಮಾರ್ಗದರ್ಶನ ನೀಡಿದ ನನ್ನ ಪೂಜ್ಯಗುರುಗಳು ಹಾಗೂ ಹೆಸರಾಂತ ಸಂಶೋಧಕರಾದ ಡಾ. ಚಿದಾನಂದಮೂರ್ತಿಯವರಿಗೆ ನಮಸ್ಕಾರಗಳು. ಇದರ ಕರಡು ತಿದ್ದುಪಡಿ ಮಾಡಿಕೊಟ್ಟು ಉಪಕರಿಸಿದ ನನ್ನ ಆತ್ಮೀಯ ಗೆಳೆಯ ಹಾಗೂ ಸಂಶೋಧಕ ಶ್ರೀ ಜಿ. ಜಿ. ಮಂಜುನಾಥನ್‌ರಿಗೂ, ಆತ್ಮೀಯರಾದ ಡಾ. ಟಿ. ವಿ.ಸತ್ಯನಾರಾಯಣರವರಿಗೂ ಮತ್ತು ಪ್ರೊ. ಶ್ರೀನಿವಾಸಮೂರ್ತಿಯವರಿಗೂ ಈ ಹೊತ್ತಿಗೆಯ ಎಲ್ಲ ಲೇಖಕರಿಗೂ, ಅಂದವಾಗಿ ಮುದ್ರಣಗೊಳಿಸಿಕೊಟ್ಟ ಅಕ್ಷರ ಮುದ್ರಣದ ಮಾಲೀಕರಾದ ಶ್ರೀ ಸಿ. ಜಿ. ಉತ್ತಪ್ಪನವರಿಗೂ ಹಾಗೂ ನೌಕರಬಳಗಕ್ಕೂ, ಮುಖಪುಟ ರಚಿಸಿಕೊಟ್ಟ ಶ್ರೀ ಯ.ಮ. ಹೇಮಂತಕುಮಾರ್ ಮತ್ತು ಶ್ರೀ ಸೋಮಾಚಾರ್ ಇವರಿಗೂ ಮತ್ತು ಸಂಪಾದಕಮಂಡಳಿಯ ಎಲ್ಲ ಗೌರವಾನ್ವಿತಸದಸ್ಯರುಗಳಿಗೂ ನನ್ನ ಆತ್ಮೀಯ ಅಭಿನಂದನೆಗಳು. ಲೇಖನ ನೀಡಿದವರಲ್ಲಿ ಮೂವರು ನಿಧನಗೊಂಡಿದ್ದಾರೆ. ಅವರ ಆತ್ಮಕ್ಕೆ ಭಗವಂತನು ಶಾಂತಿ ನೀಡಲಿ. ಮೈಸೂರಿನ ಆರಾಧ್ಯಧರ್ಮಸಭಾ ಟ್ರಸ್ಟ್(ರಿ) ಆಡಳಿತ ವರ್ಗದ ಎಲ್ಲರೂ ಪ್ರಾರಂಭದಿಂದಲೂ ಸಹಕರಿಸಿ ಎರಡು ಮಹಾಸಮ್ಮೇಳನಗಳನ್ನು ಯಶಸ್ವಿಗೊಳಿಸಿರುವುದರಿಂದ ನನಗೆ ಹರ್ಷವಾಗಿದೆ. ಹಾಗೆಯೇ ಮುಂದಿನ ಕಾರ್ಯಕ್ರಮಗಳಿಗೂ ತಮ್ಮೆಲ್ಲರ ಸಹಕಾರ ಕೋರುತ್ತೇನೆ.

ಸುರಭಿ ಅರಳುವ ಮುನ್ನ ನಿಮ್ಮೊಡನೆ ಸಂಭಾಷಿಸಿದ ಸಮಾಜದ ಬಗೆ, ನನ್ನ ನಿಮ್ಮ ಬಗ್ಗೆ ಒಂದಿಷ್ಟು ಮತುಗಳು ಅರಳಿದ್ದರೆ ಅವು ನಿಮಗೆ ಸುವಾಸಿತವಾದ ಪರಿಮಳವಾಗಲಿ ಎಂದು ಭಗವಂತನಲ್ಲಿ ಪ್ರಾರ್ಥಿಸಿ ನಿಮಗೆ ಶುಭವಾಗಲೆಂದು ಆಶಿಸುವೆ.

* * *

# ಸುರಭಿ ನಿಮ್ಮ ಕೈಗೆ ಇಡುವಾಗ

ಭರತಭೂಮಿಯ ಧಾರ್ಮಿಕ ಹಿನ್ನೆಲೆಯಲ್ಲಿ, ಮನು ಕುಲದ ಏಳಿಗೆಯ ಉದ್ಧಾರಕ್ಕಾಗಿ ಈ ಭೂಮಿಯಲ್ಲಿ ಸಾಧಕರು ತಮ್ಮ ಸಾಧನೆಗಳಿಗೆ ಪೂಜನೀಯರಾಗಿದ್ದಾರೆ. ಅಂಥವರಲ್ಲಿ ಜಿನ್ನಹಳ್ಳಿ ಗುರುಮಠದ ಶ್ರೀ ಕುಮಾರಾರಾಧ್ಯರೂ ಒಬ್ಬರು. ಇವರು ಸಮಾಜದಲ್ಲಿನ ಅಸಮಾನತೆ, ಅಜ್ಞಾನ ಮತ್ತು ಅಂಧಕಾರದ ವಿರುದ್ಧ ಬಂಡಾಯದ ಮನಃಸ್ಥಿತಿಯನ್ನು ಮೈಗೂಡಿಸಿಕೊಂಡಿದ್ದವರು. ತಪ್ಪನ್ನು ನೇರವಾಗಿ ಖಂಡಿಸುತ್ತಿದ್ದರು. ವಿಷಯದ ಹಿಂದಿರುವ ಸತ್ಯವನ್ನು ಶೋಧಿಸಿ ಪ್ರಕಟಗೊಳಿಸುವ ಪ್ರವೃತ್ತಿ ಇವರದು.

ಆರಾಧ್ಯರು ಭೌತಿಕವಾಗಿ ನಮ್ಮೊಟ್ಟಿಗಿಲ್ಲದಿದ್ದರೂ, ಅವರ ಆದರ್ಶ, ಸಿದ್ಧಾಂತ ಜೀವಂತವಾಗಿರುವುದನ್ನು ನಾವು ಕಾಣಬಹುದು. ಇದು ಸಾರ್ವಕಾಲಿಕ ಸತ್ಯ. "ಬೆಳೆಯುವ ಸಿರಿ ಮೊಳಕೆಯಲ್ಲಿ"ಎಂಬ ಗಾದೆಯ ಮಾತಿನಂತೆ, ಮಾನವೀಯತೆಯ ಮೌಲ್ಯಗಳನ್ನು ಸಮಾಜಕ್ಕೆ ಸಾರಿ ಹೇಳಿದ ಮಹಾ ಚಿಂತಕರಿವರು. ಇವರು ಅಂಗೀಕರಿಸಿದ ಅಹಿಂಸೆ, ಸ್ನೇಹ, ಒಗ್ಗಟ್ಟು ಮಾನವ ಸಮಾಜದ ತತ್ತ್ವವಾಗಿತ್ತು. "ಮನುಷ್ಯ ಆರ್ಥಿಕಸ್ವಾವಲಂಬನೆ, ಸ್ವಾಭಿಮಾನ, ಆತ್ಮವಿಶ್ವಾಸ ಮೈಗೂಡಿಸಿಕೊಳ್ಳಬೇಕು. ಮನುಷ್ಯನ ಔದಾರ್ಯ-ಪ್ರೇಮ- ಅನುಕಂಪ ಜೀವನದ ಮೌಲ್ಯಗಳು. ಇವುಗಳಿಲ್ಲದ ಬದುಕು ಬರಡು" ಎಂಬುದು ಇವರ ಸ್ಪಷ್ಟ ಅಭಿಪ್ರಾಯವಾಗಿತ್ತು.

ಆರಾಧ್ಯಸುರಭಿಯಲ್ಲಿನ ಲೇಖನಗಳಿಂದ ಓದುಗರಿಗೆ ಅವರ ತತ್ತ್ವ, ಸಿದ್ಧಾಂತ, ವ್ಯಕ್ತಿತ್ವಗಳು ಸ್ಫುಟಗೊಳ್ಳುತ್ತವೆ ಎಂದು ಭಾವಿಸಿದ್ದೇನೆ. ಅದಕ್ಕೆ ಈ ಕೃತಿಯ ಲೇಖಕರೇ ಸಾಕ್ಷಿ. ಧಾರ್ಮಿಕ ಹಿನ್ನೆಲೆ ಇವರ ಇನ್ನೊಂದು ಮಾರ್ಗವಾಗಿರುತ್ತದೆ. ಆದುದರಿಂದ ಸಮಾಜಸೇವೆ, ದಾನ, ಧರ್ಮ, ನ್ಯಾಯ, ದೇವಾಲಯಗಳ ಜೀರ್ಣೋದ್ಧಾರ ಮುಂತಾದವುಗಳ ಬಗ್ಗೆ ಆಸಕ್ತಿ ತೋರಿಸಿರುತ್ತಾರೆ. ಇಂತಹವರನ್ನು ನೆನೆಸಿ ಸ್ಮರಿಸುವುದು ಉತ್ತಮ ಮಾರ್ಗ. ಆ ದಿಕ್ಕಿನಲ್ಲಿ ಮೈಸೂರಿನ ಆರಾಧ್ಯಧರ್ಮಸಭಾ ಮುನ್ನಡಿ ಇಟ್ಟಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ತಾವು ಓದಿ ತಿಳಿಸಿ ಎಂದು ತಮ್ಮ ಕೈಗೆ ಇಡುತ್ತಿದ್ದೇವೆ.



**- ಲೀಲಾ ನಾಗಭೂಷಣ್**
ಪ್ರಕಾಶಕರು
ಕವಿತಾ ಸಾಹಿತ್ಯ ಮಾಲೆ
ಮೈಸೂರು
ದೂ - 0821-2362204

* * *

# ಪಂಚಾಚಾರ್ಯರ ಪ್ರಾರ್ಥನೆ



ಜಗತ್‌ಪಂಚಾಚಾರ್ಯಾಃ ಪ್ರಸೀದಂತು
ಪಂಚಜ್ಞಾನಸಿರಿಸಂಪದಃ ಪ್ರಸೀದಂತು ||ಪ||

ಜಗದೊಡೆಯನ ಆಣತಿಯಂತೆ ಭುವಿಗಿಳಿದ
ಆಚಾರ್ಯರ ಚರಿತವಂ ಧರೆಯೊಳ್ ಪ್ರಸಿದ್ಧವಾದುದಂ
ಅದನರಿಯಲು ಮನುಷ್ಯ ಜನ್ಮ ಚಡಪಡಿಸಿಹುದು ||೧||

ಭುವಿಯೊಳಿರುವ ಜೋತಿರ್‌ಲಿಂಗದೊಳ್ ಆರಿಸಿ
ಅವುಗಳು ಐದರಲಿ ಒಡಮೂಡಿ ಪ್ರಕಟಗೊಂಡ ಆಚಾರ್ಯರ
ಚರಿತವದು ಮಾನವರಿಂದ ಇಳೆಯೊಳ್ ಪ್ರಸಿದ್ಧಗೊಂಡಿಹುದು ||೨||

ಭುವಿಯೊಳು ನಶಿಸುತಲಿರುವ ಶಿವಸ್ತುತಿಯಿಂ
ಮನನೊಂದ ದೈವ ಶಿವಾದ್ವೈತಪ್ರಚಾರ ಖಚಿತಗೊಂಡಿಹುದು
ಅದರಿಂ ಜಗವೆಲ್ಲ ಶಿವಸ್ತುತಿಯಿಂ  ಮೊಳಗುತಿಹುದೂ ||೩||

ಗುರು ಆಚಾರ್ಯರು ಹಿಮಾಚಲದಿಂ ಕನ್ಯಾಕುಮಾರಿಯವರೆಗಂ
ತಮ್ಮ ಪ್ರತಿಭೆಯಿಂ ಶಿವಾದ್ವೈತಪ್ರಚಾರವಂ ಕೈಗೊಂಡಿಹರ
ದುವೆ ಅಂಧಕಾರವ ತೊಲಗಿಸಿ ಬೆಳಗುತಿದೆ ಶಿವಜ್ಞಾನದಿ ||೪||



ಅಧ್ಯಾತ್ಮ ತಿಳಿಯಲು ಮನುಜಾತ್ಮಸಾಧನೆಗೆ ವಿಸ್ತರವಹುದು
ಆಗ ಮನುಷ್ಯನ ಜನುಮಾಂತರದ ಮಾಯೆ ಮಸುಕಹರಿದು
ಧರೆಯ ಪಂಚಾಚಾರ್ಯರ ದರ್ಶನಸಂದೇಶಗಳು ಸಾರ್ಥಕವಹುದು ||೫||

ಲೇಖಕ :

**- ಆರಾಧಕ,** ಮೈಸೂರು.

* * *

# ಸಮಾಜಸೇವಾಧುರಂಧರ

ಶ್ರೀ ಆರ್. ಕುಮಾರಾರಾಧ್ಯರು ಮೂಲತಃ ಮೈಸೂರು ಜಿಲ್ಲೆ ಹೆಚ್.ಡಿ. ಕೋಟೆ ತಾಲ್ಲೂಕಿನ ಹಂಪಾಪುರದ ಹೋಬಳಿಗೆ ಸೇರಿದ ಜಿನ್ನಹಳ್ಳಿ ಗ್ರಾಮದವರು. 1885ನೆ ಇಸ್ವಿ ಜೂನ್ 21ರಂದು ದಿವಂಗತ ಶ್ರೀ ರೇವಣಾರಾಧ್ಯರು ಹಾಗೂ ಶ್ರೀಮತಿ ಬಸವಾಜಮ್ಮನವರ ಗರ್ಭಾಂಬುಧಿಯಲ್ಲಿ ಜನ್ಮತಾಳಿದರು. ಸ್ವಲ್ಪ ಶಿಕ್ಷಣವನ್ನು ಪಡೆದರೂ ಅಪಾರ ಜ್ಞಾನವನ್ನು ಸಂಪಾದಿಸಿದ ಧೀಮಂತ ಸಾತ್ವಿಕ ನಾಯಕರಾದರು. ಹಿರಿಯರು, ತಂದೆ ತಾಯಿಯರು ಹಾಕಿದ ಮತ್ತು ಅವರು ಪಾಲಿಸಿದ ಧರ್ಮ, ಸಂಪ್ರದಾಯವನ್ನು ಅನುಸರಿಸುತ್ತ ಬಂದವರು. ತಂದೆ, ತಾಯಿ, ಗುರುಗಳಿಂದ ಪಡೆಯುವ ಸಂಸ್ಕಾರವು ಬಹಳ ಮಹತ್ವದ್ದು. ಅದನ್ನು ಚಾಚೂ ತಪ್ಪದೆ ಜೀವನದಲ್ಲಿ ಪಾಲಿಸಿಕೊಂಡು ಬರುತ್ತಿದ್ದರು. ಅಕ್ಷರ ಅಭ್ಯಾಸವು ಮನೆಯಲ್ಲಿ ತಂದೆಯಿಂದಲೇ ಪ್ರಾರಂಭಗೊಂಡು, ಮುಂದೆ ಶಾಲೆಯಿಂದ ಶಿಕ್ಷಣವು ದೊರಕಿತು. ಸಂಸಾರದ ತಾಪತ್ರಯದಲ್ಲಿಯೂ ಕುಮಾರಾರಾಧ್ಯರ ವಿದ್ಯಾಭ್ಯಾಸ ನಡೆದು, ಧರ್ಮದ ಸಂಪ್ರದಾಯದಂತೆ ವೇದಾಭ್ಯಾಸ ಮಾಡಿದ್ದು ಜನರಿಗೆ ಸಾಮಾನ್ಯಸಂಸ್ಕಾರದ ಜ್ಞಾನವನ್ನು ನೀಡುತ್ತಿದ್ದರು.




- ಷ. ಬ್ರ. ಶ್ರೀ
ಡಾ ಮುಮ್ಮಡಿ
ಚಂದ್ರಶೇಖರ
ಶಿವಾಚಾರ್ಯಸ್ವಾಮೀಜಿ
ಅರಮನೆ ಜಪದಕಟ್ಟೆ ಮಠ,
ಮೈಸೂರು - 4
ದೂರವಾಣಿ - 2449943
(0821), 2449958


**ಸಮಾಜಸುಧಾರಕರಾಗಿ**

ಶ್ರೀ ಕುಮಾರಾರಾಧ್ಯರು ಸಮಾಜದ ಸುಧಾರಣೆಯಲ್ಲಿ ಅಮಿತೋತ್ಸಾಹವನ್ನು ಹೊಂದಿದ್ದರು. ಅವರು ಸ್ತ್ರೀಶಿಕ್ಷಣದ ಅವಶ್ಯಕತೆ, ದುಂದುಗಾರಿಕೆ, ಕಪಟನೀತಿಯ ವಿರೋಧ, ಮದ್ಯಪಾನನಿಷೇಧ ಇಂತಹ ವಿಚಾರಗಳನ್ನು ಸಮಾಜಕ್ಕೆ ತಿಳಿಸಿಕೊಡುತ್ತಿದ್ದರು. ಒಬ್ಬ ಕವಿ ಹೇಳುವಂತೆ,

*ನನ್ನದು ನಿನ್ನದು ಎನ್ನುವ ಸೊಲ್ಲದು*
*ಸಲ್ಲದು ಇಂದಿನ ಸಮಯದಲಿ*
*ತನ್ನದೆಲ್ಲವನು ತಾಯಿಗೆ ನೀಡಿ*
*ಸಿಡಿದೇಳಲಿ ರಾಷ್ಟ್ರದ ಪುರುಷ*
*ನಾಡಿಗೆ ಹರುಷ*

ಸಮಾಜದ ಏಳಿಗೆಗಾಗಿ ಶ್ರಮಿಸುವ ಜೀವ ಇವರದಾಗಿತ್ತು. ದೇಶಭಕ್ತಿ, ದೈವಭಕ್ತಿ, ಮಾನವ ಜನ್ಮದ ಸುಖದುಃಖಗಳು ರಾಗದ್ವೇಷಗಳ ಬಗ್ಗೆ ಅರಿತುಕೊಂಡು ಸಮಾಜೋದ್ಧಾರ ಕಾರ್ಯ ಮಾಡಿದ್ದಾರೆ.

*"ರಾಷ್ಟ್ರ ನಮ್ಮ ದಿಗೆ ಗಂಡಾಂತರವಿದೆ*
*ಉಂಡಾಡುವುದು ಹೇಡಿತನ*
*ಸರ್ವಶಕ್ತಿಯಲಿ ವೈರಿಯನೆದುರಿಸಿ*
*ಗಡಿಯಲಿ ಮಡಿವುದೇ ಧೀರತನ"*

ಎಂಬ ರಾಷ್ಟ್ರಾಭಿಮಾನದ ಸಂದೇಶವನ್ನು ಕವಿ ಜನತೆಗೆ ನೀಡುವಂತೆ ಶ್ರೀ ಕುಮಾರಾರಾಧ್ಯರು ಸಮಾಜಕ್ಕೆ ಎಚ್ಚರಿಕೆಯನ್ನು ನೀಡುತ್ತಿದ್ದರು.

ಊರಿನ ಕ್ಷೇಮಾಭಿವೃದ್ಧಿಗೆ ಹಗಲಿರುಳು ಶ್ರಮಿಸಿ ತಮ್ಮ ಜೀವನ ಪರ್ಯಂತ ದುಡಿದ ಮಹಾನ್ ವ್ಯಕ್ತಿಗಳು. ಇವರ ಸೇವಾಮನೋಭಾವ ಹಾಗೂ ಜನಾನುರಾಗವನ್ನು ಕಂಡು ಬ್ರಿಟಿಷ್ ಸರ್ಕಾರದಿಂದ ಸ್ವತಂತ್ರಭಾರತದ ಸರ್ಕಾರವೂ ಸಹ ಇವರಿಗೆ ಮನ್ನಣೆ ನೀಡಿ "ವಿಲೇಜ್ ಮುನ್ಸೀಫ್" ಎಂದು ನೇಮಿಸಿತ್ತು.

**ಕಾಯಕನಿಷ್ಠೆ**

ತಮ್ಮ ಮನೆ ಸಂಸಾರಕ್ಕೆ ಸೀಮಿತವಾಗಿರದೇ ಸಮಾಜವೇ ತಮ್ಮ ಕಾರ್ಯಕ್ಷೇತ್ರವೆಂದು ತಿಳಿದು ನಡೆದ ಕಾರ್ಯನಿರತರು. ಹಂಪಾಪುರ ಗ್ರಾಮದ ಮುನ್ಸೀಫ್‌ರಾಗಿ ಸಾವಿರಾರು ಜನರು ನ್ಯಾಯ ಪಡೆದುಕೊಳ್ಳಲು ಬಂದರೂ, ಅವುಗಳನ್ನು ನಿಧಾನವಾಗಿ ಬುದ್ಧಿವಂತಿಕೆಯಿಂದ ಪರಿಶೀಲಿಸಿ ನ್ಯಾಯಸಮ್ಮತತೀರ್ಪುಗಳನ್ನು ನೀಡುವ ಕಾಯಕದವರಾಗಿದ್ದರು. "ಕಾಯಕವೇ ಕೈಲಾಸ"ಎಂದು ತಿಳಿದು ಜೀವನ ನಡೆಸುತ್ತಿದ್ದರು.

**ಮಹಾದಾನಿ**

ಶ್ರೀ ಕುಮಾರಾರಾಧ್ಯರು ಸಾರ್ವಜನಿಕರ ಮಕ್ಕಳು ವಿದ್ಯಾಭ್ಯಾಸ ಮಾಡಿ ಜೀವನದಲ್ಲಿ ಶಿಕ್ಷಣವನ್ನು ಪಡೆದು ವಿದ್ಯಾವಂತರಾಗಬೇಕೆಂದು ಹಂಪಾಪುರದಲ್ಲಿ ಒಂದು ಶಾಲೆಯನ್ನು ಪ್ರಾರಂಭಿಸಿದರು. ಸಾಮಾನ್ಯರು ಆರೋಗ್ಯಪೀಡಿತರಾಗಿದ್ದಾಗ ಔಷಧೋಪಚಾರವು ನಡೆಯಬೇಕೆಂಬ ಉತ್ಕಟ ಹಂಬಲವನ್ನು ಹೊಂದಿದ್ದರಿಂದ ಅವರು ಆಸ್ಪತ್ರೆಯನ್ನು ತೆರೆಯಲು ಶ್ರಮಿಸಿದರು. ಅಷ್ಟೇ ಅಲ್ಲದೆ ಆಸ್ಪತ್ರೆಗೆ ಸ್ಥಳ ದಾನ ಮಾಡಿದ ಹೆಮ್ಮೆಯ ಪುತ್ರರಾದರು. ಸ್ಥಳದಾನದ ಜೊತೆಗೆ ಆಸ್ಪತ್ರೆಯನ್ನು ಕಟ್ಟಲು ಸ್ವತಃ ಮೇಲುಸ್ತುವಾರಿಯನ್ನು ಹೊತ್ತು ಯಶಸ್ವಿಯಾಗಿ ಮುಗಿಸಿದರು.

ಇಷ್ಟೇ ಅಲ್ಲದೆ ಬಡವರ ಮಕ್ಕಳು ವಿದ್ಯಾಭ್ಯಾಸ ಮಾಡಲು ಪಟ್ಟಣ ಪ್ರದೇಶಗಳಲ್ಲಿ ವಾಸಿಸಲು ವಿದ್ಯಾರ್ಥಿನಿಲಯಗಳ ಅವಶ್ಯಕತೆ ಇತ್ತು. ಅಂತಹ ಸಂದರ್ಭದಲ್ಲಿ ಮೈಸೂರಿನಲ್ಲಿ

ಆರಾಧ್ಯರ ಹಾಸ್ಟೆಲ್‌ಗಾಗಿ 25 ಎಕರೆ ಜಮೀನನ್ನು ದಾನವಾಗಿ ನೀಡಿ ಅಲ್ಲಿ ಅಧ್ಯಯನ ನಿರತ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ ವಸತಿಯ ಸೌಕರ್ಯ ಏರ್ಪಡಿಸಿದರು.

ಜೀವನಕ್ಕೊಂದು ಆದರ್ಶ ಬೇಕು. ಆದರ್ಶವಿಲ್ಲದ ಜೀವನ ಜೀವನವಲ್ಲ. ಅದೊಂದು ಹುಚ್ಚು ಹೋರಾಟ. ಭೂಮಿಯ ಮೇಲೆ ವಾಸಿಸುವ ಜೀವಿಗಳಲ್ಲಿ ಶ್ರೇಣಿಗಳಿದ್ದಂತೆ, ಮನುಷ್ಯನ ಆದರ್ಶಗಳಲ್ಲಿಯೂ ತಾರತಮ್ಯವಿದೆ. ಇಂದ್ರಿಯತೃಪ್ತಿ ಸಾಮಾನ್ಯ ಜೀವನದ ಆದರ್ಶವಾದರೆ, ಪ್ರೀತಿಗಾಗಿ ಹಂಬಲಿಸುವುದು ಅದಕ್ಕಿಂತಲೂ ಉನ್ನತವಾದ ಆದರ್ಶವಾಗಿದೆ. ಸೇವೆ ಹಾಗೂ ತ್ಯಾಗಗಳೇ ಜೀವನದ ಪರಮೋಚ್ಛಧ್ಯೇಯಗಳೆಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

ಬೆಳೆಯುತ್ತಿರುವ ಮಕ್ಕಳ ಮನಸ್ಸಿನಲ್ಲಿ ಸ್ವಾವಲಂಬನೆ ಹಾಗೂ ಸೇವೆಗಳೆಂಬ ಮೌಲ್ಯಗಳನ್ನು ಬಿತ್ತುವುದು ತುಂಬಾ ಅವಶ್ಯಕವಾಗಿದೆ.

**ಸಾಮಾಜಿಕ ಬದಲಾವಣೆಯ ಪ್ರೇರಕರು**

ಅಂದಿನ ಕಾಲದಲ್ಲಿ ಶಿಕ್ಷಣ ಸಾಮಾಜಿಕ ಬದಲಾವಣೆಯ ಅಸ್ತ್ರವೆಂಬುದನ್ನು ಅರಿತು ಸಮಾಜದಲ್ಲಿನ ಅಜ್ಞಾನ, ನಿರಕ್ಷರತೆ, ಮೌಢ್ಯ, ಬಡತನಗಳನ್ನು ಕಿತ್ತೊಗೆಯುವ ಸಲುವಾಗಿ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದರು. ಯುವಕರು ವಿದ್ಯಾವಂತರಾಗಿ ಉದಾತ್ತಜೀವನವನ್ನು ಸಾಗಿಸಲು ಪ್ರೇರಣೆ ನೀಡಿದರು.

*ಅಲಬ್ಧ ಮಿಹೇದ್ಧರ್ಮೇಣ ಲಬ್ಧಂ ಯತ್ನೇನ ಪಾಲಯೇತ್*
*ಪಾಲಿತಂ ವರ್ಧಯೇನ್ನಿತ್ಯಂ ವೃದ್ಧಂ ಪಾತ್ರೇಷು ನಿಕ್ಷಿಪೇತ್ || (ಯಾಜ್ಞವಲ್ಕ್ಯ)*

ಧರ್ಮದಿಂದ ಹೊಸದನ್ನು ಸಂಪಾದಿಸಬೇಕು. ಸಂಪಾದಿಸಿದ್ದನ್ನು ಪ್ರಯತ್ನದಿಂದ ರಕ್ಷಿಸಬೇಕು. ರಕ್ಷಿಸಿದ್ದನ್ನು ನ್ಯಾಯ ರೀತಿಯಲ್ಲಿ ಹೆಚ್ಚಿಸಬೇಕು. ಹಾಗೆ ಹೆಚ್ಚಿದ್ದನ್ನು ಯೋಗ್ಯರಿಗೆ ಹಂಚಬೇಕು.

ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿರುವಂತೆ ಉದಾತ್ತವಾದ ಗುಣಗಳನ್ನು ವಿದ್ಯಾರ್ಥಿಗಳಿಗೆ ಸಮಾಜಕ್ಕೆ ತಿಳಿಸಿದರು. ಉದಾತ್ತದೇಣಿಗೆ ನೀಡುವುದರ ಮೂಲಕ ಸಮಾಜದಲ್ಲಿ ಗಣ್ಯ ವ್ಯಕ್ತಿಗಳಾಗಿ ಸೇವೆ ಸಲ್ಲಿಸಿದರು.

**ದೇವಸ್ಥಾನಗಳ ಜೀರ್ಣೋದ್ಧಾರಕರು**

ಮೈಸೂರು ರಾಜರ ಕಾಲದಲ್ಲಿ ಅರಸರಿಗೆ ಮತ್ತು ಹುಜೂರ್ ಕಮೀಷನರುಗಳಿಗೆ (ಆಯುಕ್ತ) ಅರ್ಜಿಯನ್ನು ಸಲ್ಲಿಸಿ ಸುತ್ತಮುತ್ತಲ ಗ್ರಾಮಗಳಲ್ಲಿ ಜೀರ್ಣವಾದ ದೇವಸ್ಥಾನಗಳ ಪುನರುದ್ಧಾರದ ಕ್ರಮ ಕೈಗೊಂಡು ಅದರೊಂದಿಗೆ ರಸ್ತೆನಿರ್ಮಾಣಕಾರ್ಯಗಳಿಗೆ ಸಹಕಾರವನ್ನು ನೀಡಿದರು. ಹೀಗೆ ಇನ್ನು ಹಲವಾರು ಕಾರ್ಯಕ್ರಮಗಳಿಗೆ ಮುಂಚೂಣಿಯಲ್ಲಿ ನಿಂತು ಸಮಾಜಾಭಿವೃದ್ಧಿಕಾರ್ಯ ನಡೆಸಿದ ಧೀಮಂತರು.

*ರಸ್ತೆ ನಿರ್ಮಾಣದ ಹರಿಕಾರರು*

ಮೈಸೂರು ಅರಸರಿಗೆ ಮನವಿಯನ್ನು ಸಲ್ಲಿಸಿ 1927ನೆಯ ಸಾಲಿನಲ್ಲಿ ಕೆಂಡಗಣ್ಣಸ್ವಾಮಿ ಗದ್ದಿಗೆಗೆ ಮೈಸೂರು ಮಾನಂದವಾಡಿ ಹೈ ರೋಡ್, ಮೇಟುಕಲ್ಲುಗುಡ್ಡ, ಉತ್ತರದಲ್ಲಿನ ಗದ್ದುಗೆಗೆ ರಸ್ತೆ ನಿರ್ಮಿಸಲು ಮಹಾರಾಜರಿಂದ ಒಪ್ಪಿಗೆ ಪಡೆದು ರಸ್ತೆ ನಿರ್ಮಿಸಿದರು.

ಹೀಗೆ ಅನೇಕ ಕೆಲಸ ಕಾರ್ಯಗಳನ್ನು ನಡೆಸಿ ಜನ ಜೀವನದ ಅಭಿವೃದ್ಧಿಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಜೀವನದ ಅಂತಿಮ ಕ್ಷಣದವರೆಗೂ ದಾನ-ಧರ್ಮದ ಕೆಲಸ, ಸಾರ್ವಜನಿಕಸೇವೆಯನ್ನು ಮಾಡಿದವರು ಶ್ರೀಕುಮಾರಾರಾಧ್ಯರು. ತಮ್ಮ ಮನೆಗೆ ಬಂದ ಅತಿಥಿಗಳಿಗೆ ವಿನಯಪೂರ್ವಕವಾಗಿ ಸ್ವಾಗತ ನೀಡಿ ಸೇವೆಸಲ್ಲಿಸುವಲ್ಲಿ ಬಹಳ ಸಂತೋಷಪಡುತ್ತಿದ್ದ ವ್ಯಕ್ತಿಯಾಗಿದ್ದರು. ಇವರ ಸೇವೆಯನ್ನು ಅರಿತು ನಡೆಯುವ ಜನಾಂಗ ಇಂದು ಬಹಳ ಕಡಿಮೆ ಎನ್ನಬಹುದು. ಇಂದಿನ ಕಾಲಮಾನದಲ್ಲಿ ಪರಾರ್ಥಕ್ಕಿಂತಲೂ ಸ್ವಾರ್ಥವೇ ತುಂಬಿರುವ ಪರಿಸ್ಥಿತಿಯಲ್ಲಿ ಇವರನ್ನು ನೆನಪಿಸಿಕೊಂಡು ಇವರ ಮಾರ್ಗದರ್ಶನದಲ್ಲಿ ನಾವು ಬದುಕುವಂತಾಗಬೇಕೆಂಬುದು ನಮ್ಮ ಕಳಕಳಿಯಾಗಿದೆ.

* * *

## ಆತ್ಮ

ಆತ್ಮ ಎನ್ನುವುದು ಶಾಶ್ವತ. ಶರೀರಕ್ಕೆ ಅಳಿವೇ ಹೊರತು ಆತ್ಮಕ್ಕೆ ಅಳಿವಿಲ್ಲ. ಶರೀರ ನಶ್ವರ. ಆತ್ಮ ಅಮರ. ಶರೀರವನ್ನು ಶಾಸ್ತ್ರಗಳು ತುಂಡರಿಸಬಲ್ಲವು, ಬೆಂಕಿ ಸುಡಬಲ್ಲದು, ನೀರು ನೆನೆಸಬಲ್ಲದು, ಗಾಳಿ ಒಣಗಿಸಬಲ್ಲದು. ಆದರೆ ಆತ್ಮಕ್ಕೆ ಇಂಥ ಯಾವುದರ ಗೊಡವೆಯೂ ಇಲ್ಲ. ಅಂಜಿಕೆಯೂ ಇಲ್ಲ, ಬೆದರಿಕೆಯು ಇಲ್ಲವೇ ಇಲ್ಲ. ಆತ್ಮವು ತಾನು ನೆಲೆಸಿದ ದೇಹವು ಜೀರ್ಣವಾದಾಗ ಆ ದೇಹವನ್ನು ಬಿಟ್ಟು ಹೊಸದೊಂದು ದೇಹವನ್ನು ಪ್ರವೇಶಿಸುತ್ತದೆ. ದೇಹದಲ್ಲಿ ಆತ್ಮವಿದ್ದರೆ ಆ ದೇಹಕ್ಕೆ ಬೆಲೆ. ಆತ್ಮ ಹೊರನಡೆಯುತ್ತಿದ್ದಂತೆ ಆ ದೇಹವನ್ನು ಮೃತ ಎನ್ನುತ್ತೇವೆ. ಜೀವ ಹೋದ ದೇಹವನ್ನು ಸುಟ್ಟು ಹಾಕುತ್ತೇವೆ. ಇಲ್ಲವೆ ಮಣ್ಣಿನಲ್ಲಿ ಮುಚ್ಚುತ್ತೇವೆ. ಆತ್ಮವನ್ನೇ ಜೀವ ಎನ್ನುತ್ತೇವೆ. ಆತ್ಮವಿಲ್ಲದ ದೇಹವು ಚಿಕ್ಕಾಸಿಗೂ ಬೆಲೆಯಿಲ್ಲದ ಕಸ. ಆತ್ಮಕ್ಕೆ ಎಂದೆಂದೂ ಅಳಿವಿಲ್ಲ. ಆದ್ದರಿಂದಲೇ ನಾವೆಲ್ಲರೂ ವಾಸ್ತವವಾಗಿ ಅಮರರೇ, ನಮ್ಮಗಳ ದೇಹಕ್ಕೆ ಸಾವು, ಅಳಿವು. ಹೀಗಾಗಿ ಸಾವಿಗಾಗಿ ನಾವು ಅಂಜಬೇಕಿಲ್ಲ , ಅಳುಕಬೇಕಿಲ್ಲ. ಯಾರದೇ ಸಾವಿಗೂ ಶೋಕಿಸಲೂ ಬೇಕಿಲ್ಲ. ಇಲ್ಲಿ ಆತ್ಮದ ಅಮರತ್ವವನ್ನು ಹೇಳಿದೆ. ದೇಹ ಮತ್ತು ಆತ್ಮದ ನಡುವಣ ನೈಜ ಸಂಬಂಧ ತಿಳಿದಾತನೇ ಜ್ಞಾನಿ. ಆತ ಯೋಗಿಯೂ ಹೌದು, ಸಾವು ಎನ್ನುವುದು ಹುಟ್ಟಿನಂತೆ ಅತ್ಯಂತ ಸಹಜ ಪ್ರಕ್ರಿಯೆ. ಹುಟ್ಟಿದ ಪ್ರತಿಯೊಬ್ಬರೂ ಒಂದಲ್ಲ ಒಂದು ದಿವಸ ಸಾಯಲೇಬೇಕು. ಸಾವು ದೇಹಕ್ಕೆ ಮಾತ್ರ. ಆತ್ಮಕ್ಕೆ ಅಲ್ಲ. ಹೀಗೆ ಆತ್ಮದ ಅಮರತ್ವವನ್ನು ಸರಳವಾಗಿ ಸೂಚಿಸಿದೆ.

# ಸನಾತನಭಾರತಧರ್ಮ

ಧರ್ಮಾದರ್ಥಃ ಪ್ರಭವತೇ ಧರ್ಮಾತ್ ಪ್ರಭವತೇ ಸುಖಮ್
ಧರ್ಮೇಣ ಲಭ್ಯತೇ ಸರ್ವಂ ಧರ್ಮಸಾರಮಿದಂ ಜಗತ್||

ಧರ್ಮದಿಂದ ಸಂಪತ್ತು, ಧರ್ಮದಿಂದ ಸುಖ, ಧರ್ಮದಿಂದ ಸಕಲಾಭೀಷ್ಟಗಳು ನಮ್ಮ ವಶವರ್ತಿಗಳಾಗುವುವು. ಇಡೀ ಜಗತ್ತು ಧರ್ಮದ ತಳಹದಿಯ ಮೇಲೆ ನಿಂತಿದೆ ಎಂದು ಸೂಚಿಸುತ್ತಿದೆ ಈ ಸುಭಾಷಿತ.

ಭಾರತದ ಜನರು ತಮ್ಮ ಜೀವನದ ಮೌಲ್ಯಾಭಿವೃದ್ಧಿಗಾಗಿ ಅನುಸರಿಸುವ ನಿಯಮಗಳ ಸಂಕಲನಕ್ಕೆ ಧರ್ಮ ಎನ್ನುತ್ತಾರೆ. ನಮ್ಮ ಧರ್ಮದಲ್ಲಿ ಶ್ರದ್ಧೆಗೆ ಮಹತ್ವದ ಸ್ಥಾನ ನೀಡಿದ್ದಾರೆ. ನಾವು ಯಾವುದರಲ್ಲಿ ನಂಬಿಕೆ ಮತ್ತು ವಿಶ್ವಾಸ ಇಟ್ಟಿದ್ದೇವೆಯೋ ಅದನ್ನು ಶ್ರದ್ಧೆ ಎನ್ನುತ್ತಾರೆ. ಅಂತಹ ಶ್ರದ್ಧೆಯಿಂದ ಧರ್ಮದ ಬುನಾದಿ ಆರಂಭವಾಗುತ್ತದೆ. ಧರ್ಮದ ನಿಜವಾದ ಅರ್ಥ ಆಚರಣೆ ಮತ್ತು ಅನುಸಂಧಾನದಲ್ಲಿದೆ. ಧರ್ಮದಲ್ಲಿನ ವಿಶ್ವಬಂಧುತ್ವ, ಸಮನ್ವಯತೆ, ಮಾನವೀಯತೆ, ಅನುಕಂಪ ಮತ್ತು ಕರ್ತವ್ಯಶೀಲತೆ ಮನುಷ್ಯನ ಜೀವನಕ್ಕೆ ಹೊಸ ಆಯಾಮವನ್ನು ಒದಗಿಸುವುದರ ಜೊತೆಗೆ ಉತ್ತಮ ಸಮಾಜವನ್ನು ನಿರ್ಮಾಣಗೊಳಿಸಲು ಪ್ರೇರೇಪಿಸುತ್ತದೆ. ಇಂತಹ ಧರ್ಮದ ಮೇಲೆ ವಿಶ್ವವು ನಿಂತಿದೆ.

ಧರ್ಮ ಎಂದರೆ ಕ್ರಿಯೆ ಅಥವಾ ಕರ್ಮ ಎಂದರ್ಥ. ಪರಮಾತ್ಮನನ್ನು ಪೂಜಿಸುವ ಪದ್ಧತಿಯೇ ಧರ್ಮ. ಆಚರಣೆಯೇ ಧರ್ಮ. ನಮ್ಮಲ್ಲಿನ ಸದ್ಗುಣಗಳೇ ಧರ್ಮ. ನಮ್ಮ ಆಚರಣೆಯಲ್ಲಿನ ಧಾರ್ಮಿಕ ಪ್ರವೃತ್ತಿಯೇ ಧರ್ಮ. ಆತ್ಮಸಾಕ್ಷಿಯಾಗಿ ಮಾಡುವ ಕೆಲಸ ಪವಿತ್ರವಾದದ್ದು. ಶ್ರೇಯಸ್ಸನ್ನು ಕೊಡುತ್ತದೆ. ಅದೇ ಧರ್ಮ. ಅದೇ ಸಮಾಜಕ್ಕೆ ನೀಡುವ ಕೊಡುಗೆ. ನಮ್ಮ ವೇದಶಾಸ್ತ್ರಗಳು ಸೂಚಿಸುವ ಸದಾಚಾರವೇ ಧರ್ಮ. ಈ ಬಗೆಯ ಕ್ರಿಯೆಗಳನ್ನೇ ಧರ್ಮವೆಂದು ಕರೆದಿದ್ದಾರೆ ನಮ್ಮ ಪುರಾತನರು.



**- ಜಿನ್ನಹಳ್ಳಿ ನಾಗಭೂಷಣಾರಾಧ್ಯ**
ಅಧ್ಯಕ್ಷರು
ಶ್ರೀ ರೇವಣ ಸಿದ್ದೇಶ್ವರ ಸ್ವಾಮಿ ಆರಾಧ್ಯ ಸೇವಾ ಸಮಿತಿ (ರಿ.)
ಮೈಸೂರು.
ದೂ. 2362204

ಮನುಷ್ಯ ತನ್ನ ಇಂದ್ರಿಯಾಸಕ್ತಿಯನ್ನು, ಅನುರಾಗತ್ಯಾಗವನ್ನು ಮಾಡಿದರೆ ಧರ್ಮದ ದಾರಿಯನ್ನು ಕಂಡುಕೊಳ್ಳಬಹುದು. ಧರ್ಮವು ನಮ್ಮ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿ ಇರಬೇಕು. ಧರ್ಮದ ಸ್ಪಷ್ಟವಾದ ಸ್ವರೂಪವನ್ನು ಅರಿತು ಅನುಸರಿಸುವವರ ಸಂಖ್ಯೆ ಇನ್ನೂ ಹೆಚ್ಚಬೇಕು. ಆಗ ಜನರು ಧರ್ಮಸೂಕ್ಷ್ಮತೆಗಳನ್ನು ಅರಿತು ಜೀವನಕ್ರಮವನ್ನು ಅಳವಡಿಸಿಕೊಳ್ಳಬಹುದು. ಧರ್ಮಪಾಲನೆಯ ಮೂಲಕ ತಮ್ಮ ವ್ಯಕ್ತಿತ್ವದಲ್ಲಿ ದಿವ್ಯತೆಯನ್ನು ಜಾಗೃತಗೊಳಿಸಿಕೊಳ್ಳಬಹುದು. ದಿವ್ಯವಾದುದನ್ನು, ಸತ್ಯವಾದುದನ್ನು ಬೋಧಿಸುವ ಧರ್ಮ ಮಾತ್ರ ನಿಜಧರ್ಮವಾಗುತ್ತದೆ. ಅದರಿಂದ ಮಾನವ ತನ್ನ ಮನುಷ್ಯತ್ವದ ಹಂತವನ್ನು ಮೀರಿ ದಿವ್ಯತೆಯ ಸ್ಥಿತಿಗೆ ಏರಲು ನೆರವಾಗುತ್ತದೆ.

ಪರಕೀಯಸಂಸ್ಕೃತಿಗೆ ಈಗಿನ ಯುವಪೀಳಿಗೆ ಮಾರುಹೋಗಿದೆ. ಪಾವನವಾದ ಭಾರತೀಯಧರ್ಮ ಮತ್ತು ಸಂಸ್ಕೃತಿಯಂತೆ ನಡೆಯುವುದನ್ನು ಮರೆತು ಕುರುಡನಾಗಿ ಕತ್ತಲೆಯಲ್ಲಿ ಗೊತ್ತು ಗುರಿಯಿಲ್ಲದೆ ಮುಗ್ಗರಿಸುತ್ತ ಮುನ್ನಡೆಯಲು ಮನುಷ್ಯ ಪ್ರಯತ್ನಿಸುತ್ತ ಇದ್ದಾನೆ. ಈ ಪರಿಸರದಿಂದ ಅವನನ್ನು ಎಚ್ಚರಿಸಿ ಉತ್ತಮಮಾರ್ಗದಲ್ಲಿ ನಡೆಸಲು ಸಹಕರಿಸುವುದು ಅತಿ ಅನಿವಾರ್ಯ ಹಾಗೂ ಅವಶ್ಯಕವಾದದ್ದು. ಇದು ನಮ್ಮಲ್ಲಿನ ಹಿರಿಯರ ಮತ್ತು ಧಾರ್ಮಿಕ ಕ್ಷೇತ್ರದ ಜವಾಬ್ದಾರಿಯಾಗಿರುತ್ತದೆ. ಇಂದು ಧಾರ್ಮಿಕಪ್ರವೃತ್ತಿಯುಳ್ಳವರು, ಸಂಸ್ಕೃತಿಪ್ರಿಯರು ಮತ್ತು ಕಾರ್ಯಕರ್ತರ ನೆರವಿನಿಂದ ಶಿಬಿರ, ವಿಚಾರಗೋಷ್ಠಿ, ಧ್ವನಿಸುರುಳಿ ಮುಂತಾದವುಗಳಿಂದ ಸಮಾಜವನ್ನು ಪ್ರಚೋದಿಸುವ ಮತ್ತು ಪ್ರಚಾರ ಮಾಡುವ ಸದುದ್ದೇಶ ಕೈಗೊಳ್ಳುವುದು ಸೂಕ್ತ. ಇದಕ್ಕೆ ಪೂರಕವಾಗಿ ಬಂಧುಗಳು, ಮಹಾಜನತೆ ಸ್ಪಂದಿಸುವುದು, ಸಹಾಯ ಹಸ್ತ ನೀಡಿ ಪ್ರೋತ್ಸಾಹಿಸುವುದು ಅವಶ್ಯಕ. ಪುಸ್ತಕರೂಪದಲ್ಲಿ ಆಸಕ್ತರು ಲೇಖನಗಳನ್ನು ಪ್ರಕಟಿಸುವುದು. ಅದನ್ನು ಯುವಪೀಳಿಗೆಯು ಗೌರವಿಸಿ, ಆಸಕ್ತಿಯಿಂದ ಕೊಂಡು ಓದಿ ಕಾರ್ಯಗತಗೊಳಿಸಲು ಹಿರಿಯರಾದ ಮುಂದಾಳುಗಳು ಮಾರ್ಗದರ್ಶನ ನೀಡಬೇಕು.

ಧಾರ್ಮಿಕ ಆಚರಣೆಗಳಿಂದ ವ್ಯಕ್ತಿಯ ವ್ಯಕ್ತಿತ್ವ ವಿಕಾಸಗೊಳ್ಳುತ್ತದೆ. ಇಂತಹ ವಿಚಾರಗಳಿಂದ ಮನಸ್ಸು ಶುದ್ಧಿಯಾಗುತ್ತದೆ. ತತ್ತ್ವಗಳು, ನೀತಿಗಳು, ಸಂದೇಶಗಳಿಂದ ರೂಪುಗೊಂಡಿರುವ ನಮ್ಮ ಸನಾತನಧರ್ಮಭಾವನೆಗಳು ಸಮಾಜದ ಶಕ್ತಿಯನ್ನು ದೃಢಪಡಿಸುತ್ತವೆ. ಜಗತ್ತು ಮತ್ತು ಬದುಕನ್ನು ಕುರಿತು ನಡೆಸಿದ ಚಿಂತನೆಯೇ ಕೈವಲ್ಯೋಪನಿಷತ್ತು. ನಮ್ಮ ಬದುಕಿನ ಸಂಕಷ್ಟಗಳಿಗೆ ವಿದಾಯ ಹೇಳುವ ಮಾತುಗಳು ಇದರಲ್ಲಿವೆ. ಇದರಿಂದ ಜೀವನ ಪಾವನವಾಗಿ ಹೇಗೆ ಇರಬೇಕು ಎಂಬುದನ್ನು ತೋರಿಸುತ್ತವೆ. ನಮ್ಮ ಆಲೋಚನೆಗಳ ಗುರಿ ಸರ್ವರ ಹಿತ ಕಾಪಾಡಬೇಕು. ಆಂತರಿಕವಾದ ಜ್ವಾಲೆಯೊಂದು ನಿಮ್ಮೊಳಗೆ ಹುದುಗಿದೆ. ಆದರೆ ಕೆಲವು ಸಾರಿ ನೀವು ಆ ಜ್ಞಾನವನ್ನು, ಜ್ವಾಲೆಯನ್ನು ನಂದಿಸಿಬಿಡುವಿರಿ. ಹಾಗಾಗಬಾರದು. ಅದಕ್ಕೆ ಒತ್ತು ಕೊಟ್ಟು, ವಿವೇಚನೆಯಿಂದ ಪುರಸ್ಕರಿಸಬೇಕು.

ಧರ್ಮವಿರುವುದು ಸಮಾಜದ ರಕ್ಷಣೆಗೆ. ಧರ್ಮವಿಲ್ಲದಿದ್ದರೆ ಮಾನವ ಜನಾಂಗ ನಾಶವಾಗುತ್ತದೆ. ಧರ್ಮದಿಂದ ಸಮಾಜದ ವ್ಯಾಪ್ತಿ ವಿಶಾಲವಾಗುತ್ತದೆ. ಮೇಲು-ಕೀಳು ತಾರತಮ್ಯ

ಧರ್ಮಕ್ಕಿಲ್ಲ. ಎಲ್ಲರೂ ಧರ್ಮಸ್ಥರಾದರೆ ಭ್ರಷ್ಟಾಚಾರ, ದರೋಡೆ, ಕೊಲೆ ನಿರ್ಮೂಲನೆಯಾಗುತ್ತದೆ. ಧರ್ಮದ ಸಾರವನ್ನು ಅರಿತರೆ ಸಂಸ್ಕಾರ ಹಾಗೂ ಒಳ್ಳೆಯ ಗುಣಗಳನ್ನು ಮೈಗೂಡಿಸಿಕೊಳ್ಳಬಹುದು. ಧರ್ಮವು ದ್ವೇಷಿಸುವುದನ್ನು ಹೇಳುವುದಿಲ್ಲ. ಮಾನವನ ಅಭಿವೃದ್ಧಿಗೆ ಪೂರಕವಾಗಿರುವ ಧರ್ಮದ ಅಧ್ಯಯನ ಮಾಡಲು ಎಲ್ಲರ ಮನಸ್ಸು ಮುಕ್ತವಿರಬೇಕು. ಮತ ನಮ್ಮನ್ನು ಬೇರ್ಪಡಿಸಿದರೆ, ಧರ್ಮ ಎಲ್ಲರನ್ನು ಒಂದುಗೂಡಿಸುತ್ತದೆ. ಧರ್ಮ ವಿಶಾಲ. ಮತ ಸೀಮಿತ. ಧರ್ಮ ಎಲ್ಲ ಸಮಾಜಗಳಿಗೂ ತಳಹದಿ. ಧರ್ಮ ಎನ್ನುವುದು ಅಸದೃಶವಾಗಿದೆ. ಧರ್ಮ ವಿಶ್ವದ ನೈತಿಕತೆಗೆ ಸುಗಮಮಾರ್ಗವಾಗಿದೆ. ನಮ್ಮ ಧರ್ಮ ಮತ್ತು ಮತಗಳಿಂದ ಮಾತ್ರ ನಮ್ಮ ಸಂಸ್ಕೃತಿ ಉಳಿಯಲು, ಬೆಳೆಯಲು ಸಾಧ್ಯ.

ಧರ್ಮವಿಲ್ಲದ ಬಾಳಿಗೆ ನಮ್ಮಲ್ಲಿ ಬೆಲೆ ಇಲ್ಲ. ಧರ್ಮ ನಮ್ಮನ್ನು ಕಾಯೇನ - ವಾಚಾ-ಮನಸಾ ಪರಿಶುದ್ಧಿಗೊಳಿಸುವ ಸ್ವಶ್ರಮಣೆ ಇದ್ದಂತೆ. ನಮ್ಮ ಸನಾತನಧರ್ಮ ಅಂತರಂಗ-ಬಹಿರಂಗ ಎರಡನ್ನು ಶುದ್ಧಿಗೊಳಿಸುವ ಮತ್ತು ಶೋಧಿಸುವ ಜವಾಬ್ದಾರಿಯ ವಿಜ್ಞಾನಿಯಿದ್ದಂತೆ. ಧರ್ಮ ನಮ್ಮ ಕೈಯಲ್ಲಿ, ಮೈಯಲ್ಲಿಮತ್ತು ಮನಸ್ಸಿನಲ್ಲಿ ತುಂಬಿರಬೇಕು. ಧರ್ಮವನ್ನು ನಾವು ಕಾಯಕವಾಗಿ, ಚಾರಿತ್ರ್ಯವಾಗಿ ಮತ್ತು ಧ್ಯಾನ-ಚಿಂತನಗಳನ್ನಾಗಿ ಧರಿಸಿಕೊಂಡಿರಬೇಕು. ಧರ್ಮ ಬರಿ ಪ್ರವಚನ, ಉಪನ್ಯಾಸ, ಭಾಷಣಗಳಾಗಿ ಹರಿದುಹೋಗುವುದಕ್ಕಿಂತ ಆಚರಣೆಯಲ್ಲಿ ನೆಲೆಗೊಳ್ಳಬೇಕು. ನಾವು ಧರ್ಮವನ್ನು ಅಂಗಳದಲ್ಲಿ ನಿಲ್ಲಿಸಿದ್ದೇವೆ. ಅದನ್ನು ನಮ್ಮ ಅಂತರಂಗಕ್ಕೆ ಬರಮಾಡಿಕೊಳ್ಳುವಂತಾಗಬೇಕು. ಧರ್ಮ ಎಂದೂ ಅನ್ನವಾಗಬೇಕು, ಉಪ್ಪಿನಕಾಯಿಯಾಗಬಾರದು. ಧರ್ಮದಿಂದ ಹೊಟ್ಟೆ ತುಂಬಬೇಕು, ಅದು ತಾಂಬೂಲದಂತೆ ಉಪಚಾರ ಸಾಮಾಗ್ರಿಯಾಗಬಾರದು. ಇದನ್ನೆಲ್ಲ ನೋಡಿದಾಗ ಧರ್ಮ ಎಂಬುದು ಒಂದು ಜೀವನಮಾರ್ಗ. ಧಾರ್ಮಿಕ ಮೂಲದಿಂದ ಬಂದ ಸಾಹಿತ್ಯ ಅಲೌಕಿಕವೆನಿಸಿದರೂ ಬದುಕಿಗೆ ಹತ್ತಿರವಾದದ್ದು. ಜೀವನದಲ್ಲಿ ಅಧ್ಯಾತ್ಮ ಹಾಸುಹೊಕ್ಕಾಗಿ ಸಮ್ಮಿಳಿತ ಕಂಡುಬರುತ್ತದೆ.

ಅಹಿಂಸೆ ಭಾರತೀಯ ಧರ್ಮ ಕಾಯ್ದುಕೊಂಡು ಬಂದ ಸಾಮಾಜಿಕ ಮೌಲ್ಯ. "ಅಹಿಂಸಾ ಪರಮೋ ಧರ್ಮ" ಎಂಬಂತೆ. ಧರ್ಮದ ವಿವಿಧ ಮುಖಗಳನ್ನು, ಧರ್ಮಸಂಗ್ರಹದ ಮಾರ್ಗವನ್ನು ಉಳಿಸುವಾಗ ಅಹಿಂಸೆಗೆ ಮೊದಲ ಆದ್ಯತೆ. ಒಬ್ಬರ ಮನಸ್ಸು ನೋಯಿಸಿ ನಾವು ಧರ್ಮವನ್ನು ಸಾಧಿಸಲು ಸಾಧ್ಯವಿಲ್ಲ. ಜನಸಾಮಾನ್ಯರು ಇಂತಹ ಧಾರ್ಮಿಕ ಆಚರಣೆಗಳಿಂದ ಶಾಂತಿ, ನೆಮ್ಮದಿಗಳನ್ನು ಪಡೆಯುತ್ತಾರೆ. ವಿಶ್ವಾಸ, ನಂಬಿಕೆಗೆ ಶ್ರದ್ಧೆ ಎನ್ನುತ್ತಾರೆ. ಆತ್ಮಶ್ರದ್ಧೆ, ಪರಮಾತ್ಮ ಶ್ರದ್ಧೆ ಇರಬೇಕು. ನಿರ್ವಿಶೇಷಬ್ರಹ್ಮಭಾವವನ್ನು ಹೊಂದುವುದೇ ಮುಕ್ತಿ. ನಮ್ಮ ಧರ್ಮದ ವೈಶಿಷ್ಟ್ಯವೆಂದರೆ ಆತ್ಮಚೈತನ್ಯ ಹೊಂದುವುದು. ವೇದಗಳು ಸನಾತನ ಧರ್ಮದ ಮೂಲಗಳು. ಧರ್ಮದ ಮೂಲಸಿದ್ಧಾಂತವನ್ನು ಆಧುನಿಕ ಬದುಕಿನಲ್ಲಿ ಕಾಣಬಹುದು. ಸಾಮಾಜಿಕ ಹೊಂದಾಣಿಕೆ ಧರ್ಮದ ಗುಣ, ವಿಶ್ವಧರ್ಮಗಳೆಲ್ಲವೂ ಮಾನವ ಕುಲದ ಒಳಿತನ್ನು ಬಯಸುತ್ತವೆ. ಆದರೂ ಭಾರತದ ಸನಾತನ ಧರ್ಮವೆಂದರೆ ಉತ್ತಮವೆನಿಸಿಕೊಂಡು ಬಂದಿದೆ. ಈ ಧರ್ಮದ ಗುರಿಯಿಂದ ಸಾತ್ವಿಕಜನಸಮುದಾಯ ನಿರ್ಮಾಣಗೊಳ್ಳುತ್ತದೆ.

ಧರ್ಮದ ನಿಜವಾದ ಅರ್ಥವು ಆಚರಣೆ ಮತ್ತು ಅನುಸಂಧಾನದಲ್ಲಿದೆ. ತಾನು ಜನ್ಮವೆತ್ತಿದ ಧರ್ಮವನ್ನು ತನ್ನ ಜನ್ಮದಾತೆಗಿಂತಲೂ ಭಯ, ಭಕ್ತಿಯಿಂದ ಗೌರವಿಸಬೇಕು. ಧರ್ಮದ ದಿಕ್ಸೂಚಿ ಇಲ್ಲದಿದ್ದರೆ ಬದುಕಿಗೆ ಅರ್ಥವೇ ಇಲ್ಲ. ಧರ್ಮದ ಬಗ್ಗೆ ವಿಶೇಷ ಗಮನ ಕೊಟ್ಟ ಭಾರತದೇಶ ಪ್ರಪಂಚದಲ್ಲಿ ಅಗ್ರಗಾಮಿ ದೇಶವಾಗಿದೆ. ಧರ್ಮದ ಬುನಾದಿ ಬಲಹೀನವಾದರೆ ಮನುಕುಲದ ಮನೆ ಮತ್ತು ಮನವು ಬಿರುಕು ಬಿಡಬಹುದು, ಕುಸಿಯಬಹುದು ಎಚ್ಚರಿಕೆ! ಮಾನವ ಎಚ್ಚರಿಕೆ!!

**"ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ"**

* * *

## ದಾನ

ನಮ್ಮಲ್ಲಿನ ಉತ್ತಮ ಭಾವನೆ, ಕ್ರಿಯೆ ಹಾಗೂ ವಸ್ತುಗಳನ್ನು ಮನಸಾರೆ ಕೊಡುವುದಕ್ಕೆ ದಾನವೆನ್ನುತ್ತಾರೆ.

ದಾನ ಎಂದರೆ ಬರಿ ಹಣ ಕೊಡುವುದೆಂದಲ್ಲ. ಹಸಿದವನಿಗೆ ತುತ್ತು ಅನ್ನ ಹಾಕುವುದು. ವೈದ್ಯಕೀಯ ಪ್ರಾಣದಾನ. ನಮ್ಮ ಗಳಿಕೆಯಲ್ಲಿ ಬಯಸಿ ಬಂದವರಿಗೆ ಕಿಂಚಿತ್ತಾದರೂ ನೀಡುವುದು. ಸಾಕಿದ ಪಶು, ಪಕ್ಷಿಗಳನ್ನು ಕೊಡುವುದು. ಬೆಳೆದ ಬೆಳೆಸಿನಲ್ಲಿ ಸ್ವಲ್ಪ ನೀಡುವುದು. ದೇವ ನೀಡಿದ ಶರೀರದ ಭಾಗಗಳನ್ನು ಹೀನರಿಗೆ ನೀಡುವುದು. ಮನಸ್ಸಿನಲ್ಲಿ ಮೂಡಿ ಬಂದ ಸಲಹೆಗಳನ್ನು ಪರರಿಗೆ ಕೊಡುವುದು. ಕಷ್ಟದಲ್ಲಿರುವವರಿಗೆ ಮಾರ್ಗ ಸೂಚಿಸುವುದು ಉಚಿತವಾದ ದಾನವಾಗುತ್ತದೆ.

ತೊಂದರೆಯಲ್ಲಿರುವವರಿಗೆ ಭೂಮಿ, ಮನೆ, ಧನ, ಧಾನ್ಯ, ಆರೋಗ್ಯ ಭಾಗ್ಯವನ್ನು ಕೊಡುವುದು. ಮತ್ತು ಕೊಡುವವರನ್ನು ತೋರಿಸುವುದು ಸಹ ದಾನವಾಗುತ್ತದೆ.

ಈ ಮೇಲಿನ ಅಂಶಗಳನ್ನು ಚಿಂತಿಸಿ ನಮ್ಮಲ್ಲಿರುವುದನ್ನು ಇತರರಿಗೆ ಅಂದರೆ ತೊಂದರೆಯಲ್ಲಿ ಸಿಲುಕಿದವರಿಗೆ ದಾನವಾಗಿ ಕೊಡುವ ನಡೆವಳಿಯನ್ನು ಬೆಳೆಸಿಕೊಂಡವರು ಉತ್ತಮ ಮಾನವರಾಗಿ ಭೂಮಿಯಲ್ಲಿ ಬಾಳಿನ ಸಾರ್ಥಕ್ಯ ಕಾಣುತ್ತಾರೆ. ಅಂತಹವರನ್ನು ಉತ್ತಮ ಮನುಷ್ಯರೆಂದು ನಮ್ಮ ಋಷಿಮುನಿಗಳು ತಿಳಿಸಿರುತ್ತಾರೆ. ಅಂತಿಮವಾಗಿ ನಾವು ಶಾಂತಿ ಮತ್ತು ಶುಭಗಳೆರಡನ್ನು ದಾನದ ಮೂಲಕ ನೀಡಬಹುದು ಹಾಗೂ ಪಡೆಯಬಹುದು. ದಾನಕ್ಕಿಂತ ದೊಡ್ಡ ತಪಸ್ಸು ಬೇರೊಂದಿಲ್ಲ.

# ಮಹಾಚೇತನ

ಜನಸೇವೆ ಮಾಡಲು, ಜನೋಪಕಾರ ಮಾಡಲು, ಹಣಬೇಕು ಎನ್ನುವವರಿದ್ದಾರೆ; ಅಧಿಕಾರ ಬೇಕು ಎನ್ನುವವರಿದ್ದಾರೆ. ಇದ್ಯಾವುದೂ ಇಲ್ಲದೆ ಅಂಥ ಕೆಲಸಗಳನ್ನು ಮಾಡವುದಾದರೂ ಹೇಗೆ? - ಎಂದು ಅಸಹಾಯಕತೆ ವ್ಯಕ್ತಪಡಿಸುವವರಿದ್ದಾರೆ. ಮನಸ್ಸಿದ್ದಲ್ಲಿ ಮಾರ್ಗ ಎಂಬ ಮಾತು ಗೊತ್ತಿದ್ದರೂ ಗೊತ್ತಿಲ್ಲದವರಂತೆ ನಟಿಸಿ ಒಳ್ಳೆಯವರೆನ್ನಿಸಿಕೊಂಡು ಬಿಡುತ್ತಾರೆ. ಅಂಥವರಿಂದ ಯಾರಿಗೂ ಒಳ್ಳೆಯದಾದದ್ದಿಲ್ಲ. ಸಮಾಜದಲ್ಲಿ ಅಂಥವರ ಸಂಖ್ಯೆಯೇ ಹೆಚ್ಚು. ಆದ್ದರಿಂದ ಗುಂಪಿನಲ್ಲಿ ಗೋವಿಂದ ಎಂದೋ, ಹನ್ನೊಂದರಲ್ಲಿ ಇನ್ನೊಂದು ಎಂದೋ ಕರಗಿಹೋಗುತ್ತಾರೆ, ಕಾಣೆಯಾಗುತ್ತಾರೆ. ನನ್ನನ್ನು ಯಾರೂ ಗುರುತಿಸಲಿಲ್ಲವಲ್ಲ ಎಂದು ಜೀವನದುದ್ದಕ್ಕೂ ಕೊರಗಿ ಕೊರಗಿ ಸಾಯುತ್ತಾರೆ. ಅಂಥವರಿಗಿಂತ ಭಿನ್ನವಾಗಿ ಇನ್ನೊಂದು ಬಗೆಯ ಜನ ಇರುತ್ತಾರೆ. ಇವರು ಅಷ್ಟಿಷ್ಟು ಕೆಲಸ ಮಾಡುತ್ತಾರೆ ನಿಜ. ಅವರು ಮಾಡಿದ ಸಣ್ಣಪುಟ್ಟ ಕೆಲಸಗಳನ್ನೆ ಭೂತಗನ್ನಡಿಯ ಮೂಲಕ ದೊಡ್ಡದನ್ನಾಗಿ ಪರಿವರ್ತಿಸಿ ಸಮಾಜಕ್ಕೆ ಕಾಣಿಸಬೇಕು ಎಂದು ನಿರೀಕ್ಷಿಸುತ್ತಾರೆ.

ಈ ಎರಡೂ ಬಗೆಯ ಜನ ಸಮಾಜದಲ್ಲಿ ಹೆಚ್ಚು ದಿನ ಬಾಳಲಾರರು. ಅವರು, ಹಾಗೂ ಅವರ ನಿರೀಕ್ಷೆಗಳು, ಹಗುರಾನಿಲ ತುಂಬಿದ ಬಲೂನುಗಳಂತೆ, ಹಾರಿಹೋಗುತ್ತವೆ. ಆದರೆ ಸಮಾಜದಲ್ಲೊಂದು ಗಟ್ಟಿಕೆಲಸಮಾಡಿ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ, ಎಲೆಮರೆಯ ಕಾಯಿಯಂತೆ ನಿಸ್ಪೃಹ ಸೇವೆ ಸಲ್ಲಿಸಿದವರು ಜನಮಾನಸದಲ್ಲಿ ಶಾಶ್ವತವಾಗಿ ಉಳಿದುಹೋಗುತ್ತಾರೆ. ಹಾಗೆ ಉಳಿಯಬೇಕೆಂಬುದೇನೂ ಅವರ ನಿರೀಕ್ಷೆ ಆಗಿರದಿದ್ದರೂ, ಸಹಜವಾಗಿಯೇ ಅವರು ಕೀರ್ತಿವಂತರಾಗಿಬಿಡುತ್ತಾರೆ. ಹಾಗಾಗುವಂತೆ ಮಾಡುವ



**ಕ್ಯಾತನಹಳ್ಳಿ ರಾಮಣ್ಣ**
ಅಜ್ಜಿಹೊತ್ತಿಗೆ
ಬೋಗಾದಿ ಗ್ರಾಮ
ಮೈಸೂರು
ದೂರವಾಣಿ - 2598399

ಶಕ್ತಿಯು ಅವರು ಸಲ್ಲಿಸಿದ ಸೇವೆಗಳಿಗೆ ಇರುತ್ತದೆ. ಸಾಮಾನ್ಯ ಚೇತನಗಳಿಂದ ಅಂಥ ಸಾಧನೆ, ಅಂಥ ಚಿರಂಜೀವಿತ್ವ ಸಾಧ್ಯವಾಗುವುದಿಲ್ಲ. ಒಂದು ಚೇತನ ಸಾಮಾನ್ಯವೋ ಅಸಾಮಾನ್ಯವೋ ಎಂದು ನಿರ್ಧಾರವಾಗುವುದು ಅವರ ಬದುಕಿನಿಂದ, ಅವರು ಬದುಕಿದ ರೀತಿಯಿಂದ ಮಾತ್ರ ಸಾಧ್ಯ. ಅಂಥವರನ್ನು ಮುಂದಿನ ಪೀಳಿಗೆಯು *'ಮಹಾಚೇತನ'*ಎಂದು ಗುರುತಿಸುತ್ತದೆ.

ಹಾಗೆ, ಸ್ವಶಕ್ತಿಯಿಂದ, ಸ್ವಯಂ ಸಾಧನೆಗಳಿಂದ , ನಿಸ್ಪೃಹಸೇವೆಗಳಿಂದ, ದಾನಗಳಿಂದ, ಪರೋಪಕಾರಗಳಿಂದ, 'ಮಹಾಚೇತನ'ವಾಗಿ ನಮಗಿಂದು ಕಾಣಿಸುತ್ತಿರುವವರು ಹೆಗ್ಗಡದೇವನಕೋಟೆ ತಾಲ್ಲೂಕಿನ ಹಂಪಾಪುರ ಹೋಬಳಿಗೆ ಸೇರಿದ ಜಿನ್ನಹಳ್ಳಿಯ ಗುರುಮಠದ ಶ್ರೀ ಆರ್. ಕುಮಾರಾರಾಧ್ಯರು. ಅವರೀಗ ನಮ್ಮ ನಡುವೆ ಇಲ್ಲದಿದ್ದರೂ, ಹಲವು ಕ್ಷೇತ್ರಗಳಲ್ಲಿನ ಅವರ ಸಾಧನೆಗಳು, ಹಾಗೂ ಅವುಗಳ ಫಲ, ನಮ್ಮ ಕಣ್ಣೆದುರಿಗಿವೆ. ಹಣವೂ ಇಲ್ಲದೆ, ಅಧಿಕಾರವೂ ಇಲ್ಲದೆ, ಜನಸೇವೆ ಮಾಡಬಹುದು ಎಂಬುದಕ್ಕೆ, ಜನೋಪಕಾರ ಮಾಡಬಹುದು ಎಂಬುದಕ್ಕೆ ಜೀವಂತ ಉದಾಹರಣೆಯಾಗಿ ಕುಮಾರಾರಾಧ್ಯರ ಬದುಕು ನಮ್ಮ ನಡುವೆ ಇದೆ.

21-6-1885 ರಿಂದ 17-2-1961ರವರೆಗೆ ಸುದೀರ್ಘವಾದ ಎಪ್ಪತ್ತಾರು ವರ್ಷಗಳ ತುಂಬುಜೀವನ ನಡೆಸಿದ ಶ್ರೀ ಕುಮಾರಾರಾಧ್ಯರ ತಂದೆ ಶ್ರೀ ರೇವಣಾರಾಧ್ಯರು ಹಾಗೂ ತಾಯಿ ಬಸವಾಜಮ್ಮನವರು. ಆ ಹಿರಿಯ ಸಾತ್ವಿಕ ಚೇತನಗಳ ಸಾರಸರ್ವಸ್ವವಾಗಿ ರೂಪುಗೊಂಡು ಸಾತ್ವಿಕತೆಯೇ ಮೈದುಂಬಿಕೊಂಡ ಮಹಾಚೇತನವೇ ದಿವಂಗತ ಆರ್. ಕುಮಾರಾರಾಧ್ಯರು.

"ಮಠ" ಎಂದ ಕೂಡಲೇ ಎಂಥವರ ಮನಸ್ಸಿನಲ್ಲೂ ಭಕ್ತಿಭಾವ ಸಂಚರಿಸುವುದು ಸಹಜ. ಮಠಮಾನ್ಯನಗಳನ್ನು ಟೀಕಿಸುವವರು ಕೂಡ ಅಲ್ಲಿನ ಶಿಸ್ತು, ಅನ್ನದಾಸೋಹ, ಅಕ್ಷರದಾಸೋಹ, ಮುಂತಾದುವುಗಳ ಬಗ್ಗೆ ಒಪ್ಪಿಕೊಳ್ಳುವುದು ಅನಿವಾರ್ಯ. ಅನ್ಯಧರ್ಮಗಳ ಮಠಗಳಂತೆ ಹಿಂದೂ ಮಠಗಳಲ್ಲಿ ಸಂಕುಚಿತ ಮನೋಭಾವಗಳಾಗಲಿ ಜಾತ್ಯಂಧತೆಯಾಗಲಿ ಇರುವುದಿಲ್ಲ ಎಂಬುದು ಇವತ್ತಿಗೂ ನಿಚ್ಚಳವಾಗಿ ಕಾಣುವ ಸತ್ಯ.

ಶ್ರೀ ಕುಮಾರಾರಾಧ್ಯರ ಬಗ್ಗೆ ಹೇಳುತ್ತಿದ್ದವನು ಇದ್ದಕ್ಕಿದ್ದಹಾಗೆ ಮಠಗಳ ಬಗ್ಗೆ ಹೇಳಲು ತೊಡಗಿದ್ದಕ್ಕೆ ಕಾರಣವಿದೆ. ಸಂಪ್ರದಾಯಸ್ಥ ಸದ್ಗೃಹಸ್ಥ ದಂಪತಿಗಳ ಹೊಟ್ಟೆಯಲ್ಲಿ ಜನ್ಮತಳೆದ ಶ್ರೀ ಕುಮಾರಾರಾಧ್ಯರಿಗೆ ಆ ಆವರಣದೊಳಗಿಂದ ಹೊರಬಂದು ಸಾರ್ವಜನಿಕಸೇವೆಯಲ್ಲಿ ತೊಡಗಿಸಿಕೊಳ್ಳಲು ಕಾರಣವೇನು? *ಸರ್ವೇ ಜನಾಃ ಸುಖಿನೋ ಭವಂತು* -ಎಂಬ ವಿಶಾಲ ಮನೋಭಾವ ಹೇಗೆ ಮೂಡಿತು? - ಎಂಬ ಪ್ರಶ್ನೆಗಳ ಬೆನ್ನು ಹತ್ತಿ ಹೋದಾಗ ನಾನು ತಲುಪಿದ್ದು ಜಿನ್ನಹಳ್ಳಿಯ ಆ ಪುರಾತನ ಭವ್ಯಗುರುಮಠವನ್ನು. ಶ್ರೀ ಕುಮಾರಾರಾಧ್ಯರಿಗೆ ಚಿಕ್ಕಂದಿನಲ್ಲಿಯೇ ಮಠದ ಸಂಪರ್ಕವಿತ್ತು. ಅವರ ವಯಸ್ಸಿನವರ, ಹಲವು ಜಾತಿಗಳ, ಹಲವು ಗೆಳೆಯರು, ಅವರಿಗೆ ದಕ್ಕಿದ್ದು ಹಾಗೂ ಅವರ ದೃಷ್ಟಿ ಸಾಂಪ್ರದಾಯಿಕ ಬಂಧನವನ್ನು ಕಳಚಿಕೊಂಡು ವಿಶಾಲವಾಗುತ್ತ ನಡೆದದ್ದು ಆ ಮಠದ ವಿವಿಧ ಜಾತಿಗಳವರ ಸಂಪರ್ಕದಿಂದ. ಆ ಆಧ್ಯಾತ್ಮಿಕ ವಾತಾವರಣದ ಪ್ರಭಾವದಿಂದ ಬಾಲಕ ಕುಮಾರಾರಾಧ್ಯರ ಮನಸ್ಸು ಬಾಲ್ಯಸಹಜ ತುಂಟತನಗಳಿಂದ ಬಾಲಿಶ

ಗುಣಗಳಿಂದ ದೂರವೇ ಉಳಿದದ್ದು ಉಜ್ವಲ ಭವಿಷ್ಯವೊಂದರ ಮುನ್ಸೂಚನೆಯಾಗಿತ್ತು. ಇತರರ ಕಷ್ಟಸುಖಗಳನ್ನು, ಕಾರ್ಪಣ್ಯದ ಭೀಕರ ಬದುಕಿನ ಬವಣೆಗಳನ್ನು , ಹೀಗೆ ಎಲ್ಲಾ ಜನಾಂಗಗಳವರ ಒಡನಾಟದಿಂದ ಬಾಲ್ಯದಲ್ಲಿಯೇ ಮನಸ್ಸಿನ ತುಂಬ ತುಂಬಿಕೊಂಡ ಕುಮಾರಾರಾಧ್ಯರು, ಎಲ್ಲರ ಒಳಿತಿಗಾಗಿ ಚಿಂತಿಸುವುದನ್ನು ಬಾಲ್ಯದಲ್ಲಿಯೇ ರೂಢಿಸಿಕೊಂಡಿದ್ದರು. ಈ ಎಲ್ಲ ಕಾರಣಗಳಿಂದಾಗಿ ಮುಂದೆ ತಮ್ಮ ಶ್ರಮವನ್ನೆಲ್ಲ ಎಲ್ಲ ವರ್ಗದ ಜನರಿಗಾಗಿ ಮೀಸಲಿಡಲು ಸಾಧ್ಯವಾಯಿತು.

ಆ ಮಠದ ಸಂಪರ್ಕದಲ್ಲಿದ್ದಾಗಲೆ ರಾಜಪರಿವಾರ ಸಮುದಾಯದವರಾದ ತೋಪನಾಯಕ, ಪ|| ಬಸಪ್ಪನವರು, ಸಾಹುಕಾರ್ ಸೈಯದ್ ರಹೀಮ್‌ಸಾಬ್‌ರವರು, ಬಾಣಾಸುರ ಹುಚ್ಚೇಗೌಡರು ಮುಂತಾದ ಸಮಾನಮನಸ್ಕ ಗೆಳೆಯರು, ಸಹಪಾಠಿಗಳು ಕುಮಾರಾರಾಧ್ಯರಿಗೆ ಇದ್ದರು. ಊರಿನಲ್ಲಿ ತಮ್ಮ ವಯಸ್ಕರ ನಡುವೆ ಸಂಭವಿಸುತ್ತಿದ್ದ ಸಣ್ಣಪುಟ್ಟ ಜಗಳಗಳನ್ನು ಬಿಡಿಸುತ್ತಿದ್ದರು. ತಪ್ಪು ಯಾರದೆಂದು ಚರ್ಚಿಸಿ ತಪ್ಪಿತಸ್ಥರಿಗೆ ಅವರ ತಪ್ಪುಗಳನ್ನು ಮನಗಾಣಿಸುವುದರ ಮೂಲಕ ಅಂಥವರ ಮನ ಪರಿವರ್ತಿಸುತ್ತಿದ್ದರು. ಇಂಥ ಹಲವು ಸಂದರ್ಭಗಳನ್ನು ಗಮನಿಸಿದ ಊರಿನ ಹಿರಿಯರು ಕುಮಾರಾರಾಧ್ಯರನ್ನು ಬಾಲ್ಯದಲ್ಲಿಯೆ ಗುರುತಿಸಿ ಗೌರವಿಸಲು ತೊಡಗಿದ್ದರು. ಇದರಿಂದ ಗೆಳೆಯರ ಗುಂಪಿನಲ್ಲಿ ಸಹಜವಾಗಿಯೆ ಕುಮಾರಾರಾಧ್ಯರ ಮಾತಿಗೆ, ಸಲಹೆಗೆ ಮನ್ನಣೆ ದೊರೆಯುತ್ತಿತ್ತು.

ಹೀಗೆ, ಬೆಳೆಯುವ ಪೈರಿನ ಗುಣ ಮೊಳಕೆಯಲ್ಲೆ ಕಾಣುವುದೆಂಬ ನಾಣ್ನುಡಿಯಂತೆ, ನ್ಯಾಯದ ಪರ ನಿಲ್ಲುವ, ಅನ್ಯಾಯದ ವಿರುದ್ಧ ಸಿಡಿದೇಳುವ ಲಕ್ಷಣಗಳು ಕಮಾರಾರಾಧ್ಯರ ಬಾಲ್ಯದಲ್ಲಿಯೆ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಅನ್ಯಾಯದ ವಿರುದ್ಧ ಸಿಡಿದೇಳುವ-ಎಂಬ ಮಾತನ್ನು ಕೋಪದ ಬೆಂಕಿಯಾಗಿ ಭಾವಿಸಲು ಅವಕಾಶವಿರಲಿಲ್ಲ. ಹಾಗೆ ಸಿಡಿದೇಳುವ ರೀತಿಯಲ್ಲಿ ಕೂಡ ಕುಮಾರಾರಾಧ್ಯರು ಸಾತ್ತ್ವಿಕತೆಯ ಎಲ್ಲೆಯನ್ನು ಮೀರುತ್ತಿರಲಿಲ್ಲ. ಅವರ ಈ ಬಗೆಯ ಗುಣದಿಂದ ಅವರ ಬಗ್ಗೆ ಹೆಚ್ಚಿನ ಗೌರವಭಾವನೆ ಉಂಟಾಗುತ್ತಿತ್ತು.

ಅಪ್ಪಟ ಸಂಪ್ರದಾಯಸ್ಥ ವಾತಾವರಣದಲ್ಲಿ ಹುಟ್ಟಿ ಬೆಳೆದಿದ್ದರೂ, ಮಠದ ಸಂಪರ್ಕದಿಂದ ಹಾಗೂ ಎಲ್ಲ ಜನಾಂಗಗಳ ಜನಗಳ ಸಂಪರ್ಕದಿಂದ, ಕುಮಾರಾರಾಧ್ಯರ ದೃಷ್ಟಿ ವಿಕಸನಗೊಳ್ಳುತ್ತಲೇ ಹೋಯಿತು. ದೈವಭಕ್ತಿಯು ಸಹಜವಾಗಿಯೇ ರಕ್ತಗತವಾಗಿ ಬಂದದ್ದು. ಅದರ ಜೊತೆಗೆ ವಿವಿಧ ಬಗೆಯ ಬಡಜನರ ಸುಖದುಃಖಗಳಲ್ಲಿ ಭಾಗಿಯಾಗುತ್ತ, ಸ್ಪಂದಿಸುತ್ತ, ಕೈಲಾದ ಸಹಾಯ ಸಹಕಾರ ನೀಡುತ್ತ, ಬಂದದ್ದರ ಫಲವಾಗಿ ಸಾಮಾಜಿಕ ಪ್ರಜ್ಞೆ ವೃದ್ಧಿಸುತ್ತ, ಮನಸ್ಸು ಮಾಗತೊಡಗಿತು. ಜೊತೆಗೆ ದೇಶಭಕ್ತಿಯೂ ಅವರನ್ನು ಆವರಿಸಿಕೊಂಡಿತು. ಈ ಎಲ್ಲವುಗಳ ಪರಿಣಾಮ ಏನಾಯಿತೆಂದರೆ, ಸಾರ್ವಜನಿಕ ಕ್ಷೇತ್ರಗಳ ಕುಂದುಕೊರತೆಗಳು ಕಣ್ಣಿಗೆ ಬೀಳತೊಡಗಿದುವು.

ಜ್ಞಾನಮಾರ್ಗಕ್ಕೆ ಸೇತುವೆನಿಸುವ ಒಂದು ಶಾಲೆ ತಮ್ಮ ಹಳ್ಳಿಯಲ್ಲಿ ಇಲ್ಲದಿರುವುದು ದೊಡ್ಡ ಕೊರತೆಯಾಗಿ ಅವರಿಗೆ ಕಾಣಿಸಿತು. ಆ ನಿಟ್ಟಿನಲ್ಲಿ ಪ್ರಯತ್ನಿಸಿ, ಸತತ ಶ್ರಮದಿಂದ, ಜಿನ್ನಹಳ್ಳಿಗೊಂದು ಶಾಲೆಯನ್ನು ತರುವಲ್ಲಿ ಯಶಸ್ವಿಯಾದರು. ಈ ಶಾಲೆಯು ಬೌದ್ಧಿಕ ಆರೋಗ್ಯಕ್ಕೆ ದಾರಿಯಾದರೆ, ಭೌತಿಕ ಆರೋಗ್ಯಕ್ಕೆ ಒಂದು ಆಸ್ಪತ್ರೆಯಿಲ್ಲವಲ್ಲ ಎಂಬ ಕೊರಗು ಕಾಡತೊಡಗಿತು, ಮತ್ತೆ ಹೋರಾಟ ಮುಂದುವರಿಸಿದರು. ಹೋಬಳಿ ಕೇಂದ್ರವಾದ ಹಂಪಾಪುರದಲ್ಲಿ ಆಸ್ಪತ್ರೆಯೊಂದು ಅಸ್ತಿತ್ವಕ್ಕೆ ಬರುವವರೆಗೆ ಅವರ ಹೋರಾಟ ನಿಲ್ಲಲಿಲ್ಲ. ಅಲ್ಲಿ ಕೂಡ ಯಶಸ್ಸು ಅವರಿಗೆ ಒಲಿದುಬಂತು. ಆರೋಗ್ಯದ ಸಮಸ್ಯೆ ಬಗೆಹರಿಯಿತು. ಈಗ ಆಹಾರದ ಸಮಸ್ಯೆಯ ಕಡೆಗೆ ಅವರ ಗಮನ ಕೇಂದ್ರೀಕೃತವಾಯಿತು. ತತ್ಫಲವಾಗಿ ಆಹಾರ ಪಡಿತರಗಳನ್ನು ನ್ಯಾಯೋಚಿತವಾಗಿ ವಿತರಿಸುವ ಸಹಕಾರಸಂಘ ಸ್ಥಾಪನೆಯಾಯಿತು.

ಜನಜೀವನದಲ್ಲಿ ಬಹಳ ಪ್ರಮುಖ ಪಾತ್ರಗಳನ್ನು ವಹಿಸುವ ಮೂರು ಘಟ್ಟಗಳನ್ನು ಕುಮಾರಾರಾಧ್ಯರು ಸಾಕಾರಗೊಳಿಸಿದ್ದರು: ಆಹಾರ, ಆರೋಗ್ಯ ಮತ್ತು ಅರಿವು. ಜನಗಳಿಗೆ ಇನ್ನೇನು ಬೇಕು? ನ್ಯಾಯಕ್ಕಾಗಿ ಬಹಳ ಹಿಂದಿನಿಂದಲೇ ಹೋರಾಡುತ್ತ ಬಂದಿದ್ದರಲ್ಲವೆ? ಬಾಲ್ಯದಿಂದಲೂ ಈ ಗುಣ ಅವರಲ್ಲಿ ಚಟುವಟಿಕೆ ಪ್ರಾರಂಭಿಸಿದ್ದುದರಿಂದ, ಕುಮಾರಾರಾಧ್ಯರು ವಯಸ್ಕರಾಗುವ ಹೊತ್ತಿಗೆ ಸುತ್ತಲಿನ ಮುವತ್ಮೂರು ಹಳ್ಳಿಗಳಲ್ಲಿ ಪ್ರಸಿದ್ಧರಾಗಿದ್ದರು. ಯಾವ ಹಳ್ಳಿಯ ಯಾವ ನ್ಯಾಯವೂ ಕುಮಾರಾರಾಧ್ಯರಿಲ್ಲದೆ ಪ್ರಾರಂಭವೂ ಆಗುತ್ತಿರಲಿಲ್ಲ, ಮುಕ್ತಾಯವನ್ನೂ ಕಾಣುತ್ತಿರಲಿಲ್ಲ. ನಡುರಾತ್ರಿಯಾದರೂ ಸರಿ, ಅವರಿಗಾಗಿ ಜನ ಕಾದುಕುಳಿತಿರುತ್ತಿದ್ದರು. ಅವರು ಬಂದಮೇಲೆಯೇ ನ್ಯಾಯಾಸ್ಥಾನದ ಮಾತುಕತೆಗಳು, ವಾದ-ಪ್ರತಿವಾದಗಳು ಪ್ರಾರಂಭವಾಗುತ್ತಿದ್ದುವು. ಅದು ಎಷ್ಟೇ ಉನ್ನತ ಮಟ್ಟದ ಸಭೆಯಾಗಿದ್ದರೂ ಕುಮಾರಾರಾಧ್ಯರ ಮಾತುಗಳಿಗೇ ಪ್ರಥಮ ಪ್ರಾಶಸ್ತ್ಯ ಇರುತ್ತಿತ್ತು. ಅವರು ಆಡುವ ಪ್ರತಿಯೊಂದು ಮಾತಿಗೂ ಪ್ರತಿಮಾತಾಗಲಿ ಎದುರುತ್ತರವಾಗಲಿ ಇರುತ್ತಿರಲಿಲ್ಲ. ಕುಮಾರಾರಾಧ್ಯರ ಬಾಯಿಯಿಂದ ಹೊರಬೀಳುತ್ತಿದ್ದ ಒಂದೊಂದು ಶಬ್ದಕ್ಕೂ ಅಷ್ಟು ತೂಕವಿರುತ್ತಿತ್ತು. ಸ್ವತಃ ಆರಾಧ್ಯರ ಬದುಕೇ ತೂಕದ್ದೂ ಗಂಭೀರದ್ದೂ ಆಗಿದ್ದುದರಿಂದ ಸಹಜವಾಗಿಯೇ ಅವರ ಮಾತಿಗೂ ಉನ್ನತ ಮೌಲ್ಯ ಪ್ರಾಪ್ತವಾಗುತ್ತಿತ್ತು.

ಹೀಗೆ ಇವರ ನ್ಯಾಯನಿಷ್ಠೆಯ ಕೀರ್ತಿ ಹರಡುತ್ತ ಹರಡುತ್ತ ಸರ್ಕಾರದವರೆಗೂ ವ್ಯಾಪಿಸಿಕೊಂಡಿತು. ಇವರ ನಿಷ್ಠುರ ಹಾಗೂ ಪ್ರಾಮಾಣಿಕ ನ್ಯಾಯೋಚಿತತೀರ್ಪುಗಳನ್ನು ಗಮನಿಸಿದ ಘನ ಸರ್ಕಾರವು ಇವರನ್ನು ಹೋಬಳಿ ಗ್ರಾಮವಾದ ಹಂಪಾಪುರದ ಮುನ್ಸೀಫರನ್ನಾಗಿ ನೇಮಿಸಿತು. ಹತ್ತು ವರ್ಷಗಳ ಕಾಲ ಸತತವಾಗಿ ಕುಮಾರಾರಾಧ್ಯರು ಪ್ರಶ್ನಾತೀತ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿ ತಮಗಿದ್ದ ಕೀರ್ತಿಯನ್ನು ಹೆಚ್ಚಿಸಿಕೊಂಡರಲ್ಲದೆ, ಶ್ರೇಷ್ಠನ್ಯಾಯಾಧೀಶರೆಂಬ ಕೀರ್ತಿಗೂ ಭಾಜನರಾದರು. ಈಗಿನ ನ್ಯಾಯಾಲಯಗಳಲ್ಲಿ ವರ್ಷಗಟ್ಟಲೆ ಎಳೆದಾಡಲ್ಪಡುವಂಥ ಜಟಿಲ ಸಮಸ್ಯೆಗಳನ್ನೆಲ್ಲ ಒಂದೆರಡು ದಿನಗಳಲ್ಲೆ ಪರಿಹರಿಸಿ ಬಿಡುತ್ತಿದ್ದರು. ತಕರಾರು ಪರಿಶೀಲನೆ,

ವಿಚಾರಣೆ, ತೀರ್ಪು - ಈ ಎಲ್ಲಾ ಹಂತಗಳನ್ನೂ ಒಂದೆರಡು ದಿನದಲ್ಲಿ ಪೂರೈಸಿ, ತೀರ್ಪನ್ನು ಬರವಣಿಗೆಯಲ್ಲಿ ನೀಡುತ್ತಿದ್ದರೆಂದರೆ ಕುಮಾರಾರಾಧ್ಯರ ದಕ್ಷತೆ, ಪ್ರತಿಭೆಯ ವಿರಾಟ್‌ದರ್ಶನವಾಗುತ್ತದೆ. ಆ ದಿನಗಳಲ್ಲಿ ಕುಮಾರಾರಾಧ್ಯರು ಮುನ್ಸೀಫರಾಗಿ ನಡೆಸಿದ ವಿಚಾರಣೆಗಳು ಹಾಗೂ ಅವರು ಕನ್ನಡದಲ್ಲಿ ನೀಡಿದ ತೀರ್ಪುಗಳು, ಇಂದಿಗೂ ಜಿಲ್ಲಾ ನ್ಯಾಯಾಲಯದ ರೆಕಾರ್ಡ್‌ನಲ್ಲಿ ನೋಡಲು ಸಿಗುತ್ತವೆ.

ಯಾವ ಅಕಾಡೆಮಿಕ್ ಅರ್ಹತೆಯೂ ಇಲ್ಲದೆ ಕೇವಲ ಪ್ರಾಥಮಿಕ ವಿದ್ಯಾಭ್ಯಾಸ ಹೊಂದಿದ ಓರ್ವ ಯಶಸ್ವೀ ನ್ಯಾಯಾಧೀಶರೆಂದರೆ ಕುಮಾರಾರಾಧ್ಯ ಒಬ್ಬರೇ. ಇಂಥ ಉದಾಹರಣೆ ಜಗತ್ತಿನ ಯಾವ ಭಾಗದಲ್ಲಿಯೂ ಲಭ್ಯವಾಗುವುದಿಲ್ಲ. ಆದ್ದರಿಂದ, ಇದನ್ನು ಒಂದು ಐತಿಹಾಸಿಕ ಜಾಗತಿಕದಾಖಲೆ ಎನ್ನಬಹುದು.

ಕುಮಾರಾರಾಧ್ಯರ ಸಾಧನೆಯೆಲ್ಲ ಇಷ್ಟೇಯೇ? ಆಹಾರ, ಆರೋಗ್ಯ, ಶಿಕ್ಷಣ, ನ್ಯಾಯ... ಇಷ್ಟೇಯೇ? ಅಲ್ಲ, ಅಲ್ಲ, ಇವು ಅವರ ಭವ್ಯ ಬದುಕಿನ ಕೆಲವು ತುಣುಕುಗಳಷ್ಟೆ. ಅವರ ಉದಾತ್ತಗುಣಗಳ ದರ್ಶನ ನಮಗಿನ್ನೂ ಆಗಿಲ್ಲ.

ಆರಾಧ್ಯರ ಇನ್ನೊಂದು ಆದರ್ಶಾರ್ಹ ದೊಡ್ಡಗುಣವೆಂದರೆ, ಅವರ ದಾನಗುಣ. ಸ್ವತಃ ದಾನಿಗಳಾಗಿರುವುದು ಒಂದು ಮುಖವಾದರೆ, ಅವರ ಇನ್ನೊಂದು ಮುಖ ದಾನ ಮಾಡಲು ಇತರರನ್ನೂ ಯಶಸ್ವಿಯಾಗಿ ಪ್ರೇರೇಪಿಸುತ್ತಿದ್ದುದು. ತಮ್ಮ ಮನೆಯಲ್ಲಿ ಹತ್ತಾರು ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರೆಲ್ಲರ ವಿದ್ಯಾಭ್ಯಾಸ, ಊಟ, ವಸತಿ, ಹೀಗೆ ಎಲ್ಲಾ ಸೌಕರ್ಯಗಳನ್ನೂ ಒದಗಿಸುತ್ತಿದ್ದುದಲ್ಲದೆ, ಮೈಸೂರಿನ ಆರಾಧ್ಯಮಹಾಸಭಾಸಂಸ್ಥೆಯು ನಡೆಸುತ್ತಿದ್ದ ವಿದ್ಯಾರ್ಥಿನಿಲಯಕ್ಕಾಗಿ ಇಪ್ಪತ್ತೈದು ಎಕರೆ ಭೂಮಿಯನ್ನು ದಾನವಾಗಿ ನೀಡಿದ್ದರು. ಹಂಪಾಪುರದಲ್ಲಿ ಆಸ್ಪತ್ರೆ ಅಸ್ತಿತ್ವಕ್ಕೆ ಬರಲು ಕಾರಣರಾದದ್ದೂ ಅಲ್ಲದೆ, ಅದರ ನಿರ್ವಹಣೆಗಾಗಿ ಹದಿನೈದು ಎಕರೆ ಭೂಮಿಯನ್ನು ದಾನವಾಗಿ ನೀಡಿದ್ದರು. ಅಷ್ಟೇ ಅಲ್ಲ, ಕೆಂಡಗಣ್ಣಸ್ವಾಮಿ ದೇವಾಲಯಕ್ಕೆ, ಜೈನಸಭಾಕ್ಕೆ, ಶಾರದಾನಿಕೇತನಕ್ಕೆ, ಹಲವಾರು ಎಕರೆ ಭೂಮಿಯನ್ನು ನೀಡಿದ ಮಹಾದಾನಿ ಕುಮಾರಾರಾಧ್ಯರು.

ಇಷ್ಟೆಲ್ಲ ದಾನಗಳನ್ನು ನೀಡುವಷ್ಟು ಧಾರಾಳಿಯಾಗಿದ್ದ ಆರಾಧ್ಯರು ಆಗರ್ಭ ಶ್ರೀಮಂತರಿರಬಹುದು ಎಂಬ ಭಾವನೆ ಎಂಥವರಲ್ಲೂ ಮೂಡುತ್ತದೆಯಲ್ಲವೆ ? ಆದರೆ, ವಾಸ್ತವ ಅದಲ್ಲ. ಇವರ ಕೀರ್ತಿಯನ್ನು ತಿಳಿದ ಸರ್ಕಾರವು ಇವರಿಗೆ ಸುಮಾರು ಎಂಬತ್ತೊಂದು ಎಕರೆ ಭೂಮಿಯನ್ನು ದರಖಾಸ್ತಿನಲ್ಲಿ ವಿಕ್ರಯ ಮಾಡಿತ್ತು. ತಮ್ಮ ಕುಟುಂಬಕ್ಕೆ ಅಷ್ಟೆಲ್ಲ ಭೂಮಿ ಯಾಕೆ? - ಎಂಬ ಆಲೋಚನೆ ಆರಾಧ್ಯರಿಗೆ ಬಂತು. ಬಂದ ಆದಾಯದಲ್ಲಿ ಮನೆಯೊಳಗೂ ಧಾರಾಳವಾಗಿ ದಾನಧರ್ಮಾದಿಗಳು ನಡೆಯುತ್ತಿದ್ದುದಲ್ಲದೆ, 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ' ಎಂಬ ದಾಸವಾಣಿಯಂತೆ, ಜನರಿಂದ (ಅಂದರೆ ಸರ್ಕಾರದಿಂದ)ಬಂದದ್ದನ್ನು ಜನರಿಗಾಗಿಯೇ ಮೀಸಲಿಟ್ಟ ಉದಾತ್ತ ಗುಣ ಕುಮಾರಾರಾಧ್ಯರದು.

ಕುಮಾರಾರಾಧ್ಯರು ಆಗರ್ಭ ಶ್ರೀಮಂತರೇನೂ ಅಲ್ಲ. ಅವರಲ್ಲಿದ್ದುದು ಹೃದಯ ಶ್ರೀಮಂತಿಕೆ ಮಾತ್ರ. ಉಳಿದಂತೆ, ಇತರ ಸಾಮಾನ್ಯ ಕುಟುಂಬಗಳಂತೆ ಆರ್ಥಿಕವಾಗಿ ಬಹಳ ಕಷ್ಟ ಅನುಭವಿಸಿದವರು. ಕಷ್ಟ, ಕಾರ್ಪಣ್ಯ, ದುಃಖ ಇವುಗಳಿಂದ ಸಾಕಷ್ಟು ನೋವನ್ನು ಉಂಡು ಅನುಭವವಿದ್ದುದರಿಂದಲೇ ಅವರಿಗೆ ಇತರರ ಕಷ್ಟ ದುಃಖಗಳು ಬೇಗ ಗ್ರಹಿತವಾಗಿ ಬಿಡುತ್ತಿದ್ದುವು. ಅಂಥ ಸಂಕಷ್ಟದ ಸಂದರ್ಭದಲ್ಲಿಯೂ ಆರಾಧ್ಯರು ಸಹಾಯಹಸ್ತ ಚಾಚದೆ ಇರುತ್ತಿರಲಿಲ್ಲ. ತಮ್ಮ ಕೈಲಾದ ಮಟ್ಟಿಗೆ ಸಹಾಯ ಮಾಡುತ್ತಿದ್ದರು.

ತಾವು ಸ್ವತಃ ದಾನಿಗಳಾಗಿದ್ದು ಆರಾಧ್ಯರು ಇತರರನ್ನೂ ಹಾಗೆ ಮಾಡಲು ಪ್ರಚೋದಿಸುತ್ತಿದ್ದರು. ತಾಲ್ಲೂಕಿಗೆ ಬರುವ ಎಲ್ಲ ಅಧಿಕಾರಿಗಳನ್ನೂ ಪ್ರಚೋದಿಸಿ, ಮನವಿ ಮಾಡಿ ಸಾರ್ವಜನಿಕ ಕೆಲಸಗಳನ್ನು ಮಾಡಿಸುತ್ತಿದ್ದರು. ಒಮ್ಮೆ ಶ್ರೀಮನ್ಮಹಾರಾಜರು ಕೃಷ್ಣರಾಜಒಡೆಯರ್‌ರವರು ಕೆಂಡಗಣ್ಣಸ್ವಾಮಿ ಗದ್ದಿಗೆಗೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಆರಾಧ್ಯರು ಮಹಾರಾಜರಿಗೆ ಆ ಭಾಗದ ಜನ ಸಂಚಾರದ ಸಮಸ್ಯೆಗಳನ್ನು ಅವರ ಕಣ್ಣಿಗೆ ಕಟ್ಟುವಂತೆ ವಿವರಿಸಿ ಮನವಿಮಾಡಿಕೊಂಡದ್ದರಿಂದ, ಮೈಸೂರು ಮಾನಂದವಾಡಿ ಮುಖ್ಯ ರಸ್ತೆಯೂ, ಮೇಟುಕಲ್ಲುಗುಡ್ಡದಿಂದ ಉತ್ತರಕ್ಕೆ ಕೆಂಡಗಣ್ಣಸ್ವಾಮಿ ದೇವಸ್ಥಾನದವರೆಗೆ ಮತ್ತೊಂದು ರಸ್ತೆಯೂ ನಿರ್ಮಾಣವಾದುವು.

ಮಹಾ ದೈವಭಕ್ತರಾಗಿದ್ದ ಜಿನ್ನಹಳ್ಳಿ ಕುಮಾರಾರಾಧ್ಯರನ್ನು ಸುತ್ತಮುತ್ತಲ ಯಾವ ಹಳ್ಳಿಯಲ್ಲಿ ಗ್ರಾಮದೇವತೆಯ ಹಬ್ಬವಾದರೂ ಯಾವ ಹಳ್ಳಿಯಲ್ಲಿ ಜಾತ್ರೆಯಾದರೂ ಆಹ್ವಾನಿಸುತ್ತಿದ್ದರು, ಇವರು ಜನರಿಂದ 'ದೊಡ್ಡಬುದ್ಧಿಯವರು'ಎಂದೂ, 'ದೊಡ್ಡ ಆರಾಧ್ಯರು' ಎಂದೂ, ಸಂಬೋಧನೆಯ ಗೌರವ ಪಡೆದಿದ್ದ ಕುಮಾರಾರಾಧ್ಯರು, ನಂಜನಗೂಡು, ಹುಣಸೂರು, ಹೆಗ್ಗಡದೇವನಕೋಟೆ, ಮೈಸೂರು ಮುಂತಾದ ತಾಲ್ಲೂಕುಗಳ ಜನಗಳಿಗೆ ಚಿರಪರಿಚಿತರಾಗಿದ್ದರು. ಅಲ್ಲೆಲ್ಲ ಎಲ್ಲಿ ಹೋದರೂ ಜನ ಅಪಾರ ಗೌರವಾದರಗಳಿಂದ ಬರಮಾಡಿಕೊಂಡು ಉಪಚರಿಸುತ್ತಿದ್ದರು. ಇಂಥ ಮಹಾಚೇತನ ಈಗ ನಮ್ಮ ನಡುವೆ ಇಲ್ಲ ಎಂಬುದು ನಿಜಕ್ಕೂ ದುಃಖದ ಸಂಗತಿ. ಆದರೂ, ಇವರ ಬದುಕು, ನಮಗೂ ಮುಂದಿನ ಪೀಳಿಗೆಗೂ ಪ್ರಕೃಷ್ಟ, ಇಂತಹ ಮಹಾಸಾಧು ಕೈ ಹಿಡಿದ ಪತ್ನಿ ಪಾರ್ವತಮ್ಮ ಅಷ್ಟೇ ಸಾಧ್ವೀಶಿರೋಮಣಿಯಾಗಿದ್ದರು ಎಂಬುದು ಇಲ್ಲಿನ ಅಂಶ. ಪತಿಯು ಹೇಳಿದಂತೆ ನಡೆದು ಜೀವನ ನಿಭಾಯಿಸಿದ ಸಾಧ್ವೀಮಣಿಯಾಗಿದ್ದರು. ಈ ದಂಪತಿಗಳ ಮಗಳಾದ ಅಂಬುಜಾಕ್ಷಮ್ಮನನ್ನು ಸಾಗರೆ ಚಂದ್ರಶೇಖರಾರಾಧ್ಯರಿಗೆ ಕೊಟ್ಟು, ಮದುವೆಮಾಡಿದ್ದರು. ಅವರು ಶಿಕ್ಷಕರು ಹಾಗೂ ಸ್ವಾತಂತ್ರ್ಯಹೋರಾಟಗಾರರು ಆಗಿದ್ದರು. ಮುನಿಸಂದೇಶ ಮತ್ತು ಆರಾಧ್ಯಸಂಪದ ಮಾಸಪತ್ರಿಕೆಯ ಸಂಪಾದಕರಾದ ಶ್ರೀ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ಪುತ್ರರಾಗಿದ್ದು ಇವರಲ್ಲಿ ತಂದೆಯವರ ಗುಣ ರಕ್ತಗತವಾಗಿರುವುದನ್ನು ಒಡನಾಡಿ ಸಂಪರ್ಕಿಸಿದವರಿಗೆ ವ್ಯಕ್ತವಾಗುತ್ತದೆ. ಇಂತಹವರು ನನ್ನ ಸ್ನೇಹಿತರಾಗಿರುವುದು ನನಗೆ ಹೆಮ್ಮೆಯಾಗಿದೆ.

* * *

# ಉದಾರಚರಿತ



ಭರತಖಂಡದ ಸಂಸ್ಕೃತಿ ಸುಮಾರು ಐದುಸಾವಿರ ವರ್ಷಗಳಿಗೂ ಹೆಚ್ಚಿನ ಪ್ರಾಚೀನತೆಯನ್ನು ಹೊಂದಿದೆ ಎಂಬುದು ಸಂಶೋಧಕರ ಅಭಿಪ್ರಾಯ. ಆರ್ಯರು ಭರತಖಂಡಕ್ಕೆ ಬರುವುದಕ್ಕೆ ಮುನ್ನವೆ ಪ್ರಾಚೀನಭರತ ಖಂಡದಲ್ಲಿ ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿ ಒಂದು ವಿಶಿಷ್ಟ ಸಂಸ್ಕೃತಿ ಇತ್ತು. ಅದೇ ಮೂಲದ್ರಾವಿಡಸಂಸ್ಕೃತಿ. ಈ ಸಂಸ್ಕೃತಿಯಲ್ಲಿ ಸ್ಥಾವರಲಿಂಗೋಪಾಸನೆ ಹಾಗೂ ಇಷ್ಟ ಲಿಂಗೋಪಾಸನೆಗೆ ಪ್ರಾಧಾನ್ಯವಿತ್ತು. ಉತ್ತಮ ಹಾಗೂ ವಿಶಾಲವಾದ, ಆದರೆ ಅತ್ಯಂತ ಅಚ್ಚುಕಟ್ಟಾದ ಗೃಹಗಳು, ಶ್ರೇಷ್ಠವಾದ ಬೀದಿಗಳು, ಸಕಲ ಸೌಲಭ್ಯಗಳನ್ನುಳ್ಳ ನಗರಗಳು ಆಗ ಇದ್ದುವೆಂಬುದು ಸಂಶೋಧಕರ ಅಭಿಪ್ರಾಯ. ಇದು ಕೇವಲ ಊಹೆಯಲ್ಲ; ಆದರೆ ಉತ್ಖನನಗಳ ಆಧಾರದ ಮೇಲೆ ನಿರ್ಣಯಗೊಂಡಿರುವ ಸಂಗತಿ ಇದು. ಇವರದೇ ಆದ ಪೂಜಾಕ್ರಮ, ಪೂಜಾವಿಧಾನ, ಪೂಜಾವಿಧಿ, ಸಾಹಿತ್ಯ ಇತ್ಯಾದಿ ಇತ್ತೆಂಬುದು ಸತ್ಯ. ಆದರೆ ಪ್ರಕೃತಿಯ ವಿಕೋಪದಿಂದ ಸರ್ವವೂ ನಾಶ ಹೊಂದಿವೆ ಎಂಬುದೂ ಅಷ್ಟೇ ಸತ್ಯ. ಹರಪ್ಪ, ಮೊಹಂಜೋದಾರೋಗಳಲ್ಲಿನ ಅವಶೇಷಗಳಲ್ಲಿ ಇರುವ ಲಿಪಿಯನ್ನು ಇನ್ನೂ ಪೂರ್ತಿ ಓದಲು ಸಾಧ್ಯವಾಗಿಲ್ಲ. ಅವುಗಳ ಸ್ಪಷ್ಟ ಪರಿಚಯವಾದುದಾದರೆ, ಈ ಬಗ್ಗೆ ಇನ್ನೂ ಹೆಚ್ಚಿನ ಸತ್ಯಾತ್ಮಕ ಮಾಹಿತಿಗಳು ಲಭ್ಯವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.



- ವಿದ್ವಾನ್ ಬಿ. ರಾಜಶೇಖರಯ್ಯ
ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು
ಶ್ರೀರಂಭಾಪುರಿ
ಮಹಾ ಸಂಸ್ಥಾನ ಪೀಠ
ಬಾಳೆಹೊನ್ನೂರು (ಪೋ.)
ಚಿಕ್ಕಮಗಳೂರು ಜಿಲ್ಲೆ. 577112

ಆರ್ಯರ ಸಂಪರ್ಕದಿಂದಾಗಿ, ಈ ಮೂಲ ದ್ರಾವಿಡ ಸಂಸ್ಕೃತಿಯಲ್ಲಿ ಸಹ ಯಜ್ಞಯಾಗಾದಿಗಳ ಆಚರಣೆ ಅವಿನಾಭಾವದಿಂದ ಸೇರಿಕೊಂಡಿತು. ಅಂತೆಯೇ ದೇಶದ ನಾನಾ ಭಾಗಗಳಲ್ಲಿ ಹಂಚಿಹೋದ ಈ ಶೈವ ಸಂಸ್ಕೃತಿಯಲ್ಲಿ ದೇಶ - ಕಾಲಾನುಗುಣವಾಗಿ ಅನೇಕ ಪ್ರಭೇದಗಳ ಹುಟ್ಟು ಅನಿವಾರ್ಯವೇ ಆಯಿತು. ದಾರ್ಶನಿಕರ ಚಿಂತನೆಗಳು ಭಿನ್ನ ಭಿನ್ನವೇ ಆಗಿದ್ದು, ಶೈವದ ಇಂತಹ ಪ್ರಭೇದಗಳಿಗೆ ಇವು ಮೂಲ

ಕಾರಣವೇ ಆದವು. ಇಂದು ಭರತಖಂಡದಲ್ಲಿ ಪ್ರಸಿದ್ಧವಾಗಿರುವ ಶೈವಪಂಥಗಳೆಂದರೆ - ಕಾಶ್ಮೀರಶೈವ. ತಮಿಳುನಾಡಿನ ಶೈವ, ಕರ್ನಾಟಕದ ವೀರಶೈವ ಇತ್ಯಾದಿ. ತಮಿಳುನಾಡಿನ ಶೈವವನ್ನು ಸಾಮಾನ್ಯವಾಗಿ ಶಿವಾದ್ವೈತವೆಂದು ಕರೆಯಬಹುದಾಗಿದೆ. ಆಂಧ್ರಪ್ರದೇಶದಲ್ಲಿಯೂ ಸಹ ಈ ಪಂಥ ಬಹುವಾಗಿ ಕಂಡುಬರುತ್ತದೆ. ಇಂತಹ ಪ್ರಭೇದಗಳಲ್ಲಿ 'ಆರಾಧ್ಯಶೈವ'ವೆಂಬ ಒಂದು ಪ್ರಮುಖ ಪ್ರಭೇದವೂ ಇರುತ್ತದೆ. ಆಂಧ್ರದಲ್ಲಿ ವ್ಯಾಪಕವಾಗಿಯೂ, ಕರ್ನಾಟಕದ ಮೈಸೂರು, ಚಾಮರಾಜನಗರ, ಮಂಡ್ಯ ಜಿಲ್ಲೆಗಳಲ್ಲಿ ಸೀಮಿತವಾಗಿಯೂ ಈ ಪಂಥ ಇರುವುದನ್ನು ನಾವು ಕಾಣಬಹುದು.

ಈ ಆರಾಧ್ಯಶೈವರು ವೀರಶೈವರು ಆರಾಧಿಸುವ ಜಗದ್ಗುರು ಪಂಚಾಚಾರ್ಯರನ್ನು ಭಕ್ತಿಯಿಂದ ಗೌರವಿಸಿ, ಅವರ ತತ್ತ್ವಗಳನ್ನು ಸಂಪೂರ್ಣ ಅನುಸರಿಸುತ್ತಾರೆ. ಅಂತೆಯೇ ಶ್ರೀ ಶಂಕರಾಚಾರ್ಯರ ಅದ್ವೈತವನ್ನೂ ಅವಲಂಬಿಸಿ, ಅವರ ಆಚಾರ ವಿಚಾರಗಳನ್ನು ಅನುಷ್ಠಾನಕ್ಕೆ ತಂದುಕೊಂಡಿರುವರಲ್ಲದೆ, ಶ್ರೀ ಶಂಕರರನ್ನೂ ಸಹ, ಜ|| ಪಂಚಾಚಾರ್ಯರನ್ನು ಹೇಗೋ ಹಾಗೆಯೇ ಗೌರವಿಸುತ್ತಾರೆ, ಭಕ್ತಿ ಸಮರ್ಪಣೆ ಮಾಡುತ್ತಾರೆ.

ಶ್ರೀಕರಭಾಷ್ಯವನ್ನು ಬರೆದಿರುವ ಶ್ರೀ ಪಂಡಿತಾರಾಧ್ಯ, ಶ್ರೀಕಂಠಭಾಷ್ಯವನ್ನು ಬರೆದಿರುವ ಶ್ರೀಕಂಠಶಿವಾಚಾರ್ಯ, ಕೆರೆಯ ಪದ್ಮರಸ ಮೊದಲಾದವರೆಲ್ಲ ಈ ಪಂಥದವರೇ ಆಗಿರುವರೆಂದು ನಂಬಲಾಗಿದೆ. ಶ್ರೀಪತಿಪಂಡಿತರು ಆಂಧ್ರದಲ್ಲಿ ಪ್ರಸಿದ್ಧ ಆಚಾರ್ಯಪುರುಷರೂ, ಮಹಾಮಹಿಮಶಾಲಿಗಳೂ ಆಗಿದ್ದರೆಂದು ಹೇಳಲಾಗುತ್ತದೆ. ಇವರು ಅಗ್ನಿಸ್ತಂಭನವನ್ನು ಮಾಡಿದ್ದರೆಂದು ಸಹ ಚರಿತ್ರೆ ತಿಳಿಸುತ್ತದೆ.

ಈ ಪಂಥದವರಲ್ಲಿ ಶಿಶುವು (ಹೆಣ್ಣೇ ಆಗಲಿ, ಗಂಡೇ ಆಗಲಿ) ಜನಿಸಿದ ಬಳಿಕ ಲಿಂಗದೀಕ್ಷೆ ಮಾಡಲಾಗುತ್ತದೆ. ಗಂಡುಮಗುವಿಗೆ ಎಂಟನೆಯ ವರ್ಷದಲ್ಲಿ (ಈಗ ಅನುಕೂಲವಾದಾಗ) ಉಪನಯನಸಂಸ್ಕಾರವನ್ನು ಸಹ ಮಾಡಲಾಗುತ್ತದೆ. ವೇದಾದಿಗಳ ಅಭ್ಯಾಸ, ಸಂಸ್ಕೃತಾಧ್ಯಯನ, ಜ್ಯೋತಿಷ್ಯದ ಅಧ್ಯಯನ ಇತ್ಯಾದಿ ಇವರಲ್ಲಿ ಹೆಚ್ಚಾಗಿ ಉಂಟು. ಅಲ್ಲದೆ ಇವರನ್ನು 'ಸ್ವಯಂ ಆಚಾರ್ಯರು' ಎಂದೇ ಕರೆಯಲಾಗುತ್ತದೆ. ಇವರಲ್ಲಿಯೂ ಮಠ -ಮಾನ್ಯಗಳುಂಟು, ಸ್ವಾಮಿಗಳವರೂ ಉಂಟು. ಭಕ್ತರ ಗೃಹಗಳಲ್ಲಿ ಷೋಡಶಕರ್ಮಾದಿಗಳ ಆಚರಣೆಯನ್ನು ಮಾಡಿಸುತ್ತಾರೆ, ತರ್ಪಣಾದಿಗಳನ್ನು ಮಾಡಿಸುತ್ತಾರೆ. ಉತ್ತಮ ವೇದ -ಸಂಸ್ಕೃತಾದಿ ವಿದ್ವಾಂಸರು, ಕವಿಗಳೂ, ಸಾಹಿತಿಗಳೂ ಇತ್ಯಾದಿ ಆಗಿ ಹೋಗಿದ್ದಾರೆ. ಇಂದಿಗೂ ಇದ್ದಾರೆ. ಇಷ್ಟಲಿಂಗಪೂಜೆ, ಪಿತೃತರ್ಪಣಾದಿಗಳು ಇವರಲ್ಲಿ ಇಂದಿಗೂ ಆಚರಣೆಯಲ್ಲುಂಟು. ಬಹುಶಃ ಕರ್ನಾಟಕದಲ್ಲಿ ಪ್ರಾಚೀನವೀರಶೈವರಲ್ಲಿ ಬಸವಣ್ಣನವರ ಪ್ರಭಾವ ಆಗಿರುವಂತೆ, ಈ ಪಂಥದವರಲ್ಲಿ ಅವರ ಪ್ರಭಾವ ಅಷ್ಟಾಗಿ ಆದಂತೆ ಕಾಣುತ್ತಿಲ್ಲ. ಆದರೆ, ಬಸವಣ್ಣನವರ ವಿರೋಧಿಗಳಂತೂ ಖಂಡಿತ ಅಲ್ಲ. ಕೆಲವು ನನ್ನ ಮಿತ್ರರು -ಅಂದರೆ ಈ ಪಂಥದವರೇ ಕೆಲವು ಹಿರಿಯ ವಿದ್ವನ್ಮಿತ್ರರು, 'ಬಸವಣ್ಣನವರು ಈ ಆರಾಧ್ಯಶೈವ ಪಂಥದವರೇ ಆಗಿದ್ದು, ಉಪನಯನಸಂಸ್ಕಾರವನ್ನು ತೊರೆದು

ಕೇವಲ ವೀರಶೈವ ಅನುಯಾಯಿಯಾಗಿ ಆ ಧರ್ಮವನ್ನು ಉದ್ಧರಿಸಿದರು' ಎಂದು ನನ್ನೊಡನೆ ಅನೇಕ ಸಾರಿ ಹೇಳಿದ್ದೂ ಉಂಟು. ಆದರೆ, ನಾನು ಈ ಬಗ್ಗೆ ತಲೆ ಬಿಸಿಮಾಡಿಕೊಳ್ಳಲು ಹೋಗಲಿಲ್ಲ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಆಚರಣೆ, ಅಂತೆಯೇ ರಾಜಯೋಗ, ಶಿವಯೋಗಗಳ ಸಮರಸತೆ ಇವರಲ್ಲಿ ಇಂದಿಗೂ ಸಹ ಉಂಟು. ಶಿವೈಕ್ಯರಾದವರನ್ನು ಶಿವ ಸ್ವರೂಪರೆಂದೇ ಭಾವಿಸಿ, ಅವರ ಪಾರ್ಥಿವಶರೀರವನ್ನು ದಹನ ಮಾಡದೆ, ಭೂಮಿಯಲ್ಲಿ ಕ್ರಿಯಾಸಮಾಧಿಯ ವಿಧಿಯನ್ನನುಸರಿಸಿ, ಸಮಾಧಿಮಾಡುವುದು ಒಂದು ವೈಶಿಷ್ಟ್ಯ. ಉತ್ತರ ಕ್ರಿಯಾದಿಗಳಲ್ಲಿ ಶೈವ ಹಾಗೂ ವೀರಶೈವದ ಉಭಯ ಆಚರಣೆಗಳೂ ಇರುತ್ತವೆಂಬುದು ಗಮನಾರ್ಹ. ವರ್ಷಕ್ಕೊಮ್ಮೆ ನಿರ್ದಿಷ್ಟ ದಿನಗಳಲ್ಲಿ ಉಪನಯನಸಂಸ್ಕಾರವನ್ನೂ ನಡೆಸುತ್ತಾರೆ. ಈ ಸಂದರ್ಭದಲ್ಲಿ ಕೆಲವೆಡೆ ಈ ಸಂಬಂಧವಾದ ಹೋಮಾದಿಗಳನ್ನೂ ನಿರ್ವಹಿಸುವುದುಂಟು. ವಿವಾಹಸಂದರ್ಭದಲ್ಲಿ ಲಾಜಾಹೋಮವೂ ಆಚರಣೆಯಲ್ಲಿರುವುದು ಗಮನಾರ್ಹ. ಹೇಳುವುದಾದರೆ, ಒಂದು ವಿಶಿಷ್ಟ ರೀತಿಸಂಪ್ರದಾಯದ 'ಆರಾಧ್ಯಶೈವಪಂಥ'ವೆನ್ನಬಹುದು. ಈ ಶೈವಪಂಥ ಹಾಗೂ ಪ್ರಾಚೀನ ಶೈವಪಂಥಗಳಲ್ಲಿ ಯಾವುದೇ ರೀತಿಯ ಭೇದಭಾವ ಇದ್ದಂತೆ ಕಂಡುಬರುತ್ತಿಲ್ಲ. ಏಕೆಂದರೆ, ತಮಿಳು ಶೈವಪಂಥಕ್ಕೆ ಸೇರಿದ ಅಪ್ಪಯ್ಯದೀಕ್ಷಿತರು, ಶಿವಾದ್ವೈತ ಪರವಾದ ಶ್ರೀಕಂಠಭಾಷ್ಯಕ್ಕೆ 'ಶಿವಾರ್ಥಮಣಿದೀಪಿಕಾ' ಎಂಬ ಪ್ರೌಢವಾದ ಬೃಹತ್ ವ್ಯಾಖ್ಯಾನವನ್ನು ಬರೆದಿರುವರು. ಇದೇ ಒಂದು ಪ್ರಮುಖ ನಿದರ್ಶನ. ಇಂತಹವು ಹಲವಾರು ಉದಾಹರಣೆಗಳು ದೊರಕಬಹುದು. ಆಂಧ್ರದಲ್ಲಿ ಇಂದು ಸಹ ಮಹಾಶೈವರಾದ ಆರಾಧ್ಯ ಪಂಥದವರು ಅಪಾರವಾಗಿಯೇ ಇದ್ದಾರೆ. ಇವರಿಗೆಲ್ಲ ಶ್ರೀಕಂಠಭಾಷ್ಯ ಪರಮಪವಿತ್ರವಾದ ಗ್ರಂಥವಾಗಿದೆ.

ಇಷ್ಟೆಲ್ಲ ಹಿನ್ನಲೆಗೆ ಕಾರಣವೆಂದರೆ, - ವೀರಶೈವರ ಆಚರಣೆಗಳನ್ನು ಅಳವಡಿಸಿಕೊಂಡು ತನ್ನದೇ ಆದ ಅನೇಕ ವೈಶಿಷ್ಟ್ಯಪೂರ್ಣ ಆಚರಣೆಗಳನ್ನು ಅನುಸರಿಸುತ್ತಿರುವ 'ಆರಾಧ್ಯ ಶೈವ ಪಂಥ' ಒಂದು ವಿಶಿಷ್ಟ ಪಂಥವೇ ಆಗಿದೆಯೆಂಬುದನ್ನು ಸ್ಪಷ್ಟಪಡಿಸುವುದೇ ಆಗಿದೆ.

ಇಂತಹ ಒಂದು ಮಡಿವಂತಿಕೆಯ ಪಂಥದಲ್ಲಿ ಜನಿಸಿದವರಾಗಿದ್ದಂಥ, ಲಿಂಗೈಕ್ಯ ಆರ್. ಕುಮಾರಾರಾಧ್ಯರು ಒಂದು ವಿಶಿಷ್ಟಶಕ್ತಿಯೇ ಆಗಿದ್ದರು ಎಂಬುದು ಅತ್ಯಂತ ಅಭಿಮಾನದ ಸಂಗತಿ. ಸಾಮಾನ್ಯ ಮಾನವನಾಗಿ ಜನಿಸಿ, ಮನುಷ್ಯತ್ವದ ಸಕಲ ಗುಣಗಳನ್ನು ಹೊಂದಿ, ಅತಿ ಮಾನವರಾಗಿ ಇಂದು ಪ್ರಾತಃಸ್ಮರಣೀಯರಾಗಿರುವರೆಂಬುದೇ ಇವರ ವ್ಯಕ್ತಿತ್ವದ ಒಂದು ವೈಶಿಷ್ಟ್ಯ. ಇವರ ಸತ್ಪುತ್ರರಾದ ಶ್ರೀ ನಾಗಭೂಷಣಾರಾಧ್ಯರು ತಂದೆಗೆ ತಕ್ಕ ಮಗನೆಂಬಂತೆ ಸಮಾಜದ ಸೇವೆಯಲ್ಲಿ ಸಾಹಿತ್ಯಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ತಮ್ಮನ್ನು ಸಮಗ್ರವಾಗಿ ತೊಡಗಿಸಿಕೊಂಡಿರುವುದು ಅತ್ಯಂತ ಪ್ರಶಂಸಾರ್ಹವಾದ ಸಂಗತಿಯೇ ಆಗಿರುತ್ತದೆ. ಶ್ರೀ ಕುಮಾರಾರಾಧ್ಯರ ವ್ಯಕ್ತಿತ್ವದ ಬಗ್ಗೆ ಅನೇಕ ವಿದ್ವಾಂಸರು ನಾನಾ ರೀತಿಯಲ್ಲಿ ಲೇಖನಗಳ ಮುಖಾಂತರ ವಿಶದಪಡಿಸಿರಬಹುದು. ಅವರು ಮಾಡಿರುವ ಮಹತ್ತರ ಕಾರ್ಯಗಳ ಬಗ್ಗೆ ನಾನು ಏನನ್ನೂ ವಿವರಿಸಲಾರೆ. ಏಕೆಂದರೆ ಅದು ಪುನರುಕ್ತಿ ಎನಿಸೀತು! ಆದರೆ ತಮ್ಮ ದೈನಂದಿನ

ಸದಾಚಾರಕ್ಕೆ ಧಕ್ಕೆ ಬಾರದೆ, ಸಮಾಜದ ಒಳಿತಿಗಾಗಿ ಗ್ರಾಮದ, ದೇಶದ ಅಭ್ಯುದಯಕ್ಕಾಗಿ ತಮ್ಮ ತನು -ಮನ- ಧನ ಭಾವಗಳನ್ನು ಸಪತ್ನೀಕರಾಗಿಯೇ ಧಾರೆ ಎರೆದು, ಈ ಸತಿ ಪತಿಗಳೀರ್ವರೂ, ಪಾರ್ವತೀಪರಮೇಶ್ವರರಂತೆ ಇಂದು ಸ್ಮರಣೀಯರಾಗಿರುವುದು ಇವರ ಪೂರ್ವಜನ್ಮಗಳ ಸುಕೃತವೆಂದೇ ಹೇಳಬಹುದು.

ಇವರ ವ್ಯಕ್ತಿತ್ವವನ್ನು ವಿವರಿಸಲು ಹೋಗದೆ, ಕೇವಲ ಎರಡು ಪ್ರಸಿದ್ಧವಾದ ಸಂಸ್ಕೃತ ಸುಭಾಷಿತ ಶ್ಲೋಕಗಳ ಅಭಿಪ್ರಾಯದಲ್ಲಿ ಇವರ ವ್ಯಕ್ತಿತ್ವದ ಸಮನ್ವಯವನ್ನು ಮಾಡ ಬಯಸುತ್ತೇನೆ.

ಆರಾಧ್ಯಃ = ಆರಾಧಯಿತುಂ ಯೋಗ್ಯಃ. ಅಂದರೆ 'ಪೂಜಾರ್ಹ' ಎಂಬುದು ಆರಾಧ್ಯ ಪದದ ಅರ್ಥ. ಇಂತಹ ಪೂಜಾಯೋಗ್ಯತೆ ಎಲ್ಲರಿಗೂ ಬರಲಾರದು. ಏಕೆಂದರೆ ಇದೊಂದು ವಿಶಿಷ್ಟವಾದ ಗುಣವೇ ಆಗಿರುತ್ತದೆ. ಇದು ಕೆಲವರ ವಿಷಯದಲ್ಲಿ ರೂಢನಾಮವಾಗಿ ಇರಬಹುದು. ಕೆಲವರ ವಿಷಯದಲ್ಲಿ ಅಂಕಿತನಾಮವಾಗಿಯಾದರೂ ಇರಬಹುದು. ಆದರೆ ಇದು ಅನ್ವರ್ಥನಾಮವಾಗಿರುವುದು ಅತ್ಯಂತ ವಿರಳ ಎನ್ನಬಹುದು. ವಾಸ್ತವವಾಗಿ ಈ 'ಆರಾಧ್ಯ' ಪದವು ಶ್ರೀ ಕುಮಾರಾರಾಧ್ಯರಿಗೆ ಅನ್ವರ್ಥವಾಗಿಯೇ ಅನ್ವಯಿಸುತ್ತದೆನ್ನಬಹುದು. ಇದಕ್ಕೆ ಇವರ ವ್ಯಕ್ತಿತ್ವವೇ ಮುಖ್ಯಕಾರಣ, ಇವರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಆ ಎರಡು ಸುಭಾಷಿತ ಶ್ಲೋಕಗಳನ್ನು ಗಮನಿಸಬಹುದಾಗಿದೆ.

*ಅಯಂ ನಿಜಃ ಪರೋ ವೇತ್ತಿ ಗಣನಾ ಲಘುಚೇತಸಾಮ್ |*
*ಉದಾರಚರಿತಾನಾಂ ತು ವಸುಧೈವ ಕುಟುಂಬಕಮ್ ||*

ಸಂಕುಚಿತ ಮನೋಭಾವವುಳ್ಳವರು - "ಈತನು ನಮ್ಮವನು, ಈತನು ಬೇರೆಯವನು' - ಎಂಬ ಇತ್ಯಾದಿ ತಾರತಮ್ಯ ಭಾವವುಳ್ಳವರು. ಆದರೆ, ಉದಾರಹೃದಯವಂತರೂ, ವಿಶಾಲ ಹೃದಯಿಗಳೂ ಆದ ಸಹೃದಯದವರಿಗೆ ಸಮಗ್ರ ಈ ವಿಶ್ವವೇ ಒಂದು ಕುಟುಂಬ ಎಂಬ ಪವಿತ್ರ ಭಾವನೆ ಇರುತ್ತದೆ. ಈ ಅಭಿಪ್ರಾಯವು ಶ್ರೀಯುತರಲ್ಲಿ ಸಂಪೂರ್ಣ ರೀತಿಯಲ್ಲಿ ಅನ್ವಯಿಸುತ್ತದೆಯಲ್ಲವೇ? ಹಾಗೆಯೇ-

*ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ |*
*ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನವಾ? ||*

ನೂರು ಮಂದಿಯಲ್ಲಿ ಒಬ್ಬ ಶೂರನಾಗಿ ಹುಟ್ಟಿರಬಹುದು; ಸಹಸ್ರ ಮಂದಿಯಲ್ಲಿ ಒಬ್ಬ ಪಂಡಿತನಾಗಿ ಜನಿಸಿರಬಹುದು; ಹತ್ತು ಸಾವಿರ ಮಂದಿಯಲ್ಲಿ ಓರ್ವ ಉತ್ತಮವಾಗ್ಮಿಯಾಗಿ ಜನಿಸಿರಬಹುದು. ಆದರೆ, ತ್ಯಾಗಗುಣದಿಂದ ಕೂಡಿ ದಾನಶೀಲನಾಗಿರುವ ವ್ಯಕ್ತಿ ಇರುವನೋ? ಅಥವಾ ಇಲ್ಲವೋ ? ತಿಳಿಯದು -ಎಂಬುದು ಈ ಪದ್ಯದ ಸಾರ. ಪ್ರಕೃತ ಶ್ರೀ ಕುಮಾರಾರಾಧ್ಯರಲ್ಲಿ ಆತ್ಮಶೂರತ್ವ, ದೈಹಿಕಶೂರತ್ವ, ಪಾಂಡಿತ್ಯ, ಉತ್ತಮವಾಗ್ಮಿತೆ ಹಾಗೂ ತ್ಯಾಗಮಯ ಜೀವನದಿಂದ ಕೂಡಿದ ದಾನಶೀಲತೆ ಈ ನಾಲ್ಕೂ ಗುಣಗಳು ವಾಸ್ತವವಾಗಿ, ಸಹಜವಾಗಿಯೇ ಮೈಗೂಡಿ ಬಂದಿದ್ದವು.

ಇದಕ್ಕೂ ಹೆಚ್ಚು ಇವರ ವ್ಯಕ್ತಿತ್ವವನ್ನು ಚಿತ್ರಿಸುವುದು ನನಗೆ ಅಸಾಧ್ಯವೆನಿಸಿದೆ.

ಇಂತಹ ಮಹಾಮಹಿಮರ ಜೀವನಾದಿಗಳನ್ನು ಹಲವಾರು ಸಹೃದಯ ವಿದ್ವಾಂಸರಿಂದ ಬರೆಯಿಸಿ, ಪ್ರಕಟಪಡಿಸುವ ಶ್ರೇಷ್ಠ ಕಾರ್ಯವನ್ನು ಶ್ರೀ ನಾಗಭೂಷಣಾರಾಧ್ಯರು ಕೈಗೊಂಡಿರುವುದು ಅತ್ಯಂತ ಪ್ರಶಂಸಾರ್ಹವಾದ ಸಂಗತಿಯಾಗಿರುತ್ತದೆ. ಇವರ ಈ ಪ್ರಯತ್ನಕ್ಕೆ ಸಹೃದಯರ ಉತ್ತಮ ಸಹಕಾರ, ಸಾಫಲ್ಯ, ಸಾರ್ಥಕ್ಯಗಳು ಶ್ರೀ ಪಾರ್ವತೀಪರಮೇಶ್ವರರ ಕೃಪೆಯಿಂದ ದೊರೆಯಲೆಂದು ಪ್ರಾರ್ಥಿಸುತ್ತೇನೆ.

* * *

## ಪರೋಪಕಾರ

"ಪರೋಪಕಾರಾರ್ಥಮಿದಂ ಶರೀರಂ"-ಎಂಬುದು ಭಗವದ್ವಾಕ್ಯ. ನಮ್ಮ ಶರೀರವಿರುವುದೇ ಪರೋಪಕಾರಕ್ಕಾಗಿ. ಬದುಕು ಸವೆದು ನಾವು ಸಾಯುವುದರೊಳಗೆ ನಮ್ಮ ಕೈಯಲ್ಲಿ ಸಾಧ್ಯವಾದಷ್ಟು ಇತರರಿಗೆ ಉಪಕಾರ ಮಾಡಬೇಕು. ಇದರ ಅರ್ಥ ಉಪಕಾರ ಮಾಡುವುದು ನಮ್ಮಿಂದ ಸಾಧ್ಯವಾಗದಿದ್ದರೆ ಅಪಕಾರ ಮಾಡದೆ ಸುಮ್ಮನಿದ್ದರೆ ಉಪಕಾರ ಮಾಡಿದಂತೆಯೇ. ನಮ್ಮ ಇಡೀ ಜೀವಿತವನ್ನು ಪರೋಪಕಾರಕ್ಕಾಗಿ ವಿನಿಯೋಗಿಸುವವರು ಸಜ್ಜನರು

ತಮ್ಮ ಬದುಕನ್ನು ತನ್ಮೂಲಕ ಸಾರ್ಥಕ ಪಡಿಸಿಕೊಳ್ಳುತ್ತಾರೆ. ಲೋಕೋತ್ತರ ಕೀರ್ತಿಗೂ ಭಾಜನರಾಗುತ್ತಾರೆ. ಸಂಕಷ್ಟದಲ್ಲಿರುವವರನ್ನು ಕಂಡು ಯಾರು ಸದಾಕಾಲ ಕನಿಕರಪಡುತ್ತಾರೋ, ಪರೋಪಕಾರಮಾಡುವುದನ್ನೇ ಯಾರು ತಮ್ಮ ಆದ್ಯ ಕರ್ತವ್ಯವೆಂದೇ ಭಾವಿಸಿ ಕೈಲಾದ ಮಟ್ಟಿಗೂ ಆ ಪವಿತ್ರಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೋ ಅಂಥವರ ಮುಖವು ಸದಾ ಪ್ರಸನ್ನವಾಗಿರುತ್ತದೆ. ಅವರು, ಎಲ್ಲರಿಂದಲೂ ಗೌರವಾದರಗಳಿಗೆ ಪಾತ್ರರಾಗುತ್ತಾರೆ. ಇತರರಿಗೆ ಆದರ್ಶಪ್ರಾಯರೂ ಆಗುತ್ತಾರೆ. ಇಂಥ ಉತ್ತಮ ನಡಾವಳಿಯಿಂದ ತಮ್ಮ ಜೀವಿತಾವಧಿಯನ್ನು ಸಾರ್ಥಕ ಪಡಿಸಿಕೊಳ್ಳುತ್ತಾರೆ.

ಇಂಥವರ ಮುಖವೇ ಮನಸ್ಸಿನ ಕನ್ನಡಿ. ಮನಸ್ಸು ನಿಷ್ಕಳಂಕವಾಗಿದ್ದಲ್ಲಿ ಮುಖದಲ್ಲಿ ಸಹಜ ಮಂದಹಾಸ ಮಿನುಗುತ್ತದೆ. ಹೀಗೆ ನಿಷ್ಕಳಂಕಮನಸ್ಸಿನ ಸಜ್ಜನರು ಸರ್ವದಾ ಮಂದಸ್ಮಿತ ವದನರಾಗಿಯೂ ಇರುತ್ತಾರೆ. ಇಂಥ ಸಜ್ಜನರ ಹೃದಯವೂ ನಿಷ್ಕಲ್ಮಷವಾಗಿಯೇ ಇರುತ್ತದೆ. ಇತರರ ಸಂಕಷ್ಟಕ್ಕೆ ಸಜ್ಜನರ ಇಂಥ ನಿಷ್ಕಲ್ಮಷ ಹೃದಯ ಮಿಡಿಯುತ್ತದೆ. ಕರಗುತ್ತದೆ. ಹೀಗಾಗಿ ಇಂಥ ಸಜ್ಜನರು ಎಲ್ಲೆಡೆ ಎಲ್ಲರಿಂದ ಗೌರವಾದರಗಳಿಗೆ ಪಾತ್ರರಾಗುತ್ತಾರೆ. ಯಾರ ಹೃದಯವು ದಯಾರ್ದ್ರ ಪೂರ್ಣವಾಗಿರುವುದೋ, ಉಪಕಾರ ಮಾಡುವುದು ತಮ್ಮ ಕರ್ತವ್ಯವೆಂದು ಯಾರು ತಿಳಿದಿರುತ್ತಾರೋ ಅವರು ಸದಾ ಪ್ರಸನ್ನರಾಗಿರುತ್ತಾರೆ. ಅಂಥವರು ಯಾರಿಗೆ ತಾನೇ ವಂದ್ಯರಲ್ಲ.

# ಸದ್ಗುಣ ಆತ್ಮದ ಆಭರಣ

ಮಾನವಜೀವನವು ಧ್ಯೇಯರಾಹಿತ್ಯವಾದ ಒಂದು ಆಕಸ್ಮಿಕ ಘಟನೆಯಲ್ಲ. ಅದಕ್ಕೆ ಒಂದು ನಿರ್ದಿಷ್ಟ ಗುರಿಯಿದೆ. ಅದೇ ಆತ್ಮೋದ್ಧಾರ ಅಥವಾ ಆತ್ಮಸಾಕ್ಷಾತ್ಕಾರ. ಮಾನವ ಜೀವನದ ಸಾರ್ಥಕತೆ ಅದನ್ನು ಸಾಧಿಸುವುದರಲ್ಲಿದೆ ಎಂಬುದು ಎಲ್ಲ ಧರ್ಮಗಳ ಸಂದೇಶ. ಏಕೆಂದರೆ, ಮನುಷ್ಯನಿಗಲ್ಲದೆ ಜಗತ್ತಿನ ಯಾವ ಜೀವಿಗೂ ಆತ್ಮೋದ್ಧಾರವನ್ನು ಸಾಧಿಸುವ ಉತ್ಕಟಾಕಾಂಕ್ಷೆ ಹಾಗೂ ಸಾಮರ್ಥ್ಯವಿರುವುದಿಲ್ಲ. ಮನುಷ್ಯಜೀವನವು ಆತ್ಮೋದ್ಧಾರಕ್ಕೆ ದೊರಕಿದ ಒಂದು ಅವಕಾಶ ಎಂಬುದನ್ನು ಜಗತ್ತಿನ ಸಾಧು, ಸಂತರು, ಸತ್ಪುರುಷರು ಘೋಷಿಸಿದ್ದಾರೆ. ಈ ಅವಕಾಶವನ್ನು ಸದುಪಯೋಗ ಮಾಡಿಕೊಳ್ಳುವುದು ಇಲ್ಲವೆ ದುರುಪಯೋಗ ಮಾಡಿಕೊಳ್ಳುವುದು ಮಾನವನ ಇಚ್ಛಾಸ್ವಾತಂತ್ರ್ಯಕ್ಕೆ ಬಿಟ್ಟ ವಿಷಯವೆ ಹೊರತು ಯಾರ ಬಲತ್ಕಾರಕ್ಕೂ ಒಳಪಟ್ಟ ವಿಷಯವಲ್ಲ. ಡಾ. ಎಸ್. ರಾಧಾಕೃಷ್ಣನ್ ಅವರು ಹೇಳುವಂತೆ: "ಮನುಷ್ಯನು ವಿಧಿವಿಲಾಸಸೂತ್ರದ ಗೊಂಬೆಯಲ್ಲ. ಆತನಿಗೆ ಒಳ್ಳೆಯದನ್ನೊ ಅಥವಾ ಕೆಟ್ಟದನ್ನೊ ಆಯ್ದುಕೊಳ್ಳುವ ಸ್ವಾತಂತ್ರ್ಯವಿದೆ. ದೇವರು ನಮ್ಮನ್ನು ಒಳ್ಳೆಯದಕ್ಕಾಗಲಿ ಇಲ್ಲವೆ ಕೆಟ್ಟದಕ್ಕಾಗಲಿ ಬಲಾತ್ಕರಿಸುವುದಿಲ್ಲ, ಆದರೆ ಸತ್ಯ ಹಾಗೂ ಪರಿಶುದ್ಧತೆಗಿರುವ ದಾರಿಯನ್ನು ತೋರುವಲ್ಲಿ ಮತ್ತು ಅವುಗಳ ನಿಯಮಪಾಲನೆಯಲ್ಲಿ ನೆರವಾಗುವುದು, ಅವುಗಳನ್ನು ಅಲಕ್ಷಿಸಿದಲ್ಲಿ ಶಿಕ್ಷಿಸುವನು".೧

ಒಟ್ಟಿನಲ್ಲಿ ಮನುಷ್ಯನು ಈ ಅವಕಾಶವನ್ನು ಸದುಪಯೋಗ ಮಾಡಿಕೊಂಡಲ್ಲಿ ಅವನ ಆತ್ಮೋನ್ನತಿ, ದುರುಪಯೋಗ ಮಾಡಿಕೊಂಡಲ್ಲಿ ಅವನ ಅವನತಿ.

ಈ ಜಗತ್ತಿನ ಸೃಷ್ಟಿ ಮಾನವನ ಆತ್ಮೋದ್ಧಾರಕ್ಕಾಗಿಯೇ. ಇದು ಅಸಾಧ್ಯವಾದ ಕೆಲಸವಲ್ಲ. ಅಥವಾ ಸುಲಭದ ಕೆಲಸವೂ ಅಲ್ಲ. ಇದು ಕಷ್ಟಸಾಧ್ಯವಾದದ್ದು. *'ಶ್ರೇಯಾಂಸಿ ಬಹುವಿಘ್ನಾನಿ'* ಎಂದಿಲ್ಲವೆ. ಮನುಷ್ಯ ಅದಕ್ಕಾಗಿ



**- ಪ್ರೊ. ಜಿ.ಎಸ್. ರೇಚಣ್ಣ**
(ನಿ) ಧಾರವಾಡ ವಿಶ್ವವಿದ್ಯಾನಿಲಯ
ಮನೆ ನಂ. 374, "ಶಿವಯೋಗಿ"
ವೆಸ್ಟ್ ಆಫ್ ಬಿ.ಇಡಿ ಕಾಲೇಜು,
ಕುವೆಂಪುನಗರ, ಮೈಸೂರು -23.
ದೂ.: 2542239.

ಹಂಬಲಿಸಿ ದೀರ್ಘಕಾಲ ಪಟ್ಟುಬಿಡದೆ ಹೆಣಗಾಡಬೇಕು. "ದೇವರನ್ನು ಮುಖಾಮುಖಿಯಾಗಲು ನಾನು ಕಳೆದ ಮೂವತ್ತುವರ್ಷಗಳಿಂದಲೂ ಹೆಣಗಾಡುತ್ತಿದ್ದೇನೆ"೨ ಎಂದಿದ್ದಾರೆ ಮಹಾತ್ಮಾ ಗಾಂಧಿಯವರು.

ಆತ್ಮೋದ್ಧಾರಕ್ಕೆ ಸಮ್ಯಕ್‌ಜ್ಞಾನ ಅವಶ್ಯಕ. ಆದರೆ ಅಷ್ಟೇ ಸಾಲದು. ಅದಕ್ಕೆ ಪೂರಕವಾಗಿ ಮನುಷ್ಯನು ನೈತಿಕ ಪರಿಶುದ್ಧತೆಯನ್ನು ಗಳಿಸಿಕೊಳ್ಳಬೇಕು. ಮಾನವನು ದುಶ್ಚಟದಿಂದ ಮುಕ್ತನಾಗದೆ ಮುಕ್ತಿಗೆ ಅರ್ಹನಾಗಲಾರ. "ನ ವಿರತೋ ದುಶ್ಚರಿತಾತ್, ನ ಶಾಂತೋ ನ ಸಮಾಹಿತ:" ಎಂಬುದಾಗಿ ಕಠೋಪನಿಷತ್ತು ನೈತಿಕ ಪರಿಶುದ್ಧತೆಗೆ ಒತ್ತು ಕೊಟ್ಟಿದೆ. ಈ ಮಾತು ಸಂತನಾದ ಮಾರ್ಕನು ಸುವಾರ್ತೆಯಲ್ಲಿ ಹೇಳಿರುವ ಮಾತನ್ನು ನೆನಪಿಗೆ ತಂದುಕೊಡುವುದು. ಅದೆಂದರೆ, "ದುಶ್ಚರಿತನು ದೇವರ ಸಾಮ್ರಾಜ್ಯವನ್ನು ಪ್ರವೇಶಿಸುವುದಕ್ಕಿಂತ ಸುಲಭವಾಗಿ, ಒಂಟೆ ಸೂಜಿಯ ಕಣ್ಣಿನ ಮೂಲಕ ಹಾದು ಹೋಗಲು ಸುಲಭ".೩

ಶಿವಶರಣರು ಹೇಳುವಂತೆ :"ಅಟ್ಟವನೇರುವುದಕ್ಕೆ ನಿಚ್ಚಣಿಕೆಯೆ ಸೋಪಾನವಯ್ಯ, ಹರಪದವನೇರುವುದಕ್ಕೆ ಶ್ರೀಗುರು ಹೇಳಿದ ಸದಾಚಾರವೇ ಸೋಪಾನವಯ್ಯ". ೪

ನೈತಿಕಶಿಕ್ಷಣದ ಮೂಲಕ ಮನುಷ್ಯನು ತನ್ನ ಆತ್ಮೋದ್ಧಾರಕ್ಕೆ ಪ್ರತಿಕೂಲವಾದ, ತನ್ನೊಳಗೆ ಮನೆ ಮಾಡಿಕೊಂಡಿರುವ ದುರ್ಗುಣ ಅಥವಾ ಆಸುರೀಗುಣಗಳನ್ನು ತ್ಯಜಿಸಿ ಸದ್ಗುಣ ಅಥವಾ ದೈವೀಗುಣಗಳನ್ನು ರೂಢಿಸಿಕೊಳ್ಳಬೇಕೆಂಬುದನ್ನು ಪ್ರತಿಯೊಂದು ಧರ್ಮವು ಬೋಧಿಸುತ್ತದೆ. ಸದ್ಗುಣಗಳು ಸದ್ವರ್ತನೆಗೆ ಪ್ರೇರಕ. ದುರ್ಗುಣಗಳು ದುರ್ವರ್ತನೆಗೆ ಪ್ರೇರಕ. ಮನುಷ್ಯನಲ್ಲಿ ಈ ಎರಡು ಪರಸ್ಪರ ವಿರುದ್ಧಗುಣಗಳಿದ್ದು ಅವುಗಳ ತಿಕ್ಕಾಟವೆ ಧರ್ಮಾಧರ್ಮಗಳ ಹೋರಾಟ. ಇದು ಮನುಷ್ಯನ ವಿವೇಕಶಕ್ತಿ ಎದುರಿಸಬೇಕಾದ ಸಮಸ್ಯೆ. ಮನುಷ್ಯನಿಗೆ ಎದುರಾಗಿರುವ ಸಮಸ್ಯೆ ಎಂದರೆ ಅವನಲ್ಲಿರುವ ಪವಿತ್ರ ಹಾಗೂ ಅಪವಿತ್ರ ಗುಣಗಳ ಮಧ್ಯೆ ನಡೆಯುವ ಘರ್ಷಣೆ. ಯೋಗಸೂತ್ರಭಾಷ್ಯವು, ಮನವೆಂಬ ಹೊನಲು ಎರಡು ದಿಕ್ಕಿನಲ್ಲಿ ಪ್ರವಹಿಸುತ್ತದೆ. ಒಂದು ಪುಣ್ಯದತ್ತ ನಡೆಸಿದರೆ, ಇನ್ನೊಂದು ಪಾಪದತ್ತ ಒಯ್ಯುತ್ತದೆ ಎನ್ನುತ್ತದೆ. ಈ ಘರ್ಷಣೆಯನ್ನು ನಿವಾರಿಸಿ ವ್ಯಕ್ತಿತ್ವವನ್ನು ಸಮಗ್ರಗೊಳಿಸುವುದು ಧರ್ಮದ ಗುರಿ. ಇದು ಮಾನವಬಿಕ್ಕಟ್ಟಿನ ಸಮಸ್ಯೆಯೆ ಹೊರತು ಪಶುಗಳ ಮತ್ತು ದೇವತೆಗಳ ಸಮಸ್ಯೆಯಲ್ಲ"೫ ಎನ್ನುತ್ತಾನೆ ಅರಿಸ್ಟಾಟಲ್.

ಮನುಷ್ಯನ ಹಿರಿಮೆ ಪ್ರಕಟವಾಗುವುದು ಅವನು ಅಧರ್ಮವನ್ನು ತ್ಯಜಿಸಿ ಧರ್ಮಾಚರಣೆಯಲ್ಲಿ ತೊಡಗಿಕೊಂಡಾಗ.

ಸದ್ಗುಣಗಳನ್ನು ಜಾಗರೂಕತೆಯಿಂದ, ಸತತ ಅಭ್ಯಾಸದಿಂದ ಬೆಳೆಸಿ, ಪೋಷಿಸಿದಂತೆಲ್ಲ ಮನುಷ್ಯನಲ್ಲಿ ಮನೆ ಮಾಡಿಕೊಂಡಿರುವ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರಗಳು ದುರ್ಬಲಗೊಂಡು ಆತನು ಶೀಲಸಂಪನ್ನನಾಗುತ್ತಾನೆ. ಸದ್ಗುಣಿ ತನಗೂ ತನ್ನ ಲೋಕಕ್ಕೂ ವರವೆನಿಸಿದರೆ, ದುರ್ಗುಣಿಯು ತನಗೂ ತನ್ನ ಲೋಕಕ್ಕೂ ಒಂದು ಶಾಪವೆನಿಸುವನು.

ಒಂದು ದೇಶದ ಘನತೆಯು ಆ ದೇಶದ ಶ್ರೀಮಂತರನ್ನು ಅವಲಂಬಿಸಿರುವುದಿಲ್ಲ, ಶೀಲವಂತರನ್ನು ಅವಲಂಬಿಸಿದೆ. ಅಂದ ಮೇಲೆ ಶಿಕ್ಷಣದ ಗುರಿ ಯಾವುದಿರಬೇಕೆಂಬುದನ್ನು ತರ್ಕಿಸುವುದು ಕಷ್ಟದ ಕೆಲಸವಲ್ಲ. ಪ್ರೊ. ರಾಧಾಕೃಷ್ಣನ್‌ರವರು ಹೇಳುವಂತೆ, "ಕ್ಷುದ್ರ ನಡವಳಿಕೆಯ ಪುರುಷ ಮತ್ತು ಸ್ತ್ರೀಯರುಗಳಿರದ ಬೃಹತ್ ರಾಷ್ಟ್ರನಿರ್ಮಾಣ ಯಾವನಿಂದಲೂ ಸಾಧ್ಯವಿಲ್ಲ".೬

ಮನುಷ್ಯನು ಸದ್ಗುಣಿಯಾಗಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಈ ಸದ್ಗುಣಗಳು ಯಾವುವು ? ನಮಗೆ ತಿಳಿದಿರುವ ಎಲ್ಲ ಧರ್ಮಗಳು ಸದ್ಗುಣಗಳ ಬಗ್ಗೆ ವಿವೇಚಿಸಿವೆ. ಆದರೆ ಪ್ರತಿಯೊಂದು ಧರ್ಮವು ಅವುಗಳಲ್ಲಿ ಕೆಲವನ್ನು ಪ್ರಧಾನವೆಂದೂ ಇನ್ನುಳಿದವುಗಳನ್ನು ಗೌಣವೆಂದೂ ಪರಿಗಣಿಸುತ್ತದೆ. ಒಂದು ಧರ್ಮದ ವೈಶಿಷ್ಟ್ಯವನ್ನು ಅದು ಪ್ರಧಾನವೆಂದು ಪರಿಗಣಿಸುವ ಸದ್ಗುಣಗಳು ಬಹುಪಾಲು ನಿರ್ಣಯಿಸುತ್ತವೆ ಎನ್ನಬಹುದು. ಹಿಂದೂ ಧರ್ಮದ ಪ್ರಕಾರ (1)ಸತ್ತ್ವಶುದ್ಧಿ (2)ಶಮ ಮತ್ತು ದಮ (3) ವೈರಾಗ್ಯ (4) ಸತ್ಯ ಮತ್ತು (5)ಅಹಿಂಸೆ ಇವು ಪ್ರಧಾನ ಸದ್ಗುಣಗಳು. "ಸದ್ಗುಣಗಳು ಆತ್ಮದ ಆಭರಣಗಳು" ಎಂದಿದ್ದಾರೆ ಡಾ. ಡಿ.ಎಸ್. ಶರ್ಮರವರು. ೭

ಸುಪ್ರಸಿದ್ಧ ತತ್ತ್ವಜ್ಞಾನಿ ಸಾಕ್ರಟೀಸನ ಪ್ರಕಾರ 'ಜ್ಞಾನವೇ ಸದ್ಗುಣ' 'Knowledge is virtues'.ಸಾಕ್ರಟೀಸನ ಈ ವ್ಯಾಖ್ಯೆಯು ಶರಣಸಂಕುಲದಲ್ಲಿಯೇ ಅತ್ಯಂತ ಕಿರಿಯ ವಯಸ್ಸಿನ ಹಿರಿಯ ಜ್ಞಾನಿ ಎನಿಸಿಕೊಂಡಿದ್ದ ಚನ್ನಬಸವಣ್ಣನ "ಕ್ರಿಯೆಯೇ ಜ್ಞಾನ; ಜ್ಞಾನವೇ ಕ್ರಿಯೆ" ಎಂಬ ಮಾತಿನಲ್ಲಿ ಸ್ಪಷ್ಟವಾಗುತ್ತದೆ.

ಶರಣರ ದೃಷ್ಟಿಯಲ್ಲಿ ಸದ್ಗುಣ Virtues ವೆಂಬುದು ಸದಾಚಾರ. 'ಸದಾಚಾರ'ದ ವಿರುದ್ಧ ಪದವೇ 'ದುರಾಚಾರ'(Vice). ಸದಾಚಾರದಲ್ಲಿ ಕ್ರಿಯೆ ಮತ್ತು ಜ್ಞಾನಗಳ ಅವಿನಾಭಾವ ಸಂಬಂಧವನ್ನು ಕಾಣುತ್ತೇವೆ. ಇವೆರಡರಲ್ಲಿ ಒಂದನ್ನು ಬಿಟ್ಟು ಇನ್ನೊಂದು ಸದಾಚಾರವಾಗಲಾರದು. ಚನ್ನಬಸವಣ್ಣನ ಕೆಳಗಿನ ವಚನದಲ್ಲಿ ಈ ಅಂಶವು ಸ್ಪಷ್ಟವಾಗಿದೆ.

*ಕ್ರಿಯೆಯೇ ಜ್ಞಾನ ಜ್ಞಾನವೇ ಕ್ರಿಯೆ*
*ಜ್ಞಾನವೆಂದರೆ ತಿಳಿಯುವುದು. ಕ್ರಿಯೆ*
*ಎಂದರೆ ತಿಳಿದಂತೆ ಮಾಡುವುದು.*
*ಪರಸ್ತ್ರೀಯ ಭೋಗಿಸಬಾರದೆಂಬುದೇ ಜ್ಞಾನ.*
*ಅದರಂತೆ ಆಚರಿಸುವುದೇ ಕ್ರಿಯೆ.*
*ಅರಿತೂ ಆಚರಿಸದಿದ್ದರೆ, ಅದೇ ಅಜ್ಞಾನ*
*ಕೂಡಲ ಚನ್ನ ಸಂಗಮದೇವ.*

ಅರಿವು ಮತ್ತು ಆಚರಣೆಗಳ ಸಂಗಮವೇ ಸದ್ಗುಣ. ಕ್ರಿಯೆ ಮತ್ತು ಜ್ಞಾನಗಳ ಸಂಗಮವೇ ಸದ್ಗುಣ. ಕ್ರಿಯೆಗೆ ಬಾರದ ಜ್ಞಾನ ನಿಷ್ಪ್ರಯೋಜಕ. ಜ್ಞಾನವಿಲ್ಲದ ಕ್ರಿಯೆ ಮನುಷ್ಯನ ಬದುಕಿಗೆ ಮಾರಕ.

**ಆಧಾರ ಗ್ರಂಥಗಳು :**

೧. Man is not a sport of Fate. He has the freedom to choose the right or the wrong. God does not compete as to good or evil but shows as the way to truth and purity and helps to observe the laws, though, he punished as when we neglect them.
Indian Relegions 'p' 134. Dr. S. Radhakrishnan.

೨. For the Left thirty years, I have been Still to see god face to face. Heritage Dr. S. Radhakrishnan page 78.

೩. It is easier for the camel to pass through the eye of a needle than for the undivine man to enter the kingdom of god.

೪. ವಚನಗಳಲ್ಲಿ ವೀರಶೈವಧರ್ಮ. ಡಾ. ಎಚ್. ತಿಪ್ಪೇರುದ್ರಸ್ವಾಮಿ. ಪುಟ 281.

೫. The problem facing the man is the conflict between the divine and the undivine in him. Yogasuthra - Bhashya say that the stream of mind flows in two directions,'the one leading to virtues the other to vice........... it can concerns the human preditement.

೬ "one cannot have a great nation with men

೭ Virtues are soul's ornaments. The primer of Hiduism.

page 27, Dr. D.S. Sharma. and women of small character."

True Knowledge .p. 145 S. Radhakrishnan.



### ಪ್ರೀತಿ

ಒಂದು ಹಿಡಿ ಪ್ರೀತಿ, ಒಂದು ಬಿಗಿಯಾದ ಅಪ್ಪುಗೆ ಮತ್ತು ಒಂದು (ಸುದೀರ್ಘ) ಚುಂಬನ! ಪುಟ್ಟ ಮಗುವಿಗೆ ತಾಯಿಯಿಂದ, ಹದಿಹರೆಯದಲ್ಲಿ ಗೆಳೆಯರಿಂದ, ಪ್ರೌಢವಯಸ್ಕರಿಗೆ ದಾಂಪತ್ಯದಿಂದ, ವಯಸ್ಸಾದವರಿಗೆ ಮೊಮ್ಮಕ್ಕಳಿಂದ ಸಿಗುವಂಥ ಪ್ರೀತಿ ಅದು. ಅದನ್ನು ಮಮತೆ ಎನ್ನಿ, ಪ್ರೇಮವೆನ್ನಿ, ಕಾಮವೆನ್ನಿ, ವಾತ್ಸಲ್ಯವೆನ್ನಿ! ಯಾವ ಹೆಸರಿಂದ ಬೇಕಾದರೂ ಕರೆಯಿರಿ. ಅದು ಸಿಗದೆ ಹೋದರೆ ವ್ಯಕ್ತಿ ಬಣಗುತ್ತ ಹೋಗುತ್ತಾನೆ. ನೀರಸವಾಗುತ್ತ ಹೋಗುತ್ತಾನೆ. ಇದು ಮಾನವನಿಗಷ್ಟೆ ಸೀಮಿತವಲ್ಲ. ಪ್ರಾಣಿಗಳೂ ಮೈದಡವಿ, ಮುದ್ದಾಡಿ ಚೈತನ್ಯವನ್ನು ಪಡೆದುಕೊಳ್ಳುತ್ತವೆ. ಅದೊಂದು ಬೆರಗು ಹುಟ್ಟಿಸುವ ಕ್ರಿಯೆ. ಅದೊಂದು ಕಲಿಯದೇ ಕಲಿಸುವವರಿಲ್ಲದೇ ಕಲಿಯುವ ವಿದ್ಯೆ. ಮುಟ್ಟಿದರೆ ಒಲಿಯುವ ವಿದ್ಯೆ ಮತ್ತು ಇಡೀ ದೇಹದ ಆರೋಗ್ಯವನ್ನು ಕಾಪಾಡುವ ಸಂಜೀವಿನಿ. ಮನುಷ್ಯನ ಮಾನಸಿಕ ಆರೋಗ್ಯ ಚೆನ್ನಾಗಿದ್ದಷ್ಟು, ದೈಹಿಕ ಆರೋಗ್ಯವು ಚೆನ್ನಾಗಿರುತ್ತೆ. ಮನಸ್ಸನ್ನು ಸದಾ ಉಲ್ಲಸಿತವಾದ ಸ್ಥಿತಿಯಲ್ಲಿಡುವುದು ದೈಹಿಕ ಮತ್ತು ಮಾನಸಿಕ ಹಿತಸ್ಪರ್ಶ.

# ಊರಕಳಶ

ಮ|| ರಾ|| ಶ್ರೀಯುತ ವೇ|| ಬ್ರಂ|| ಶ್ರೀ ಜಿನ್ನಹಳ್ಳಿ ಕುಮಾರಾರಾಧ್ಯರ ಪೂರ್ವಿಕರು ಆಂಧ್ರ ಪ್ರದೇಶಕ್ಕೆ ಸೇರಿದವರು. ಇವರು ಶಿವಾದ್ವೈತಿಗಳು. ಸ್ವಯಂ ಆಚಾರ್ಯರು. ರಾಜವಂಶಕ್ಕೆ ಗುರುಗಳಾಗಿ ಮಾರ್ಗದರ್ಶಕರಾಗಿದ್ದರು. ಇವರು ಸೋಸಲೆ ಗುರುಮಠದ ವಂಶಸ್ಥರು. ಇವರು ತಾರೀಖು 21-6-1885ರಲ್ಲಿ ಹೆಚ್. ಡಿ. ಕೋಟೆ ತಾಲ್ಲೂಕು ಜಿನ್ನಹಳ್ಳಿ ಆರಾಧ್ಯರ ಮನೆತನದ ವೇ|| ಬ್ರಂ|| ಶ್ರೀ ರೇವಣಾರಾಧ್ಯರು ಹಾಗೂ ಬಸವಾಜಮ್ಮನವರ ಸುಪುತ್ರರಾಗಿ ಜನಿಸಿದರು. ಇವರು ಬಾಲ್ಯದಲ್ಲಿ ತಂದೆಯವರ ಮಾರ್ಗದರ್ಶನದಲ್ಲಿ ಸಂಸ್ಕೃತ ವೇದ, ಆಗಮ, ಜ್ಯೋತಿಷ್ಯ ಹಾಗೂ ಆಯುರ್ವೇದಶಾಸ್ತ್ರ ವಿದ್ಯೆಗಳನ್ನು ಮೈಗೂಡಿಸಿ ಕೊಂಡರು. ಈ ಎಲ್ಲ ವಿಷಯಗಳು ಜನ ಸೇವೆಗೆ ಯಾವಾಗಲೂ ಸಿದ್ಧವಾಗಿರುತ್ತಿದ್ದವು. ಅಲ್ಲದೆ ಎಲ್ಲ ವರ್ಗದ ಜನರಿಗೆ ಇವರು ಬೇಕಾದವರು. ಇವರ ಜ್ಯೋತಿಶ್ಯಾಸ್ತ್ರದಿಂದ ಹೆಚ್ಚು ಜನರು ಆಕರ್ಷಿತರಾಗಿದ್ದರು. ಆಯುರ್ವೇದದಲ್ಲಿ ಜನಮೆಚ್ಚುಗೆ ಪಡೆದಿದ್ದರು. ಪತ್ರಬರಹಗಾರರಾಗಿ ಪ್ರಾಮಾಣಿಕರಾಗಿದ್ದರು. ದಾನ, ಧರ್ಮ, ಪರೋಪಕಾರ, ದಯೆ, ಕ್ಷಮೆ, ಇವರ ದಿನ ಚರಿಯಾಗಿ ಇವರ ವರ್ಚಸ್ಸು ಮೇಲ್ಮಟ್ಟದಲ್ಲಿ ಇತ್ತು. ಅಧ್ಯಾತ್ಮ ಚಿಂತಕರಾಗಿದ್ದರು. ಇವರ ಸಾಧನೆ ಒಂದೆರಡೆ? ದೇವರಲ್ಲಿ ನಂಬಿಕೆ, ವಿದ್ವಾಂಸರಲ್ಲಿ ಅಪಾರವಾದ ಪ್ರೀತಿ, ಬಡವಬಲ್ಲಿದನೆಂಬ ಭೇದಭಾವವಿಲ್ಲದ ಸರಳತನದಲ್ಲಿ ಇವರ ಸೌಹಾರ್ದತೆ, ಅತಿಥಿಗಳ ಸತ್ಕಾರ್ಯಾಸಕ್ತಿ, ಸರಕಾರದಲ್ಲಿ ಮೇಲಧಿಕಾರಿಗಳ ಒಡನಾಟ, ತಮ್ಮ ತಾಲ್ಲೂಕ್, ಹೋಬಳಿ, ಗ್ರಾಮದ ಬಗ್ಗೆ ಹೆಚ್ಚಿನ ಆಸಕ್ತಿ ಉಳ್ಳವರಾಗಿ ವಿದ್ಯಾರ್ಥಿಗಳಿಗೆ ಶಾಲೆ ನಿರ್ಮಾಣ, ಜನವ್ಯವಹಾರಕ್ಕೆ ಅಂಚೆವ್ಯವಸ್ಥೆ, ಸುವ್ಯವಸ್ಥೆಗೆ ಪೋಲಿಸ್ ಸ್ಟೇಷನ್, ಜನಹಿತಕ್ಕಾಗಿ ಆಸ್ಪತ್ರೆ ಹಾಗೂ ರಸ್ತೆನಿರ್ಮಾಣ, ಜನೋಪಕಾರಕ್ಕಾಗಿ ಮಂತ್ರಿಮಹೋದಯರನ್ನು, ರಾಜರನ್ನು, ಕಂಡು, ಹಠಹಿಡಿದು ಸಾಹಸ ಮೀರಿ ಕೆಲಸಗಳನ್ನು ಮಾಡಿಸುವ ಧೈರ್ಯವಂತರಾಗಿದ್ದು ಸಾರ್ವಜನಿಕ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.



ವಿದ್ವಾನ್
ಎಸ್. ಲೋಕೇಶಾರಾಧ್ಯ ಎಂ.ಎ.,
ಪ್ರಾಧ್ಯಾಪಕರು.
ಸರ್ಕಾರಿ ಶ್ರೀಮಹಾರಾಜಸಂಸ್ಕೃತ ಕಾಲೇಜು, ಮೈಸೂರು
ದೂ. : 2484617
Mob : 9880620627

ಜಿನ್ನಹಳ್ಳಿಗೆ ಕಳಶ ಪ್ರಾಯರಾಗಿದ್ದ ಆರಾಧ್ಯರು ಆಚಾರ್ಯರೂ ಆಗಿದ್ದರು. ಆರಾಧ್ಯ ಅಥವಾ ಆಚಾರ್ಯ ಪದಗಳು ಎರಡೂ ಒಂದೇ ಅರ್ಥವನ್ನು ಕೊಡುತ್ತವೆ. ಆಚಾರ್ಯ ಅಥವಾ ಆರಾಧ್ಯ ಎಂದರೆ ಪರಶಿವನ ಪಂಚಮುಖಿಗಳಿಂದ ಬಂದವರು ಎಂದು. ಇವರು ಶಾಸ್ತ್ರಗಳನ್ನು ಮತ್ತು ಶಾಸ್ತ್ರಾರ್ಥಗಳನ್ನು ಚೆನ್ನಾಗಿ ಅರಿತು, ಅವುಗಳ ಪರಾಮರ್ಶೆ ಮಾಡುವ ಸಾಮರ್ಥ್ಯವುಳ್ಳವರಾಗಿದ್ದು, ಶಾಸ್ತ್ರೋಕ್ತ ಆಚಾರಗಳನ್ನು ತಾವು ಪಾಲಿಸತಕ್ಕವರಾಗಿ ಅವುಗಳನ್ನು ತಮ್ಮ ಶಿಷ್ಯವೃಂದಕ್ಕೂ ಬೋಧಿಸಿ ಅವರನ್ನು ಆಚಾರದಲ್ಲಿ ತೊಡಗಿಸತಕ್ಕವರೇ ಆರಾಧ್ಯ ಅಥವಾ ಆಚಾರ್ಯ ಪದದ ಅರ್ಥವ್ಯವಸ್ಥೆಯಾಗುತ್ತದೆ. ಇಂತಹ ಆಚಾರ್ಯ ಎಂಬ ಅನ್ವರ್ಥ ಹೆಸರನ್ನು ಪಡೆದ ಶ್ರೀ ರೇಣುಕಾಚಾರ್ಯ, ಶ್ರೀ ದಾರುಕಾಚಾರ್ಯ, ಶ್ರೀ ಏಕೋರಾಮಾರಾಧ್ಯ, ಶ್ರೀ ಪಂಡಿತಾರಾಧ್ಯ, ಶ್ರೀ ವಿಶ್ವಾರಾಧ್ಯ ಎಂಬ ಐವರು ಆರಾಧ್ಯರೂ ಮತವನ್ನು ಸ್ಥಾಪಿಸಿರುವರು ಎಂದು ಸಿದ್ಧಾಂತಶಿಖಾಮಣಿ ತಿಳಿಸುತ್ತದೆ.

*ಆಚಿನೋತಿ ಹಿ ಶಾಸ್ತ್ರಾರ್ಥಾನ್ ಆಚಾರೇ ಸ್ಥಾಪಯತ್ಯಪಿ*
*ಸ್ವಯಮಾಚರತೇ ಯಸ್ತು ಸ ಆಚಾರ್ಯ ಇತಿ ಸ್ಮೃತಿಃ ||*

ವೀರಶೈವಧರ್ಮದಲ್ಲಿ ಮೊದಲ ಆದ್ಯತೆ ಆರಾಧ್ಯರಿಗೆ ಅಥವಾ ಆಚಾರ್ಯರಿಗೆ ಇತ್ತು ಎಂಬುದಕ್ಕೆ ಸಿದ್ಧಾಂತಶಿಖಾಮಣಿ, ಶ್ರೀಕರಭಾಷ್ಯಗ್ರಂಥಗಳು ಉದಾಹರಣೆಯಾಗಿರುತ್ತವೆ. ಇಂತಹ ಆರಾಧ್ಯರು ವೇದ, ಆಗಮ, ಶಾಸ್ತ್ರ, ಜ್ಯೋತಿಷ್ಯ, ಸಂಸ್ಕೃತ ಪಾಂಡಿತ್ಯ ಹೊಂದಿದವರಾಗಿ ಅವರು ಶಿಷ್ಯರನ್ನು ಸಂಪಾದಿಸಿ ವೀರಶೈವ ಧರ್ಮೋಪದೇಶ ಮಾಡುತ್ತಿರುವುದು ಇಂದಿಗೂ ಗಮನಾರ್ಹವಾಗಿರುತ್ತದೆ.

ಶ್ರೀಯುತ ಆರ್. ಕುಮಾರಾರಾಧ್ಯರು ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲ ಸಂಪನ್ನರಾಗಿದ್ದರು ಇವರು ಸ್ವಧರ್ಮಾಚರಣೆ ಹಾಗೂ ಪರಧರ್ಮದಲ್ಲಿ ಪ್ರೀತಿ ಉಳ್ಳವರಾಗಿ ಸಹಬಾಳ್ವೆ, ಕಾರ್ಯತತ್ಪರತೆ ಉಳ್ಳವರಾಗಿದ್ದರು.

ಅಷ್ಟಾವರಣ :- ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ, ತೀರ್ಥ, ಪ್ರಸಾದ. ಗುರು, ಲಿಂಗ, ಜಂಗಮ ಇವು ಸಾಧ್ಯವಸ್ತುಗಳು, ಭಸ್ಮ, ರುದ್ರಾಕ್ಷಿ, ಮಂತ್ರ ಸಾಧಕ ವಸ್ತುಗಳು ತೀರ್ಥ, ಪ್ರಸಾದ ಫಲಪ್ರಾಪ್ತಿಗಳು

**1) ಗುರು -**

*ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕೃತ್*
*ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ||*

"ಗು" ಎಂಬ ಅಕ್ಷರವು "ಅಂಧಕಾರ" (ಕತ್ತಲೆ) ಎಂಬರ್ಥವನ್ನು "ರು" ಎಂಬ "ಅಕ್ಷರವು" ಆ ಅಂಧಕಾರವನ್ನು ಹೋಗಲಾಡಿಸುವುದು ಎಂಬರ್ಥವನ್ನು ಕೊಡುತ್ತದೆ. ಅಂದರೆ "ಯಾವಾತನು ತನ್ನ ಜ್ಞಾನೋಪದೇಶವೆಂಬ ಬೆಳಕಿನ ಮುಖಾಂತರ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸುವನೋ ಅವನೇ "ಗುರು".

**2) ಲಿಂಗ -**

*ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ*
*ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಮ್ ||*

ಯಾವ ವಸ್ತುವಿನಲ್ಲಿ ಎಲ್ಲ ಜಗತ್ತು ಅಡಗಿರುತ್ತದೋ ಮತ್ತು ಯಾವುದರ ಮುಖಾಂತರ ಮತ್ತೆ ಮತ್ತೆ ಉತ್ಪತ್ತಿಯನ್ನು ಹೊಂದುತ್ತದೋ ಆ ಶಾಶ್ವತವಾದ ಪರಬ್ರಹ್ಮವೇ "ಲಿಂಗ" (ಲೀನ ಮತ್ತು ಉತ್ಪತ್ತಿ).

**3) ಜಂಗಮ -**

*ಏಕ ಏವ ಶಿವಃ ಸಾಕ್ಷಾತ್ ಸರ್ವಾನುಗ್ರಹಕಾರಕಃ*
*ಗುರುಜಂಗಮಲಿಂಗಾತ್ಮಾ ವರ್ತತೇ ಭಕ್ತಿ ಮುಕ್ತಿ ದಃ ||*

ಸರ್ವಜೀವರನ್ನು ಅನುಗ್ರಹಿಸುವ ಸಲುವಾಗಿ ಮತ್ತು ಅವರಿಗೆ ಭೋಗ ಮೋಕ್ಷಗಳನ್ನು ಕರುಣಿಸುವ ಸಲುವಾಗಿ ಆ ಪರಶಿವನೇ ಗುರು, ಲಿಂಗ, ಜಂಗಮ ಎಂಬ ಮೂರು ರೂಪವುಳ್ಳವನಾಗಿದ್ದಾನೆ. ಜಂಗಮ = ಸಂಚರಿಸು.

**4) ಭಸ್ಮ (ವಿಭೂತಿ) -**

ವಿಭೂತಿ ಎಂದರೆ ಸಂಪತ್ತು, ಐಶ್ವರ್ಯ, ಇತ್ಯಾದಿ ಅರ್ಥವಾಗುತ್ತದೆ. ಇಲ್ಲಿ ಐಶ್ವರ್ಯವೆಂದರೆ ಹಣವೆಂದರ್ಥವಲ್ಲ ಅಂದರೆ - ಶಿವನ ತೇಜಸ್ಸು, ಕಾಂತಿ ಎಂದೇ ಅರ್ಥ.

**5) ರುದ್ರಾಕ್ಷಿ -**

*ಮೃತಿಕಾಲೇ ತು ರುದ್ರಾಕ್ಷಂ ನಿಷ್ಪೀಡ್ಯ ಸಹ ವಾರಿಣಾ*
*ಯಃ ಪಿಬೇಚ್ಚಿಂತಯನ್ ರುದ್ರಂ ರುದ್ರಲೋಕಂ ಸ ಗಚ್ಛತಿ ||*

ಅಂದರೆ ಯಾರು ತನ್ನ ಮರಣ ಕಾಲದಲ್ಲಿ ರುದ್ರಾಕ್ಷವನ್ನು ನೀರಿನಲ್ಲಿ ತೇಯ್ದು ಶಿವಧ್ಯಾನ ಮಾಡುತ್ತಾ ಕುಡಿಯುತ್ತಾರೋ ಅವರು ರುದ್ರಲೋಕವನ್ನು ಸೇರುತ್ತಾರೆ ಎಂದು ಸಿದ್ಧಾಂತ ವಾಕ್ಯವಾಗಿದೆ.

**6) ಮಂತ್ರ -**

*ನಮಃ ಶಬ್ದಂ ವದೇತ್ಪೂರ್ವಂ ಶಿವಾಯೇತಿ ತತಃ ಪರಮ್*
*ಮಂತ್ರಃ ಪಂಚಾಕ್ಷರೋ ಹ್ಯೇಷಃ ಸರ್ವಶ್ರುತಿಶಿರೋಗತಃ ||*

ವೇದಉಪನಿಷದಾದಿಗಳಲ್ಲಿ ಹೇಳಲ್ಪಟ್ಟಿರುವ ಪಂಚಾಕ್ಷರ ಮಂತ್ರ ಯಾವುದೆಂದರೆ - '*ನಮಃ ಶಿವಾಯ*'. ಇದಕ್ಕೆ ಓಂಕಾರವನ್ನು ಸೇರಿಸಿ ಹೇಳಿಕೊಂಡರೆ ಷಡಕ್ಷರಮಂತ್ರವಾಗುತ್ತದೆ. ಈ ಮಂತ್ರದಲ್ಲಿಯೇ ಶಿವ, ಶಕ್ತಿ, ಚರಾಚರಜಗತ್ತು ಎಲ್ಲವೂ ಅಡಗಿದೆ. ಇದರ ಜಪದಿಂದ ಎಲ್ಲವನ್ನೂ ಸಾಧಿಸಿದಂತಾಗುತ್ತದೆ.

**7) ತೀರ್ಥ (ಪಾದೋದಕ) -**

*ಅಥವಾ ಪಾದಶಬ್ದೇನ ಗುರುದೇವ ನಿಗದ್ಯತೇ*
*ಶಿಷ್ಯಶ್ಚೋದಕಶಬ್ದೇನ ತಯೋರೈಕ್ಯಂ ತು ವೀಕ್ಷಯಾ ||"*

ಪಾದೋದಕ ಬಹಳ ಮಹತ್ತರವಾದುದು ಇಲ್ಲಿ ಗುರು ಶಿಷ್ಯರ ಸಮರಸಭಾವನೆಗಳನ್ನು ಕಾಣಬಹುದು.

ಗುರು-ಜಂಗಮರ ಪಾದದಲ್ಲಿ ಸಮಸ್ತದೇವತೆಗಳು ತ್ರಿಮೂರ್ತಿಗಳು ಪುಣ್ಯತೀರ್ಥಗಳು ಅಡಗಿವೆಯೆಂದು ಹೇಳಲಾಗುತ್ತದೆ.

ಗುರು-ಜಂಗಮರ ಪಾದವನ್ನು ಭಕ್ತಿಯಿಂದ ಮುಟ್ಟಿ ನಮಸ್ಕರಿಸುವುದು ಮತ್ತು ಪಾದೋದಕವನ್ನು ಪಡೆಯುವುದು. ಪಾದಶಬ್ದವು ಗುರುವನ್ನು ಉದಕಶಬ್ದವು ಶಿಷ್ಯನನ್ನು ಬೋಧಿಸುತ್ತದೆ. "ಪಾದೋದಕ" ಪದವು ಗುರುಶಿಷ್ಯರ ಐಕ್ಯವನ್ನು ತಿಳಿಸುತ್ತದೆ.

**8) ಪ್ರಸಾದ -**

*"ಅನ್ನಜಾತೇ ತು ಭಕ್ತೇನ ಭುಜ್ಯಮಾನೇ ಶಿವಾರ್ಪಿತೇ*
*ಸಿಕ್ಥೇ ಸಿಕ್ಥೇಽಶ್ವಮೇಧಸ್ಯ ಯತ್ಫಲಂ ತದವಾಪ್ಯತೇ ||*

ಪದಾರ್ಥವು ಪ್ರಸಾದವಾಗಬೇಕೆಂದರೆ ಶಿವನಿಗೆ ಅರ್ಪಣೆ ಅಂದರೆ ನೈವೇದ್ಯವಾದ ಮೇಲೆ ಪ್ರಸಾದವಾಗುತ್ತದೆ.

ಅನ್ನವನ್ನು ಶಿವಾರ್ಪಣ ಮಾಡಿ ಆ ಪ್ರಸಾದವನ್ನು ಯಾರು ಸೇವಿಸುತ್ತಾರೋ ಅಂತಹವನಿಗೆ ಆ ಪ್ರಸಾದದ ಪ್ರತಿಯೊಂದು ಅಗಳಿನಿಂದಲೂ ಅಶ್ವಮೇಧಯಜ್ಞದ ಫಲ ದೊರೆಯುತ್ತದೆಂದು ಸಿದ್ಧಾಂತ ಶಿಖಾಮಣಿ ಹೇಳುತ್ತದೆ. ನಾವು ಏನನ್ನೇ ಸ್ವೀಕರಿಸಿದರೂ ಮೊದಲು ಶಿವನಿಗೆ ಅರ್ಪಿಸಿ ಅದನ್ನು ಪ್ರಸಾದವೆಂದು ಸ್ವೀಕರಿಸಬೇಕು.

ನಾವು ದೇವಸ್ಥಾನಕ್ಕೆ ಹೋಗುವಾಗ ತೆಂಗಿನಕಾಯಿ, ಬಾಳೇಹಣ್ಣು ತೆಗೆದುಕೊಂಡು ಹೋಗುತ್ತೇವೆ. ಯಾರಾದರೂ ಏನು ಎಂದು ಕೇಳಿದರೆ ಹಣ್ಣುಕಾಯಿ ಎಂದು ಹೇಳುತ್ತೇವೆ. ದೇವಸ್ಥಾನದಿಂದ ಬರುವಾಗ ಏನು ಚೀಲದಲ್ಲಿ ? ಎಂದರೆ ದೇವರ ಪ್ರಸಾದವೆಂದು ಹೇಳುತ್ತೇವೆ.

**ಷಟ್ ಸ್ಥಲಗಳು**

| | | |
|---|---|---|
| 1) ಭಕ್ತಸ್ಥಲ | 2) ಮಾಹೇಶ್ವರಸ್ಥಲ | 3) ಪ್ರಸಾದಿಸ್ಥಲ |
| 4) ಪ್ರಾಣಲಿಂಗಿಸ್ಥಲ | 5) ಶರಣಸ್ಥಲ | 6) ಐಕ್ಯಸ್ಥಲ |

**1) ಭಕ್ತಸ್ಥಲ -** ಸ್ನಾನಮಾಡಿ ಮಡಿಯುಟ್ಟು ಪೂಜಾಗೃಹದಲ್ಲಿ ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕುಳಿತು ಭಸ್ಮರುದ್ರಾಕ್ಷಧಾರಣಾದಿಗಳನ್ನುಮಾಡುವುದು ಭಕ್ತಸ್ಥಲಪೂಜಾಕ್ರಮ.

**2) ಮಹೇಶಸ್ಥಲ -** ಗುರೂಪದಿಷ್ಟಮಾರ್ಗದಿಂದ ಷಡಕ್ಷರಮಹಾಮಂತ್ರವನ್ನು ಯಥಾಶಕ್ತಿ ಜಪಿಸುವುದು ಮಾಹೇಶ್ವರಸ್ಥಲಪೂಜೆ.

**3) ಪ್ರಸಾದಿ -** ಕರಂಡಕದಿಂದ ತನ್ನ ಇಷ್ಟಲಿಂಗವನ್ನು ತೆಗೆದು ಕರಸ್ಥಲದೆಲ್ಲಿಟ್ಟು ನಿರೀಕ್ಷಿಸುವುದು ಪ್ರಸಾದಿಸ್ಥಲಪೂಜೆ.

**4) ಪ್ರಾಣಲಿಂಗಿ -** ಪ್ರಾಪ್ತವಾದ ಪೂಜಾಸಾಮಗ್ರಿಗಳಿಂದ ಪೂಜಿಸುವುದು ಪ್ರಾಣಲಿಂಗಿಸ್ಥಲ ಪೂಜಾಕ್ರಮ.

**5) ಶರಣಸ್ಥಲ -** ಪ್ರಾಪ್ತಪದಾರ್ಥಗಳನ್ನು ಶಿವಾರ್ಪಣ ಮಾಡುವುದು ಶರಣಸ್ಥಲ ಪೂಜಾಕ್ರಮ.

**6) ಐಕ್ಯಸ್ಥಲ -** ಈ ಶಿವಪ್ರಸಾದವನ್ನು ಸ್ವೀಕರಿಸಿ ಆನಂದ ಲೋಲುಪನಾಗಿರುವುದು ಐಕ್ಯಸ್ಥಲ ಪೂಜಾಕ್ರಮ.

ಇವೆಲ್ಲವೂ ಶ್ರೀ ಆರ್. ಕುಮಾರಾರಾಧ್ಯರವರ ಅನುಭವದಲ್ಲಿತ್ತು ಎಂಬುದು ಸಾದೃಶ್ಯವಾಗುತ್ತದೆ.

* * *

## ಸಾರ್ಥಕ ಜೀವನ

ತಿಳಿದ ಬುದ್ಧಿವಂತರಿಗೆ, ಜ್ಞಾನಿಗಳಿಗೆ, ಸತ್ಪುರುಷರಿಗೆ, ಕಾರ್ಯತತ್ಪರರಿಗೆ, ಕರ್ತವ್ಯನಿಷ್ಠರಿಗೆ, ಸಾತ್ವಿಕರಿಗೆ, ಸದಾಚಾರಸಂಪನ್ನರಿಗೆ ತಮ್ಮ ಜೀವಿತದ ಸಮಯ ಅದೆಷ್ಟು ಅಮೂಲ್ಯ ಎಂಬುದು ಗೊತ್ತಿರುತ್ತದೆ. ಆದ್ದರಿಂದಲೇ ಇಂಥ ಬುದ್ಧಿಸಂಪನ್ನರು ತಮ್ಮ ಸಮಯವನ್ನು ಸರ್ವಾಂಗೀಣವಾಗಿ ಸದುಪಯೋಗಪಡಿಸಿಕೊಳ್ಳುತ್ತಾರೆ. ಕಾವ್ಯ, ಶಾಸ್ತ್ರ ಅಧ್ಯಯನ ತತ್ಪರರಾಗಿ, ಸದಾಕಾಲ ಜ್ಞಾನಸಂಪಾದನೆಯಲ್ಲಿ ನಿರತರಾಗಿರುತ್ತಾರೆ. ಇಂಥ ಜ್ಞಾನಾರ್ಜನೆಯಲ್ಲೇ ವಿನೋದವನ್ನು, ತಿಳಿವನ್ನು, ಸಂತಸ, ಸಂತೃಪ್ತಿಯನ್ನು ಸಮಾಧಾನವನ್ನು ಕಂಡುಕೊಳ್ಳುತ್ತಾರೆ, ಜ್ಞಾನಾರ್ಜನೆ ಮಾಡುತ್ತಾರೆ. ಹೀಗಾಗಿ ಬುದ್ಧಿವಂತರ ಜೀವಿತದ ಒಂದೇ ಒಂದು ಕ್ಷಣವೂ ವ್ಯರ್ಥವಾಗುವುದಿಲ್ಲ. ಅವರ ಜೀವಮಾನದ ಪ್ರತಿಯೊಂದು ಕ್ಷಣವೂ ಸದುಪಯೋಗವಾಗುತ್ತದೆ. ನಶ್ವರವಾದ ಜೀವವಂತೂ ಆದ್ಯಂತವಾಗಿ ಸಾರ್ಥಕವಾಗುತ್ತದೆ. ಬದುಕು ಅರ್ಥವಾಗುತ್ತದೆ.

ಸಮಯ ಎಂಬುದು ಅಮೂಲ್ಯ. ಇದನ್ನು ಕಿಂಚಿತ್ತೂ ಹಾಳುಮಾಡದೆ ಉಪಯೋಗಿಸಿಕೊಳ್ಳುವಂಥವನು ಬುದ್ಧಿವಂತ. ಪ್ರತಿಯೊಬ್ಬ ವ್ಯಕ್ತಿಗೆ ಸಿಗುವುದು ಒಂದೇ ಬದುಕು, ಒಂದೇ ಜೀವಿತ, ಆದ್ದರಿಂದ ತನ್ನ ಜೀವಿತದ ಅತ್ಯಮೂಲ್ಯ ಸಮಯವನ್ನು ಕಿಂಚಿತ್ತು ಹಾಳುಗೊಡವದೆ ಸದುಪಯೋಗಪಡಿಸಿಕೊಳ್ಳತಕ್ಕದ್ದು ಸಾರ್ಥಕ ಜೀವನವಾಗುತ್ತದೆ.

# ಜಿನ್ನಹಳ್ಳಿಯ ಜ್ಯೋತಿ

ಭಾರತದ ಅನೇಕ ಗ್ರಾಮಗಳಂತೆ ಜಿನ್ನಹಳ್ಳಿಯೂ ಒಂದು ಗ್ರಾಮ. ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೋಕಿನ ಹಂಪಾಪುರ ಹೋಬಳಿಯ ಈ ಗ್ರಾಮ ಉಳಿದೆಲ್ಲ ಗ್ರಾಮಗಳಿಗಿಂತ ವಿಶಿಷ್ಟಸ್ಥಾನದಲ್ಲಿ ನಿಲ್ಲುತ್ತದೆ. ಕಾರಣ ಈ ಪುಣ್ಯಭೂಮಿಯಲ್ಲಿ ಶ್ರೀ ಕುಮಾರಾರಾಧ್ಯರ ಜನನವಾಯಿತು. ಅಲ್ಲಿಂದೀಚೆಗೆ ಆ ಗ್ರಾಮಕ್ಕೆ ಶುಕ್ರದೆಸೆಯು ಉಂಟಾಯಿತು. ಪುಣ್ಯಜೀವಿಗಳ ಉದಯ ನಾಡಿಗೇ ಪುಣ್ಯೋದಯ.

ಜಿನ್ನಹಳ್ಳಿಯ ಶ್ರೀ ರೇವಣಾರಾಧ್ಯರು ಹಾಗೂ ಶ್ರೀಮತಿ ಬಸವಾಜಮ್ಮನವರ ಸುಪುತ್ರರಾಗಿ ಸಾವಿರದ ಎಂಟನೂರ ಎಂಭತ್ತೈದನೆ ಇಸವಿ ಜುಲೈ ಇಪ್ಪತ್ತೊಂದರಲ್ಲಿ ಆ ಕಾರಣಿಕ ಶಿಶುವಿನ ಜನನವಾಯಿತು. ಅವರೇ ಶ್ರೀ ಕುಮಾರಾರಾಧ್ಯರೆಂದು ನಾಮಾಂಕಿತಗೊಂಡು ಮುಂದೆ ಜನಮನದಲ್ಲಿ "ದೊಡ್ಡ ಬುದ್ಧಿ"ಯವರೆಂಬ ಗೌರವಕ್ಕೆ ಪಾತ್ರರಾದವರು.




**ಪ್ರೊ. ಜಗದಂಬಾ ಮಲ್ಲೇದೇವರು**
222/A, 12ನೆ ಮುಖ್ಯ ರಸ್ತೆ
ಈಜುವ ಕೊಳದ ರಸ್ತೆ
ಸರಸ್ವತೀ ಪುರಂ, ಮೈಸೂರು- 9
ದೂ - 2544589


ಆರಾಧ್ಯರದು ಮಧ್ಯಮವರ್ಗದ ಕುಟುಂಬ. ಆದರೆ ಹೃದಯಶ್ರೀಮಂತಿಕೆಯುಳ್ಳ ವ್ಯಕ್ತಿತ್ವವುಳ್ಳವರು. ಆರಾಧ್ಯ ಕುಟುಂಬಸ್ಥರೂ ಆಗಿ ಈ ಸಂಪ್ರದಾಯಕ್ಕೇ ಶರಣಾಗದೆ ಎಲ್ಲರನ್ನು ಸಮಭಾವದಿಂದ ಕಂಡವರು, ನಡಸಿಕೊಂಡವರು. *"ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ, ಇವ ನಮ್ಮವ, ಇವ ನಮ್ಮವ ಇವ ನಮ್ಮವನೆಂದೆನಿಸಯ್ಯ"* ಎಂಬ ಬಸವವಾಣಿಯನ್ನು ಅಕ್ಷರಶಃ ಪಾಲಿಸಿದವರು. ಸರಳ ಸಜ್ಜನಿಕೆಯ ಸಾಕಾರಮೂರ್ತಿಯಾಗಿ ಬೆಳೆದ ಕುಮಾರಾರಾಧ್ಯರು ಜನಸಾಮಾನ್ಯರ ಹಿತಕ್ಕಾಗಿ ತಮ್ಮನ್ನೇ ಮುಡಿಪಾಗಿಟ್ಟುಕೊಂಡವರು. ಹೀಗೆ ಬೆಳೆದ ಕುಮಾರಾರಾಧ್ಯರಿಗೆ ಪಾರ್ವತಮ್ಮನವರೊಡನೆ ವಿವಾಹ

ನೆರವೇರಿತು *'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ'* ಎಂಬ ಮನೋಧರ್ಮವನ್ನು ಹೊಂದಿರುವ ಪಾರ್ವತಮ್ಮ ಪತಿಯ ಜನಸೇವಾಕಾರ್ಯದಲ್ಲಿ ತಾವೂ ಭಾಗಿಗಳಾದರು. ಈ ದಂಪತಿಗಳ ಅನ್ಯೋನ್ಯತೆ ಹೇಗಿತ್ತೆಂದರೆ *'ಪರೋಪಕಾರಾರ್ಥಮಿದಂ ಶರೀರಂ'* ಎಂಬ ಉಕ್ತಿಯನ್ನು ಈ ಇರ್ವರೂ ಅಳವಡಿಸಿಕೊಂಡವರಾಗಿದ್ದರು. ಪತಿ ಊರ ಹೊರಗಿನ ಏಳಿಗೆಗೆ ದುಡಿದರೆ, ಪಾರ್ವತಮ್ಮ ಮನೆಗೆ ಬಂದ ಅತಿಥಿಗಳನ್ನು *'ಅತಿಥಿದೇವೋ ಭವ'*ಎಂಬ ಭಾವದಿಂದ ಸತ್ಕರಿಸುತ್ತಿದ್ದವರು. ಯಾರು ಯಾವುದೇ ಸಮಯದಲ್ಲಿ ಬಂದರೂ ಆ ಮನೆ *'ಮಹಾಮನೆ'*ಯಾಗಿತ್ತು. ದಾಸೋಹ ಆ ಮನೆಯ ಕೈಯಂಕರ್ಯವಾಗಿತ್ತು. ವಿದ್ಯಾಭ್ಯಾಸಕ್ಕಾಗಿ ಬಂದ ಬಡಮಕ್ಕಳಿಗೆ ಊಟ ವಸತಿ ಸೌಲಭ್ಯಗಳನ್ನು ತಾವೇ ಖುದ್ದು ನೋಡಿಕೊಳ್ಳುತ್ತಿದ್ದರು. ಪತಿಯ ಆಜ್ಞಾವರ್ತಿಯಾಗಿ ಪಾರ್ವತಮ್ಮ ಪತಿಗೆ ತಕ್ಕ ಸತಿಯೆನಿಸಿದರು. ಇಂತಹ ದಂಪತಿಗಳಿಗೆ ಅಂಜುಜಾಕ್ಷಮ್ಮ ಎಂಬ ಒಬ್ಬ ಮಗಳು ಹಾಗೂ ನಾಗಭೂಷಣಾರಾಧ್ಯರೆಂಬ ಮಗ ಜನಿಸಿದರು.

ಈ ಇಬ್ಬರು ಮಕ್ಕಳು ತಂದೆ-ತಾಯಿಗಳ ಮಾರ್ಗದರ್ಶನದಲ್ಲಿ ಬೆಳೆದು ನಾಡಿಗೆ ಉತ್ತಮ ಪ್ರಜೆಗಳಾದರು. ಕುಮಾರಾರಾಧ್ಯರ ಅಳಿಯ, ಅಂಬುಜಾಕ್ಷಿಯ ಪತಿ ಶ್ರೀ ಸಾಗರೆ ಜೆ. ಸಿ. ಚಂದ್ರಶೇಖರಾರಾಧ್ಯರು ಶಿಕ್ಷಕರಾಗಿದ್ದರು. ಅವರಿಗೆ ವೃತ್ತಿಗಿಂತ ದೇಶ ದೊಡ್ಡದಾಗಿ ಕಂಡಿತು. ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು. ಅಂದು ಬ್ರಿಟಿಷ್ ಸರ್ಕಾರದ ವಿರುದ್ಧ ಬಂಡೆದ್ದು ಭಾರತಸ್ವಾತಂತ್ರ್ಯಕ್ಕಾಗಿ ಹೋರಾಡಿ ಜೈಲುವಾಸ ಅನುಭವಿಸಿದರು. ಶ್ರೀ ಕುಮಾರಾರಾಧ್ಯ ಹಾಗೂ ಪಾರ್ವತಮ್ಮನವರ ಕುಟುಂಬ ಇಂತಹ ತತ್ತ್ವದ ತಳಹದಿಯ ಮೇಲೆ ನಿಂತ ಆದರ್ಶ ಕುಟುಂಬವಾಗಿತ್ತು.

*"ದೇಶ ಸೇವೆಯೇ ಈಶ ಸೇವೆ"* ಎಂಬ ಆದರ್ಶವನ್ನುಳ್ಳ ಶ್ರೀ ಕುಮಾರಾರಾಧ್ಯರು, ತಮ್ಮ ಜನ್ಮಭೂಮಿಯ ಏಳಿಗೆಗಾಗಿ ಸತತ ಪರಿಶ್ರಮಪಟ್ಟರು. *'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'* ಎಂಬ ಆರ್ಷೇಯ ನುಡಿಯನ್ನು ತಮ್ಮದಾಗಿಸಿಕೊಂಡವರು. ಆರಾಧ್ಯರು ಅಂತ್ಯಂತ ಕಿರಿಯ ವಯಸ್ಸಿನಲ್ಲೇ ಹಿರಿದಾದ ಧ್ಯೇಯವುಳ್ಳವರಾಗಿದ್ದರು. ತಮ್ಮ ಗ್ರಾಮ, ತಾಲ್ಲೂಕು ಹಾಗೂ ಸಮಾಜದ ಬಗ್ಗೆ ಅತ್ಯಂತ ಕಾಳಜಿಯುಳ್ಳವರಾಗಿದ್ದರು. *'ನುಡಿದಂತೆ ನಡೆದವರು'* ಎಂಬ ಶರಣರ ವಾಣಿಯನ್ನು ಅಕ್ಷರಶಃ ಪಾಲಿಸಿದವರು. *'ನ ಹಿ ಜ್ಞಾನೇನ ಸದೃಶಮ್'* ಎಂದರಿತಿದ್ದ ಆರಾಧ್ಯರು ತಮ್ಮ ಗ್ರಾಮದಲ್ಲಿ ಶಾಲೆಯ ಆರಂಭಕ್ಕೆ ಕಾರಣರಾದರು. ಅಲ್ಲದೆ ಹಂಪಾಪುರ ಹೋಬಳಿಯಲ್ಲಿ ಸಾರ್ವಜನಿಕ ಆಸ್ಪತ್ರೆ ತೆರೆಯಲು, ಸೊಸೈಟಿ ಸ್ಥಾಪಿಸಲು, ಪಶುವೈದ್ಯಶಾಲೆ, ಪೋಲೀಸ್‌ಸ್ಟೇಷನ್ ಮೊದಲಾದವುಗಳ ಆರಂಭಕ್ಕೆ ಆರಾಧ್ಯರೇ ಮೂಲಕಾರಣ. ಇವೆಲ್ಲವುಗಳಿಗೂ ಕಳಶಪ್ರಾಯವೆಂಬಂತೆ ಮುನ್ಸೀಫ್‌ಕೋರ್ಟ್ ಸ್ಥಾಪನೆಗೆ ಕಾರಣರಾದರು. ಅಂದಿನ ಸರ್ಕಾರ ಇವರ ಕಾರ್ಯಕ್ಷಮತೆಯನ್ನು ಗಮನಿಸಿ 1944ರಿಂದ 1954ರವರೆಗೆ ಹಂಪಾಪುರ ಹೋಬಳಿಯ ವಿಲೇಜ್ ಮುನ್ಸೀಫರಾಗಿ ಕುಮಾರಾರಾಧ್ಯರನ್ನು ನೇಮಕಮಾಡಿತು. ಅವರು ತಮ್ಮ ಕಾಲಾವಧಿಯಲ್ಲಿ ಎಂತಹ ಕಠಿಣತಕರಾರುಗಳು ಬಂದರೂ ಅತ್ಯಂತ

ಅಲ್ಪಾವಧಿಯಲ್ಲಿಯೇ ಅವುಗಳನ್ನು ನ್ಯಾಯಬದ್ಧವಾಗಿ ಚರ್ಚಿಸಿ, ತೀರ್ಪು ನೀಡುತ್ತಿದ್ದರು. ಸಾವಿರಾರು ತಕರಾರುಗಳನ್ನು ಪರಿಹರಿಸಿ, ತೀರ್ಪು ನೀಡಿದ್ದು ಜಿಲ್ಲಾ ನ್ಯಾಯಾಲಯದ ಕಡತಗಳಲ್ಲಿ ದಾಖಲೆಯಾಗಿ ಉಳಿದಿವೆ. ಇಂತಹ ಅಪರೂಪದ ವ್ಯಕ್ತಿತ್ವ ಆರಾಧ್ಯರದಾಗಿದ್ದಿತು.

ಆರಾಧ್ಯರು ಧರ್ಮದ ತಳಹದಿಯ ಮೇಲೆ ಬದುಕಿದವರು. ಬಾಳಿದವರು *'ಧರ್ಮೋ ರಕ್ಷತಿ ರಕ್ಷಿತಃ'* ಎಂಬ ವಾಕ್ಯವನ್ನು ಸ್ವತಃ ಅರಿತವರು, ಆಚರಿಸಿದವರು. ಸಮಾಜದ ಹಿತರಕ್ಷಣೆಗಾಗಿ ಹೆಗ್ಗಡದೇವನಕೋಟೆ ತಾಲ್ಲೂಕಿನ ಜೊಂಪನಹಳ್ಳಿ ಗ್ರಾಮದಲ್ಲಿದ್ದ ಸ್ವಂತ ತರಿಜಮೀನನ್ನು ಆಸ್ಪತ್ರೆಗಾಗಿ ದಾನ ಮಾಡಿದರು. ಅಲ್ಲಿಂದ ಮೈಸೂರಿನಲ್ಲಿಯ ಆರಾಧ್ಯಮಹಾಸಭಾ, ಹಾಸ್ಟೆಲ್‌ಗಾಗಿ, ಕೆಂಡಗಣ್ಣಸ್ವಾಮಿದೇವಸ್ಥಾನಕ್ಕೆ, ಜೈನಸಭೆಗೆ, ಶಾರದಾನಿಕೇತನಕ್ಕೆ ತರಿ ಜಮೀನನ್ನು ದಾನವಾಗಿ ನೀಡಿದರು. ಇಷ್ಟೆಲ್ಲ ದಾನ ಮಾಡಿದರೂ *'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ'* ಎಂಬ ಶರಣವಾಣಿಯನ್ನು ಅನುಸರಿಸಿ ನಡೆದವರು ಆರಾಧ್ಯರು.

ತಮ್ಮ ಗ್ರಾಮದ ಸುತ್ತಮುತ್ತಲ ದೇವಸ್ಥಾನಗಳ ಜೀರ್ಣೋದ್ಧಾರ ಕೆಲಸಕ್ಕೆ, ರಸ್ತೆ ನಿರ್ಮಾಣಕ್ಕೆ ಅಂದಿನ ಸರ್ಕಾರದ ಮೇಲೆ ಒತ್ತಡ ತಂದು ಮಾಡಿಸಿದ ಕೀರ್ತಿ ಇವರದು. 1927ರಲ್ಲಿ ಅಂದು ಮೈಸೂರಿನ ಶ್ರೀಮನ್‌ಮಹಾರಾಜ ಶ್ರೀಕೃಷ್ಣರಾಜಒಡೆಯರ್‌ರವರು ಕೆಂಡಗಣ್ಣಸ್ವಾಮಿ ದೇವಸ್ಥಾನಕ್ಕೆ ಆಗಮಿಸಿದ್ದ ಕಾಲದಲ್ಲಿ ಆರಾಧ್ಯರು ಶ್ರೀಮನ್ ಮಹಾರಾಜರಲ್ಲಿ ಮನವಿ ಸಲ್ಲಿಸಿದ ಪರಿಣಾಮವಾಗಿ ಮೈಸೂರು ಮಾನಂದವಾಡಿ ಮುಖ್ಯ ರಸ್ತೆ ಮೇಟ್‌ಕಲ್ಲುಗುಡ್ಡದ ಉತ್ತರದಲ್ಲಿ ಗದ್ದುಗೆಗೆ ರಸ್ತೆಗಳು ನಿರ್ಮಾಣಗೊಂಡವು.

ಹೀಗೆ ಆರಾಧ್ಯರದು ಸಮಾಜಮುಖಿ ಮನೋಭಾವ. ಸಮಾಜಸೇವೆಗೆ ಟೊಂಕಕಟ್ಟಿ ನಿಂತವರು. ತಮ್ಮ ಜೀವನದ ಅವಧಿಯನ್ನೆಲ್ಲ ಸಮಾಜಸೇವೆಗೆ ಮುಡಿಪಾಗಿಟ್ಟವರು. ಹೀಗೆ ಶ್ರೀ ಕುಮಾರಾರಾಧ್ಯರು ತಮ್ಮ ಅಂತ್ಯಕಾಲದವರೆಗೂ ಸೇವಾನಿರತರಾಗಿದ್ದು ತಮ್ಮ 77ನೆಯ ವಯಸ್ಸಿನಲ್ಲಿ ಅಂದರೆ 1961ರ ಫೆಬ್ರವರಿ ಹದಿನೇಳರಂದು ಇಹಲೋಕದ ಯಾತ್ರೆ ಮುಗಿಸಿದರು. ಜಿನ್ನಹಳ್ಳಿಯ ಜ್ಯೋತಿಯಾದ ಕುಮಾರಾರಾಧ್ಯರದು ಸಾರ್ಥಕ ಬದುಕು. ಇಂತಹ ಮಹಾನುಭಾವರ ಬದುಕು ಆದರ್ಶಪ್ರಾಯ ಹಾಗೂ ಅನುಕರಣೀಯ.

* * *

ಜೀವನ ಹಂಗು ನಮಗಿಲ್ಲ ಪರಿಸರವೇ ನಮಗೆಲ್ಲಾ
ಹೋರಾಡುವೆವು ನಮ್ಮುಸಿರಿರುವ ತನಕ
ತಾಯಿ ನೆಲದ ಹಸಿರನು ಉಳಿಸುವ ತನಕ

# ಅತಿಥಿ ಅಭ್ಯಾಗತರಸೇವೆ

*"ಆಹ್ವಾನವಿಲ್ಲದೆ ತಾನಾಗಿಯೇ ಮನೆಗೆ ಬರುವವನು ಅತಿಥಿ. ಆಹ್ವಾನಿತನಾಗಿ ಮನೆಗೆ ಬರುವವನು ಅಭ್ಯಾಗತ".*

ಅತಿಥಿ - ಅಭ್ಯಾಗತರನ್ನು ಗೌರವಿಸಿ ಸತ್ಕರಿಸುವುದು ನಮ್ಮ ಸನಾತನಪರಂಪರೆಗಳಲ್ಲಿ ಒಂದು ಸದಾಚಾರ, ಮನೆಯಲ್ಲಿ ನಡೆಯುವ ಧಾರ್ಮಿಕಕಾರ್ಯಗಳು, ಸಂತೋಷ ಸಮಾರಂಭಗಳು ಇವುಗಳಲ್ಲಿ ನಮ್ಮ ಬಂಧು - ಬಾಂಧವರನ್ನು, ಗೆಳೆಯರನ್ನು, ಹಿತೈಷಿಗಳನ್ನು ಆಹ್ವಾನಿಸಿ, ಉಪಚರಿಸಿ, ಸತ್ಕರಿಸುವುದು ಸಾಮಾನ್ಯವಾದುದು. ಇದೂ ಒಂದು ಉತ್ತಮ ನಡತೆ. ಆದರೆ ನಾವು ಕರೆಯದೇ ಆಕಸ್ಮಿಕವಾಗಿ ತಾನಾಗಿಯೇ ನಮ್ಮ ಮನೆಗೆ ಬಂದ ಅತಿಥಿಯನ್ನು ಗೌರವಿಸಿ, ಸತ್ಕರಿಸುವುದು ನಿಜಕ್ಕೂ ಶ್ರೇಷ್ಠವಾದ ನಡತೆ. ಮನೆಗೆ ಬಂದವರು ಯಾರೇ ಆಗಿರಲಿ, ಅವರನ್ನು ಸತ್ಕರಿಸುವುದೇ ಸದ್ಧರ್ಮ. ಇದನ್ನು ಅತಿಥಿಪೂಜೆ ಎಂದೇ ಹೆಸರಿಸಿದ್ದಾರೆ. ಇದು ಭಗವಂತನ ಪೂಜೆಗಿಂತಲೂ ಶ್ರೇಷ್ಠ ಎನ್ನುವ ಭಾವನೆಯೂ ನಮ್ಮಲ್ಲಿದೆ. ಬಂದಂತಹವರಿಗೆ ಇರಲು ಜಾಗ, ಕುಡಿಯಲು ನೀರು, ತಿನ್ನಲು ಆಹಾರ, ಮನಸ್ಸನ್ನು ಮುದಗೊಳಿಸುವ ಒಳ್ಳೆಯ ಮಾತನ್ನು ನುಡಿಯುವುದು ನಾವು ನೀಡಬೇಕಾದ ಉಪಚಾರ. ಮನುಸ್ಮೃತಿಯಲ್ಲಿನ ಒಳ್ಳೆಯ ಮಾತೊಂದನ್ನು ಇಲ್ಲಿ ಉದಾಹರಿಸಬಹುದು.

ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ|
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ|| (3-101)

ಮನೆಗೆ ಬಂದವರಿಗೆ ತಿನ್ನಲು ಆಹಾರ, ಇರಲು ಜಾಗ, ಕುಡಿಯಲು ನೀರು, ನಾಲ್ಕನೆಯದಾಗಿ ಒಳ್ಳೆಯ ಮಾತು-ಈ ನಾಲ್ಕು ಸಜ್ಜನರ ಮನೆಯಲ್ಲಿ ಯಾವಾಗಲೂ ದೂರವಾಗುವುದಿಲ್ಲ. ಸದಾ ಇರುತ್ತವೆ. ಈ ಮಾತನ್ನು ಕೇಳಿದಾಗ ನಮ್ಮ ಹಿಂದಿನವರ ನಡೆ-ನುಡಿಗಳು ನೆನಪಿಗೆ ಬರುತ್ತವೆ. ಎಷ್ಟೋ



ವಿದ್ವಾನ್
**ಡಾ|| ಟಿ. ವಿ. ಸತ್ಯನಾರಾಯಣ**
ಎಂ. ಎ., ಪಿ. ಎಚ್. ಡಿ.
ಅಲಂಕಾರ-ವ್ಯಾಕರಣಶಾಸ್ತ್ರ ವಿದ್ವಾನ್,
ಸಂಸ್ಕೃತಕೋವಿದ,
ಹಿರಿಯ ಸಹಾಯಕಸಂಶೋಧಕ,
ಪ್ರಾಚ್ಯವಿದ್ಯಾಸಂಶೋಧನಾಲಯ
(Oriental Research Institute)
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - 570 005
ದೂ. : 2419264

ಜನರು ಮನೆಗೆ ಯಾರಾದರೂ ಬಂದು ಊಟಮಾಡದ ಹೊರತು ತಾವು ಊಟ ಮಾಡುತ್ತಿರಲಿಲ್ಲ. ತಮಗಿಲ್ಲದಿದ್ದರೂ ಹಸಿದು ಬಂದವರಿಗೆ ನೀಡಿ ತಾವು ಉಪವಾಸವಿರುತ್ತಿದ್ದ ಜನರೂ ನಮ್ಮಲ್ಲಿ ಬಂದು ಹೋಗಿದ್ದಾರೆ. ಇವೆಲ್ಲದರ ಹಿಂದಿರುವ ಸದ್ಭಾವನೆ, ಉನ್ನತಆದರ್ಶ ಅನುಕರಣೀಯಗಳು. ಯಾರೂ ಯಾರ ಮನೆಗೆ ಕಾರಣವಿಲ್ಲದೆ ಎಂದೂ ಬರುವುದಿಲ್ಲ. ಬರಲು ಒಂದು ಕಾರಣವಿರುತ್ತದೆ. ನಾವೇ ಆಹ್ವಾನಿಸಿದಾಗ ನಮ್ಮ ಆಹ್ವಾನಕ್ಕೆ ಒಪ್ಪಿ ಬರುವವರು ಕೆಲವು ಜನರು ಮತ್ತೆ ಕೆಲವರು ಬಡತನದಿಂದಲೋ, ಅನನ್ಯಗತಿಕತನದಿಂದಲೋ, ಆಕಸ್ಮಿಕವಾಗಿಯೋ ಅಥವಾ ದಾರಿಹೋಕರಾಗಿ ವಿಧಿಯಿಲ್ಲದೆಯೋ ಇನ್ನೊಬ್ಬರ ಮನೆಗೆ ಬರುವರು. ಹಾಗೆ ಬಂದಾಗ ನಾವು ಅವರನ್ನು ಪ್ರೀತಿಯಿಂದ ಮಾತನಾಡಿಸಿ ಗೌರವಿಸಿ ಕುಳ್ಳಿರಿಸಿ ಕುಡಿಯಲು ನೀರು ಕೊಟ್ಟು, ಆಯಾಸ ಪರಿಹರಿಸಿ, ತಿನ್ನಲು ಆಹಾರಕೊಟ್ಟು, ನಿದ್ರಿಸಲು ಜಾಗಕೊಟ್ಟು ಉಪಚರಿಸಿ ಸಂತೋಷದಿಂದ ಕಳುಹಿಸಿಕೊಡಬೇಕು. ಇದೇ ನಿಜವಾದ ಮಾನವೀಯತೆ. ಇದನ್ನು ನಮ್ಮ ಹಿಂದಿನ ಭಾರತೀಯರು ಅನಾದಿಕಾಲದಿಂದಲೂ ನಡೆಸಿಕೊಂಡು ಬಂದಿದ್ದಾರೆ. ಬಂದವರನ್ನು ಮೊದಲು ಮಾತನಾಡಿಸಿ ವಿಚಾರವಿನಿಮಯ ಮಾಡಿಕೊಳ್ಳುವುದು. ಇದನ್ನು ಕುಶಲಸಂಭಾಷಣೆ ಎನ್ನುತ್ತಾರೆ. ಅದಾದ ನಂತರ ಕಾಲು ತೊಳೆಯಲು ನೀರು ಕೊಡುತ್ತಿದ್ದರು ಇದೇ ಪಾದ್ಯ. ಅದರ ನಂತರ ಕೈಗಳನ್ನು ತೊಳೆಯಲು ನೀರು ಕೊಡುವುದು ಇದು ಅರ್ಘ್ಯ. ಆಮೇಲೆ ಮುಖಾದಿಗಳನ್ನು ಶುದ್ಧಿಗೊಳಿಸಿಕೊಳ್ಳಲು ನೀಡುತ್ತಿದ್ದ ಜಲವೇ ಆಚಮನ. ಅನಂತರ ಆಯಾಸ ಪರಿಹಾರಕ್ಕಾಗಿ ಜೇನು-ಮೊಸರು-ತುಪ್ಪ-ಸಕ್ಕರೆ ಇವುಗಳಿಂದ ಮಿಶ್ರಿತವಾದ ಜಲಾದಿಗಳನ್ನು ಕೊಡುತ್ತಿದ್ದರು. ಇದಕ್ಕೆ ಮಧುಪರ್ಕವೆಂದು ಹೆಸರು. ಇದಾದ ಮೇಲೆ ಸ್ನಾನಾದಿಗಳನ್ನು ಮಾಡಿಸಿ, ಬಟ್ಟೆ ಬರೆಗಳನ್ನು ಕೊಟ್ಟು, ಅಲಂಕಾರಸಾಮಗ್ರಿಗಳನ್ನು ನೀಡಿ. ಸಿದ್ಧವಾದ ಮೇಲೆ ತಿನ್ನಲು ಪಂಚಭಕ್ಷ್ಯಪರಮಾನ್ನ ಆಹಾರ, ಕುಡಿಯಲು ಪರಿಮಳೋದಕವನ್ನು ಕೊಟ್ಟು ಅವರು ತಿನ್ನುವಾಗ ಒಳ್ಳೊಳ್ಳೆಯ ಮಾತುಗಳನ್ನಾಡಿ ಅವರನ್ನು ಸಂತೋಷಗೊಳಿಸಿ ಅನಂತರ ಮಲಗಲು ಜಾಗಕೊಟ್ಟು ಉಪಚರಿಸುತ್ತಿದ್ದರು. ಸಂತೃಪ್ತರಾದ ಅತಿಥಿಗಳು ಮನಃಪೂರ್ವಕವಾಗಿ ಉಪಚರಿಸಿದವರನ್ನು ಹರಸಿ ಹೋಗುತ್ತಿದ್ದರು. ಇಂತಹ ಸತ್ಪರಂಪರೆ ನಮ್ಮದು. ಇಂತಹ ಕರ್ಮಗಳನ್ನು ಪೂರ್ತಕರ್ಮಗಳೆಂದು ನಮ್ಮ ಪ್ರಾಚೀನಗ್ರಂಥಗಳಲ್ಲಿ ಕರೆದಿದ್ದಾರೆ.

ಪ್ರಯಾಣಿಕರಿಗೆ, ಅನಾಥರಿಗೆ, ಅಸಹಾಯಕರಿಗೆ, ದೀನ-ದಲಿತರಿಗೆ ಉಪಯೋಗವಾಗಲೆಂದು ಧರ್ಮಛತ್ರಗಳನ್ನು ಕಟ್ಟಿಸುತ್ತಿದ್ದರು. ಅಲ್ಲಿ ಅವರಿಗೆ ಉಳಿಯಲು ಉಚಿತವಾದ ಜಾಗ. ಉಚಿತವಾದ ಅನ್ನಪಾನಾದಿಗಳು ಇರುತ್ತಿದ್ದುವು. ದಾರಿಯಲ್ಲಿ ಬರುವ ಪಥಿಕರಿಗೆ ಆಯಾಸ ಹಸಿವು ಬಾಯಾರಿಕೆಗಳ ಪರಿಹಾರಕ್ಕಾಗಿ ಅರವಟ್ಟಿಗೆಗಳು, ಪಾನಗೃಹಗಳು, ಸಾಲು ಮರಗಳು ಇರುತ್ತಿದ್ದುವು. ಇವೆಲ್ಲವನ್ನು ಸಂಪತ್ತುಳ್ಳಸಹೃದಯ ಸಜ್ಜನರು ನಿರ್ಮಾಣ ಮಾಡಿಸುತ್ತಿದ್ದರು. ಮನುಷ್ಯರಿಗೆ, ಪಶುಪ್ರಾಣಿಗಳಿಗೆ ಅನುಕೂಲವಾಗಲೆಂದು ಕೆರೆ, ಕಟ್ಟೆಗಳನ್ನು ಕಟ್ಟಿಸುತ್ತಿದ್ದರು. ಬಾವಿಗಳನ್ನು ತೋಡಿಸುತ್ತಿದ್ದರು. ಜನರ ಸೇವೆಗೆ ಸೇವಕವರ್ಗವನ್ನು ನೇಮಿಸಿರುತ್ತಿದ್ದರು. ಈ ಎಲ್ಲ ಉಪಚಾರಗಳೂ ಉಚಿತವಾಗಿ ಇರುತ್ತಿದ್ದವು. ಇದರ ಹಿಂದಿನ ಉದ್ದೇಶವೆಂದರೆ ಒಬ್ಬ

ಮನುಷ್ಯ ಮತ್ತೊಬ್ಬನಿಗೆ ಸಹಾಯ ಮಾಡಬೇಕು. ಸತ್ಕರಿಸಬೇಕು. ಗೌರವಿಸಬೇಕು. ಇದರಿಂದ ಮುಂದೆ ನಮಗೆ ಒಳ್ಳೆಯವಾಗುವುದು ಎನ್ನುವ ಸದ್ಭಾವನೆ. ಇಂತಹ ಆದರ್ಶಮಯ ಬದುಕು ನಮ್ಮದು. ಮನೆಗೆ ಬಂದವರನ್ನು ದೇವರೆಂದು ಭಾವಿಸಿ ಗೌರವಿಸಬೇಕೆನ್ನುವುದು ಎಂತಹ ಉದಾತ್ತ ಭಾವನೆ. " ದೇವರು ಪ್ರತ್ಯಕ್ಷವಾಗಿ ಬರಲಾರ. ಬೇರೊಂದು ರೂಪದಲ್ಲಿ ಬರುತ್ತಾನೆ. ಆದ್ದರಿಂದ ಮನೆಗೆ ಬಂದ ಯಾರನ್ನೇ ಆಗಲಿ ಗೌರವಿಸದೆ, ಮಾತನಾಡಿಸದೆ, ಸತ್ಕರಿಸದೆ, ಅವಮಾನಿಸಿ ಕಳುಹಿಸಬೇಡ. ಅದರಿಂದ ಮುಂದೆ ನಮಗೆ ಒಳ್ಳೆಯದಾಗುವುದಿಲ್ಲ" ಎನ್ನುವ ನಮ್ಮ ಹಿಂದಿನವರ ಮಾನಸಿಕ ತಳಮಳ ಎಂತಹವರಿಗಾದರೂ ಅನುಕರಣೀಯವಾದವುಗಳೆ! ಅವುಗಳನ್ನಿಂದು ನಾವು ಸಮಾಜದಲ್ಲಿ ಕಾಣಲು ಸಾಧ್ಯವೆ !

ಇಂತಹ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಸೇವೆ, ತ್ಯಾಗ, ಉಪದೇಶಗಳಿಂದ ತಮ್ಮ ಸಾರ್ಥಕ ಬದುಕನ್ನು ಕಂಡ ಸಜ್ಜನರೇ ಶ್ರೀ ಆರ್. ಕುಮಾರಾರಾಧ್ಯರು. ಅವರು ಚಿರಸ್ಮರಣೀಯರು.



## ಸ್ನೇಹ

ಎರಡಕ್ಷರದ ಶಬ್ದ ಮನಸ್ಸಿಗೆ ಹಿತ. ಸ್ನೇಹವೆಂಬುದು ಅಮೃತ. ಸ್ನೇಹ ಬದುಕಿನಲ್ಲಿ ಗಳಿಸಬಹುದಾದ ಅತ್ಯಮೂಲ್ಯ ಆಸ್ತಿ. 'ಮಿತ್ರ'ಸಮಾನರ ನಡುವಣ ಅನಾಸಕ್ತಸಂಬಂಧ. ಜಗತ್ತನ್ನು ನಡೆಸುವ ಪ್ರೀತಿಯೆಂಬ ಶಕ್ತಿಯೇ ಮೈತ್ರಿ. ನಿಷ್ಠಾವಂತ ಸ್ನೇಹಿತ ಬದುಕಿನ ದಿವ್ಯಜ್ಞಾನ. ಭವರೋಗಕ್ಕೆ ಮದ್ದು ಸ್ನೇಹವೆನ್ನಬಹುದು. ಸ್ನೇಹ ಒಂದು ಬೆಳಕು. ದ್ವೇಷವೆನ್ನುವುದು ಕತ್ತಲು. ಮಾನವ ಸ್ನೇಹಜೀವಿಯಾಗಿ ಕತ್ತಲಿನಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತದೆಡೆಗೆ ಸೇರುವುದೇ ಮಿತ್ರತ್ವ. ಗೆಳೆತನದಲ್ಲಿ ಕಷ್ಟ, ಸುಖಗಳನ್ನು ಹಂಚಿಕೊಂಡು ಭಾರವಿಳಿಸಿಕೊಳ್ಳಬಹುದು. ಸ್ನೇಹಕ್ಕೆ ನಿದರ್ಶನವಾಗಿ ಮಹಾಭಾರತದ ಕರ್ಣನನ್ನು ಜ್ಞಾಪಿಸಬಹುದು. ಇದನ್ನು ಎಲ್ಲ ಧರ್ಮಗ್ರಂಥಗಳು ಸೂಚಿಸುತ್ತವೆ. ನಮ್ಮ ಜೀವನದಲ್ಲಿಯೂ ಕಾಣಬಹುದು ಅಂತಹ ಗಾಢ ಸ್ನೇಹವನ್ನು ಹೊಂದುವ ಮನಸ್ಸು ಮಾತ್ರ ವಿಶಾಲವಾಗಿರಬೇಕು. ಮಿತ್ರರು ಅನುಭವಿಸಬಹುದು. ತಾವು ನೋಡಬಹುದು.

# ಶ್ರೀ ಚೆನ್ನಮಲ್ಲಿಕಾರ್ಜುನನಲ್ಲಿ ಅನುರಕ್ತೆ

"ಅಕ್ಕ, ಅಕ್ಕ ಎನ್ನುವಿರಲ್ಲ,
ಅವಳು ಯಾರ ಅಕ್ಕ?
ಯಾರಿಗೆಲ್ಲ ಅಕ್ಕ? "
ಮುಗ್ಧತೆಯ ಮೈವೆತ್ತ
ಮಗಳು ಕೇಳಿದಳು
ಮುಗುಳು ನಗುತ.

ಮಗಳ ಪ್ರಶ್ನೆಯ ಕೇಳಿ
ನಸುವೆ ಮೌನವ ತಾಳಿ
"ಕೇಳು ಮಗಳೇ"ಎಂದು
ತಂದೆ ಹೇಳಿದನಿಂತು.

"ನನ್ನಕ್ಕ , ನಿನ್ನಕ್ಕ ಎಲ್ಲರಕ್ಕ,
ಕನ್ನಡದ ಅಕ್ಕ, ಕನ್ನಡಿಗರಕ್ಕ,
ಜಗಕೆಲ್ಲ ಅಕ್ಕ ಅವಳೆ ಮಹಾದೇವಿ ಅಕ್ಕ.

"ಕನ್ನಡ ವಚನನಂದಿನಿ
ವಚನ ಚಕ್ರವರ್ತಿನಿ
ಮಹಾತಪಸ್ವಿನಿ
ಚೆನ್ನಮಲ್ಲಿಕಾರ್ಜುನನ
ಅನುವರ್ತಿನಿ.

"ಇಹದ ಗಂಡನ ತೊರೆದಳು;
(ಕೌಶಿಕನ ಬಿಟ್ಟಳು)
ಪರಶಿವನ ವರಿಸಿದಳು;
(ಮನ್ಮಥನ ಸುಟ್ಟಳು)
ಮಾನಾಪಮಾನಗಳ
ಹಂಗ ಹರಿದಳು.



**ಕಾಸರವಳ್ಳಿ ಕೃಷ್ಣಮೂರ್ತಿ,**
Retd. Principal
M.A., (Mys), M.A.,(BHU),
M.Ed. (Karnataka).
B.A., (Hons). D.Ed. (Basic),
H. S., (Dip.),
P.G.D.T.ENG. (DIEFL),
R.B.P. (DBHPS)

# 1299, 'VASUSHREE',
6th Cross, 3rd Main,
Vivekananda Nagar,
Mysore - 570 023
☎ : 0821-2560588

"ಉಡುತಡಿಯವಳವಳು,
ಉಡುವುದನು ಬಿಟ್ಟಳು
ತೊಡುವುದನು ತೊರೆದಳು
ಬೆತ್ತಲೆಯನೆ ಉಟ್ಟಳು
ಬೆತ್ತಲಯನೆ ತೊಟ್ಟಳು

"ನೀಳ-ನಿಡುಮುಡಿಯೆ ವಸನ
ಭಸ್ಮಧೂಲಿಯೆ ಆಭರಣ
ಶಿವಸ್ಮರಣವೆ ಅಶನ
ಶಿವಧ್ಯಾನವಾಪೋಶನ.

ಅಲ್ಲಮ ಬಸವರಿಗೆ ಸಮ
ಬಾಳವಳದು ಅನುಪಮ
ಶರಣಸತಿ ಲಿಂಗಪತಿ'
ಎನುವ ಭಾವವವಳದೆ
ಅನುಭಾವಾನುಭೂತಿ

ಅವಳ ನುಡಿ ಅವಳ ನಡೆ ಎಲ್ಲ ಚೆನ್ನ
ಅವಳಿಗವಳೇ ಅಂದ, ಬಹು ಚೆಂದ
ಅವಳಿಗಿಲ್ಲವೆ ಇಲ್ಲ ಭವಬಂಧ

ಅವಳು ಧನ್ಯೆ, ಅನನ್ಯೆ
ಜನಮಾನ್ಯೆ ಜಗಮಾನ್ಯೆ
ವಿರಕ್ತೆ, ಮಹಾಭಕ್ತೆ
'ಇಹಸುಖ'ನಿರಾಸಕ್ತೆ
ಶ್ರೀ ಚೆನ್ನಮಲ್ಲಿಕಾರ್ಜುನನಲ್ಲಿ ಅನುರಕ್ತೆ.

* * *

# ಸರಳ ಸಜ್ಜನ

ಅದೆಷ್ಟೋ ಜನ್ಮದ ಪುಣ್ಯದ ಫಲ ಈ ಮಾನವ ಜನ್ಮ. ಸಾಮಾನ್ಯವ್ಯವಹಾರಜ್ಞಾನವಿರುವ ಹೆಣ್ಣು, ಗಂಡೆಂಬ ಭೇದಭಾವವಿಲ್ಲದೆ ಪ್ರತಿಯೊಬ್ಬರೂ ಮೊದಲು ಮಾನವೀಯತೆ ಯನ್ನು ಮೈಗೂಡಿಸಿಕೊಳ್ಳಬೇಕು. ನಾನು, ನನ್ನದು, ನನಗಾಗಿ ಎಂಬ ಈ ಅಹಂನಿಂದಾಗಿ ಮಾನವ ದಿನನಿತ್ಯ ಏನೇನು ಮಾಡುತ್ತಿದ್ದಾನೆ? ಎಂದು ಪ್ರಶ್ನೆ ಹಾಕಿದರೆ "ಏನೇನು ಮಾಡುತ್ತಿಲ್ಲ" ಎಂಬ ಸ್ಪಷ್ಟ ಉತ್ತರ ಬರುತ್ತದೆ. ಕರೆ ಬಂದಾಗ ಆ ಕೂಡಲೇ ಬರಿಗೈಲಿ ಹೋಗಬೇಕೆನ್ನುವ ಜ್ಞಾನವಿರಬೇಕು. ದಿನನಿತ್ಯದ ಕೆಲಸಗಳಲ್ಲಿ ನ್ಯಾಯ -ಅನ್ಯಾಯದ ಅರಿವಿರಬೇಕು. "ದೇಶ ನೋಡು, ಕೋಶ ಓದು" ಎನ್ನುತ್ತಾರೆ. ಸಾಧ್ಯವಾದಷ್ಟು ವಿಶಾಲ ಮನೋಭಾವನೆ ಬೆಳೆಸಿಕೊಳ್ಳಬೇಕು. ತನಗೆ, ತನ್ನವರಾಗಿ ಶ್ರಮಿಸುವವರ ಜತೆಜತೆಗೆ ತಾನು ಬೆಳೆದುಬಂದ, ಬೆಳೆಯುತ್ತಿರುವ ಸಮಾಜಕ್ಕೆ ತನ್ನ ಕೈಲಾದ ಸೇವೆ ಮಾಡಬೇಕು.

ಸಾರ್ವಜನಿಕ ವಲಯದಲ್ಲಿ ಕಿಂಚಿತ್ತಾದರೂ ಅಧಿಕಾರ, ಅವಕಾಶ ದೊರೆತಾಗ, ಇತರರಿಗೆ ಸಾಧ್ಯವಾದಷ್ಟು ಉಪಕಾರ ಮಾಡಬೇಕು, ಸಮಯ ಮತ್ತು ಅವಕಾಶ ಮೀರಿದಾಗ ಯಾರಿಂದಲೂ ಏನನ್ನೂ ಮಾಡುವುದಕ್ಕಾಗುವುದಿಲ್ಲ ಎಂಬ ತಿಳಿವಳಿಕೆಯಿರಬೇಕು. ಅವರವರಿಗಾಗಿ ದುಡಿದು ಗಳಿಸುವುದರಲ್ಲಿ ವಿಶೇಷವೇನಿಲ್ಲ. ಆದರೆ ತನಗಿರುವುದರಲ್ಲಿಯೇ ಇತರರಿಗೆ ತಾನು ಏನಾದರೂ ನೀಡಬೇಕು. ಉಪಕಾರ ಮಾಡಬೇಕೆಂಬ ಭಾವನೆಯಿರಬೇಕು. ಹಣಕಾಸಿನ ನೆರವು ನೀಡಲಾಗದಿದ್ದರೂ ಕಷ್ಟ. ತೊಂದರೆ ನೋವಿರುವವರಿಗೆ, ಧೈರ್ಯ , ಸಹಕಾರ, ಸಲಹೆ , ಪ್ರೀತಿ-ವಿಶ್ವಾಸಗಳನ್ನಾದರೂ, ತೋರಬೇಕಾದುದು ಆದ್ಯಕರ್ತವ್ಯವೆಂದು ತಿಳಿಯಬೇಕು. ಸಮಯದಲ್ಲಿ ಸಹಾಯಮಾಡಿದವರನ್ನು ಯಾರೂ ಮರೆಯಲಾರರು. ತಾವು ಜ್ಞಾಪಿಸಿಕೊಂಡಾಗಲೆಲ್ಲಾ ತಮಗೆ ನೆರವಾದವರ ಬಗ್ಗೆ ಗೌರವ ಅಭಿಮಾನ ಮೂಡುತ್ತದೆ.



**-ಕೂನೂರು ಜಯಶಂಕರಾರಾಧ್ಯ,**
ಎಂ. ಎ., ಆರ್.ಬಿ.ವಿ.
# 97, 6ನೇ ತಿರುವು,
ಸ್ವರ್ಣಸಂದ್ರ,
ಸಕ್ಕರೆ ನಗರ ಅಂಚೆ ,
ಮಂಡ್ಯ - 570 402

ಸಾರ್ವಜನಿಕ ಉಪಯೋಗಕ್ಕೆ ಏನಾದರೂ ಮಾಡಿದವರ ಹೆಸರು ಸದಾ ಸ್ಮರಣೆಯಲ್ಲಿರುತ್ತದೆ. ಪ್ರತಿ ದಿನ ಹತ್ತು-ಹಲವಾರು ಮಂದಿಯ ಉಪಯೋಗಕ್ಕೆ ಬರುತ್ತಿರುವ ಅವರ ಸಾಧನೆಯನ್ನು ನೋಡಿದಾಗ ಅದಕ್ಕಾಗಿ ಅವರು ಪಟ್ಟ ಶ್ರಮದ ಬಗ್ಗೆ ಹೆಮ್ಮೆಯಾಗುತ್ತದೆ. ಜಗತ್ತಿನಲ್ಲಿ ಯಾವುದೂ, ಯಾರೂ ಶಾಶ್ವತವಲ್ಲ ಎಂಬ ಸತ್ಯವನ್ನರಿತ ಬುದ್ಧಿಜೀವಿಗಳು, ದಾರ್ಶನಿಕರು, ಮಹಾನುಭಾವರು ಸಮಾಜದ ವಿವಿಧಕ್ಷೇತ್ರಗಳಲ್ಲಿ ಗಣನೀಯ ಸೇವೆ ಮಾಡಿ ಸ್ಮರಣೀಯರಾಗಿದ್ದಾರೆ. ಇಂದಿನ ಪೀಳಿಗೆಗೆ ಆದರ್ಶಪ್ರಾಯರಾಗಿದ್ದಾರೆ, ಮಾರ್ಗದರ್ಶಕ ರಾಗಿದ್ದಾರೆ. ಇಂತಹ ವ್ಯಕ್ತಿಗಳಲ್ಲಿ ದಿ|| ಕುಮಾರಾರಾಧ್ಯರು ಒಬ್ಬರು.

ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕು ಜಿನ್ನಹಳ್ಳಿಯ ಶ್ರೀ ರೇವಣಾರಾಧ್ಯ ಮತ್ತು ಶ್ರೀಮತಿ ಬಸವಾಜಮ್ಮರವರ ಪುತ್ರ ದಿ. ಕುಮಾರಾರಾಧ್ಯರು ದಿನಾಂಕ 21-06-1885ರಂದು ಜನ್ಮತಾಳಿ ಒಂದುನೂರಾ ಇಪ್ಪತ್ತೊಂದು ಸಂವತ್ಸರಗಳು ಕಳೆದಿವೆ. ಅಷ್ಟೇನು ವಿದ್ಯಾವಂತರಲ್ಲದಿದ್ದರೂ ತಮ್ಮ ವ್ಯವಹಾರಗಳಲ್ಲಿ ಬುದ್ಧಿವಂತರೆನಿಸಿಕೊಂಡು ಸಾರ್ಥಕ ಜೀವನ ನಡೆಸಿದ ಮಹನೀಯರಿವರು. ತಮ್ಮ ಒಳ್ಳೆಯ ಗುಣ ಹಾಗೂ ಎಲ್ಲರೊಡನೆ ಹೊಂದಿಕೊಂಡುಹೋಗುವ ಸ್ವಭಾವದಿಂದ ತಮ್ಮೂರಿನ ಜನತೆಯಲ್ಲಿ "ದೊಡ್ಡಬುದ್ಧಿ "ಯವರೆಂಬ ಪ್ರೀತಿಗೆ ಪಾತ್ರರಾಗಿದ್ದರು. ಸದಾ ಹರ್ಷಚಿತ್ತರಾಗಿ ಆಡಂಬರವಿಲ್ಲದ ಶಿಸ್ತಿನ ಜೀವನ ನಡೆಸಿದವರು.

ಸಾರ್ವಜನಿಕರ ಬಗ್ಗೆ ಇವರಿಗಿದ್ದ ಕಳಕಳಿ ಹಾಗೂ ಏನಾದರೂ ಮಾಡಬೇಕೆಂಬ ಹಂಬಲ, ವ್ಯವಹಾರಜ್ಞಾನದ ಬಗ್ಗೆ ತಿಳಿದ ಅಂದಿನ ಸರ್ಕಾರ ಇವರನ್ನು ವಿಲೇಜ್ ಮುನ್ಸೀಫರನ್ನಾಗಿ ನೇಮಕ ಮಾಡಿತು. 1944 ರಿಂದ 1955ರವರೆಗೆ ಹಂಪಾಪುರ ಹೋಬಳಿಗೆ ಸೇರಿದ ಗ್ರಾಮಗಳಲ್ಲಿನ ಅನೇಕ ತಂಟೆತಕರಾರನ್ನು ಸೌಹಾರ್ದಯುತವಾಗಿ, ನಿಷ್ಪಕ್ಷಪಾತವಾಗಿ ಬಗೆಹರಿಸುತ್ತ ಪರಸ್ಪರ ಜನರಲ್ಲಿದ್ದ ವೈಮನಸ್ಸನ್ನು ತಿಳಿಗೊಳಿಸಿದುದನ್ನು, ಜನಮನ್ನಣೆಗಳಿಸಿದ್ದನ್ನು ಇಂದಿಗೂ ಅಲ್ಲಿನ ಹಿರಿಯರಿಂದ, ಅವರ ಪರಿಚಯವಿದ್ದವರಿಂದ ತಿಳಿಯಬಹುದಾಗಿದೆ.

ಶ್ರೀಯುತರಿಗೆ ಸಂಗೀತ, ಸಾಹಿತ್ಯ ಹಾಗೂ ಕಲೆಯ ಬಗ್ಗೆ ಆಸಕ್ತಿಯಿದ್ದುದು ಕಂಡು ಬರುತ್ತದೆ. ಸ್ವಭಾವತಃ ಶಾಂತಮನಸ್ಕರಾದರೂ, ಪರಿಸ್ಥಿತಿಯ ಪ್ರಭಾವಕ್ಕೊಳಗಾಗಿ ಒಮ್ಮೊಮ್ಮೆ ತಾಳ್ಮೆ ಕಳೆದುಕೊಂಡಿದ್ದುಂಟು. ವಿಪರೀತ ಆಲೋಚನೆ ಮಾಡುತ್ತಿದ್ದ ಇವರ ಸ್ವಭಾವ, ಸಮಾಜಕ್ಕೆ ತಾನು ಏನಾದರೂ ಮಾಡಬೇಕೆಂಬ ಬಯಕೆ, ಇದರ ಫಲವಾಗಿಯೆ ತನ್ನೂರಿನಲ್ಲಿ ಒಂದು ಶಾಲೆ, ಹಂಪಾಪುರದಲ್ಲಿ ಒಂದು ಆಸ್ಪತ್ರೆ ತೆರೆಯಲು ಕಾರಣವಾಯಿತು. ಹೆಗ್ಗಡದೇವನಕೋಟೆ ತಾಲ್ಲೋಕಿನ ಜೊಂಪನಹಳ್ಳಿಯಲ್ಲಿದ್ದ ತಮ್ಮ ಜಮೀನಿನಲ್ಲಿ 15 ಎಕರೆಯನ್ನು ಆಸ್ಪತ್ರೆಗೂ, 25 ಎಕರೆ ಜಮೀನನ್ನು ಮೈಸೂರಿನ "ಆರಾಧ್ಯಮಹಾಸಭೆ"ಗೂ ದಾನ ಮಾಡಿರುವುದು ದಾಖಲಾತಿಯಿಂದ ಕಂಡುಬರುತ್ತದೆ.

ಶ್ರೀ ಕುಮಾರಾರಾಧ್ಯರ ಸತತ ಶ್ರಮ, ಪರೋಪಕಾರ-ಮನೋಭಾವನೆಯಿಂದಾಗಿ ತಮ್ಮ ಊರು ಹಾಗೂ ಅಕ್ಕಪಕ್ಕದ ಗ್ರಾಮಗಳಲ್ಲಿನ ದೇವಾಲಯಗಳ ಜೀರ್ಣೋದ್ಧಾರ, ರಸ್ತೆ ನಿರ್ಮಾಣದಂತಹ ಸಾರ್ವಜನಿಕ ಕೆಲಸಗಳು ನಡೆದಿವೆಯೆನ್ನಲಾಗಿದೆ. "ಲೋಕದಲ್ಲಿ ಉತ್ತಮರೇ ಹೆಚ್ಚು ಕಷ್ಟ-ನಷ್ಟ ಅನುಭವಿಸುತ್ತಾರೆ" ಎಂಬ ಲೋಕೋಕ್ತಿಯಿದೆ. ಬದುಕಿನ ಕೊನೆಯ ದಿನಗಳಲ್ಲಿ ಆರ್ಥಿಕವಾಗಿ ತುಂಬಾ ತೊಂದರೆ ಅನುಭವಿಸಿದ ಶ್ರೀಯುತರು ಸುಮಾರು 76ವರ್ಷಗಳ ಬದುಕು ನಡೆಸಿದರು. ದಿನಾಂಕ 17-02-1961ರಲ್ಲಿ ಮೈಸೂರಿನಲ್ಲಿ ಶಿವೈಕ್ಯರಾದರು. ಇವರ ಸಮಾಜಸೇವೆ;ಹಾಗೂ ಅವರ ಮನೆಯಲ್ಲಿ ಕೆಲ ವಿದ್ಯಾರ್ಥಿಗಳಿಗೆ ಊಟ, ವಸತಿಯ ಏರ್ಪಾಡು ಮಾಡಿದುದು ಅನುಕರಣೀಯಸಂಗತಿಯಾಗಿದೆ.

* * *

## ನಾಲಿಗೆ ನಿಯಂತ್ರಣ :

ನಾವು ಆಡುವ ಮಾತೇ ನಮ್ಮ ಪಾಲಿಗೆ ಜೀವನ ಅಥವ ಮರಣ . ನಮ್ಮ ಮಾತಿನಿಂದಲೆ ನಮಗೆ ಸಕಲೈಶ್ವರ್ಯ, ಇಲ್ಲವೆ ಐಶ್ವರ್ಯ ಹಾಳು . ನಾವು ಆಡುವ ಮಾತಿನಿಂದಾಗಿಯೆ ಮಿತ್ರರು ಮತ್ತು ಬಂಧುಗಳು ಒಲವು ತೋರಬಹುದು. ಇಲ್ಲ ಮುನಿಯಬಹುದು. ನಮ್ಮ ಮಾತೇ ನಮಗೆ ಶತ್ರುವಾಗಿ ಕಾಡಬಹುದು. ಇಷ್ಟೇ ಏನು? ಮಾತೇ ಮೃತ್ಯುವಾಗಿ ಪರಿಣಮಿಸಬಹುದು. ಆದುದರಿಂದ ಯಾವಾಗಲೂ ನಾಲಿಗೆಯ ಮೇಲೆ ಹಿಡಿತವಿರಬೇಕು. ಬಾಯಿಹರುಕ ಎನಿಸಿಕೊಳ್ಳಬಾರದು . ನಾಲಿಗೆಯ ಮೇಲೆ ನಿಯಂತ್ರಣ ಸಾಧಿಸಿದವನು ಯಶಸ್ವಿಯಾಗುತ್ತಾನೆ. ಬಾಯಿಹರಿಬಿಟ್ಟಂಥ ವ್ಯಕ್ತಿ ಸರ್ವನಾಶವಾಗುತ್ತಾನೆ. ಯಾರೊಂದಿಗಾಗಲಿ ಎಲ್ಲೇ ಆಗಲಿ, ಯಾವ ಸಮಯದಲ್ಲೇ ಆಗಲಿ, ಮಾತನ್ನಾಡುವ ಮುನ್ನ ಎಚ್ಚರವಿರಬೇಕು. ನಾವು ಆಡುವ ಮಾತೇ ವ್ಯಕ್ತಿತ್ವದ ಪ್ರತೀಕವಾಗುತ್ತದೆ. ಕೆಟ್ಟಮಾತನಾಡುವುದಕ್ಕಿಂತ ಮೌನವಹಿಸುವುದೇ ಕ್ಷೇಮಕರ. ಮೌನ ಬಂಗಾರ. ಮಾತು ಬೆಳ್ಳಿ. ನಾಲಿಗೆ ಕುಲ ಹೇಳಿತು-ಎಂದು ಜನಪದರ ಮಾತು, ಮಾತೇ ಮಾಣಿಕ್ಯ ಎಂದ ಸರ್ವಜ್ಞ. ಮಾತು ಆಡಿದರೆ ಹೋಯ್ತು . ಮುತ್ತು ಒಡೆದರೆ ಹೋಯ್ತು-ಎಂಬದು ನಾಣ್ಣುಡಿ. ಆದ್ದರಿಂದ ಎಲ್ಲರೂ ನಾಲಿಗೆಯ ಮೇಲೆ ನಿಯಂತ್ರಣ ಸಾಧಿಸಲೇಬೇಕು. ಎಚ್ಚರತಪ್ಪೀರಿ, ಜೋಕೆ !

# ಆರಾಧ್ಯಸಮಾಜದ ಉದ್ಧಾರ !

*ಪರೋಪದೇಶಕುಶಲಾ ದೃಶ್ಯಂತೇ ಬಹವೋ ಜನಾಃ |*
*ಸ್ವಭಾವಮತಿವರ್ತಂತೇ ಸಹಸ್ರೇಷ್ವಪಿ ದುರ್ಲಭಾಃ ||*

*- ಸುಭಾಷಿತ*

ಬೇರೆಯವರಿಗೆ ಉಪದೇಶ ಮಾಡುವುದರಲ್ಲಿ ಅತ್ಯಂತ ಕುಶಲರಾದ ನಮ್ಮ ಜನರು ಬಹಳಷ್ಟು ಮಂದಿ ಕಂಡುಬರುತ್ತಾರೆ. ಆದರೆ ಇಂತಹ ಸ್ವಭಾವವನ್ನು ಮೀರಿ ನಿಂತವರು ಸಾವಿರಕ್ಕೆ ಒಬ್ಬರು ಸಿಗುವುದು ಬಹಳ ಕಷ್ಟಸಾಧ್ಯ. ಅಂದರೆ *"ನೀತಿ ಹೇಳುವುದಕ್ಕೆ, ಬದನೆಕಾಯಿ ತಿನ್ನುವುದಕ್ಕೆ"* ಎಂಬ ರೂಢಿ ಮಾತಾಗಬಾರದು. ತಾನು ನೀಡಬೇಕೆಂದಿರುವ ಉಪದೇಶಾಮೃತವನ್ನು ಸ್ವತಃ ಪಾಲಿಸಿದ ಕಾರ್ಯಕರ್ತರುಗಳನ್ನು ಬೆಳೆಸುವ ಮಾದರಿಯ ಸಮಾಜವು ನಮ್ಮದಾಗಬೇಕು

ನವೀನತೆಯ ಕಾರಣವಾಗಿ ಇಂದು ಸಮಾಜಗಳ ತಳಹದಿ ಅಲುಗಾಡುವ ಪರಿಸ್ಥಿತಿಯು ಬಂದೊದಗಿದೆ. ಇಂತಹ ಕಾಲದಲ್ಲಿ ಅವರವರ ಸಮಾಜರಕ್ಷಣೆ ಅವರವರ ಅಂದರೆ ಆಯಾ ಸಾಮಾಜಿಕರ ಆದ್ಯಕರ್ತವ್ಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಕರ್ತವ್ಯಬಾಹಿರನಾಗುವುದು ಮನುಷ್ಯತ್ವಕ್ಕೆ ಚ್ಯುತಿಯುಂಟು ಮಾಡಿದಂತೆ. ಇದನ್ನರಿತವರು. ಕರ್ತವ್ಯ ಪ್ರಜ್ಞೆಯನ್ನು ಬೆಳೆಸಿಕೊಂಡು, ತನ್ನ ಸಮಾಜದ ಅವನತಿಯನ್ನು ತಡೆಗಟ್ಟಲು ನಾವೇನು ಮಾಡಬಹುದು ಎಂದು ಆಲೋಚಿಸಿ, ತಮ್ಮ ಸಮಾಜದ ಋಣ ತೀರಿಸಲು ಪ್ರಯತ್ನಿಸಬೇಕು. *"ಯದ್ಭಾವಂ ತದ್ಭವತಿ"* ನಮ್ಮ ಭಾವನೆಗಳು ಹೇಗೆ ಇರುತ್ತವೆಯೋ ಹಾಗೆಯೇ ಆಗುತ್ತವೆ. ಅಲ್ಲವೆ ?

ಸಮಾಜದ ಇತಿಹಾಸ, ಆಚಾರ, ವಿಚಾರ ಮತ್ತು ಜನಪದಗಳ ವಿಷಯಗಳನ್ನು ಸಮಾಜದ ಪ್ರತಿಯೊಬ್ಬರಿಗೂ ಅರಿವಾಗುವಂತೆ ಸಭೆ, ಸಮಾರಂಭಗಳಲ್ಲಿ ಮನವರಿಕೆ ಗೊಳಿಸಬೇಕು. ವೈವಿಧ್ಯಮಯ ಸಮಾಜದ ಸಮಸ್ಯೆಗಳು ಮತ್ತದರ ಪರಿಹಾರಗಳನ್ನು ವಿಶದವಾಗಿ ವಿವರಿಸಬೇಕು. ವ್ಯಕ್ತಿ ಬದಲಾದರೆ ಸಮಾಜ ಬದಲಾಗುತ್ತದೆ. ಈ ನಿಟ್ಟಿನಲ್ಲಿ ಸಮಾಜದ ಅಭ್ಯುದಯ ಕಾರ್ಯಗಳು ಸಾಗಬೇಕು ಇದಕ್ಕಾಗಿ ಎಲ್ಲರೂ ಎಲ್ಲ ರೀತಿಯಲ್ಲಿಯೂ ಸಹಕರಿಸಬೇಕು.



ಲೇಖಕ :
- ಆರಾಧಕ, ಮೈಸೂರು.

ಸಮಾಜದಲ್ಲಿನ ಇತರೆಯವರ ತಪ್ಪು ಹುಡುಕಿ ಆಡುವುದರ ಬದಲು ತನ್ನಲ್ಲಿನ ದೋಷಗಳ ನಿವಾರಣೆಗೆ ಮಾರ್ಗಗಳನ್ನು ಹುಡುಕಿಕೊಳ್ಳಬೇಕು. ಅದು ಉತ್ತಮರ ಲಕ್ಷಣಗಳೆಂದು ತಿಳಿಯಬೇಕು. ಸಮಾಜಕ್ಕೆ ಅವರೇನು ಮಾಡಿದರು ಎನ್ನುವುದರ ಬದಲು, ನಾವೇನು ಮಾಡಿದೆವು ಎಂದು ಹೇಳುವ ಪ್ರವೃತ್ತಿಯ ಮನೋಭಾವ ಬೆಳೆಸುವ ಮಾರ್ಗ ತಿಳಿದುಕೊಳ್ಳಬೇಕು. ಈ ತೆರನಾದ ವಿಚಾರಗಳನ್ನು ಸಮಾಜದ ಸಭೆಗಳಲ್ಲಿ ವ್ಯಕ್ತಪಡಿಸಲು ಕಾರ್ಯಕ್ರಮ ಹಮ್ಮಿಕೊಳ್ಳಬೇಕು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಾಮರ್ಥ್ಯಕ್ಕಿಂತಲೂ ಹೆಚ್ಚು ಸಮಾಜದ ಕಾರ್ಯಗಳನ್ನು ನಿರ್ವಹಿಸಿ ದೃಢಸಮಾಜ ಕಟ್ಟುವಂತಾಗಬೇಕು. ಇಂತಹ ಕೆಲಸಗಳು ಅವಶ್ಯಕವಾಗಿ ಸಮಾಜದ ಪರ ಜರೂರಾಗಿ ಆಗಬೇಕು.

ಸಮಾಜದ ಋಣ ತೀರಿಸುವುದು ಎಲ್ಲರ ಪ್ರಥಮಕರ್ತವ್ಯವೆಂಬುದನ್ನು ನಮ್ಮ ಸಮಾಜದ ಗಮನಕ್ಕೆ ತಂದು, ವ್ಯಕ್ತಿಯ ಕರ್ತವ್ಯವನ್ನು ಮನದಟ್ಟು ಮಾಡಿ, ತಿಳಿವಳಿಕೆ ಬೆಳೆಸಿದಾಗ ಸಮಾಜದಲ್ಲಿನ ಎಲ್ಲರ ಮನೋದೌರ್ಬಲ್ಯ ನೀಗಿ ತನ್ನ ಮತ್ತು ಸಮಾಜದ ಅಭಿವೃದ್ಧಿಯತ್ತ ಮನಸ್ಸು ಚಿಂತಿಸುವಂತಾಗುವ ಕೆಲಸ ಮಾಡಿದಲ್ಲಿ ಸಮಾಜ ಬೆಳೆಯುತ್ತದೆ. ಇತ್ತ ಸಮಾಜದ ಗಣ್ಯರು ಗಮನ ಹರಿಸಿದರೆ ಬಹಳ ಕೆಲಸ ಸಾಧಿಸಿದಂತೆಯೇ ಎಂಬ ಅರಿವನ್ನು ತಮ್ಮ ಜ್ಞಾನದ ಮೂಲಕ ಸಮಾಜಕ್ಕೆ ಕೊಡಬೇಕು.

ಆರಾಧ್ಯಜನಾಂಗದಲ್ಲಿ ಜನ್ಮತಳೆದಂತಹ ಎಲ್ಲರೂ ಆಚಾರ-ವಿಚಾರಗಳು ರೂಢಿಯಲ್ಲಿರುವ ಜ್ಯೋತಿಷ್ಯ, ವಾಸ್ತುಶಾಸ್ತ್ರ ಪೌರೋಹಿತ್ಯ, ಲಘು ಆಯುರ್ವೇದಗಳನ್ನು ತಿಳಿದು, ಮುಂದಿನ ಪೀಳಿಗೆಗೆ ತಿಳಿಸುತ್ತ, ಆಚರಣೆಯಲ್ಲಿ ತಂದು ದೇಶದ ಅಭಿವೃದ್ಧಿಯಲ್ಲಿ ಪಾಲುದಾರರಾಗಲು ಪ್ರಾಮಾಣಿಕವಾಗಿ ಶ್ರಮಿಸಬೇಕು. ಒಬ್ಬ ವ್ಯಕ್ತಿ ಅದನ್ನು ಆಚರಣೆ ಮಾಡುವುದು, ಬಿಡುವುದು ಆತನ ಆಗಿನ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ನಮ್ಮ ಆಚಾರ-ವಿಚಾರಗಳು ಮಾತ್ರ ಎಲ್ಲರಿಗೂ ತಿಳಿದಿರುವಂತೆ ನೋಡಿಕೊಳ್ಳುವುದು ನಮ್ಮೆಲ್ಲರ ಆದ್ಯ ಕರ್ತವ್ಯವೆಂದು ತಿಳಿದು ನಡೆದುಕೊಂಡರೆ ಸಮಾಜದ ಮತ್ತು ವ್ಯಕ್ತಿಯ ಗೌರವ ಖಂಡಿತ ಬೆಳೆಯುವುದು. ಇಂತಹ ಕಾರ್ಯಕ್ರಮಗಳನ್ನು ನಮ್ಮ ಸಮಾಜದ ಎಲ್ಲರೂ ರೂಢಿಗೊಳಿಸುವುದನ್ನು ಮರೆಯಬಾರದು.

ಸಮಾಜದ ಸಮಾರಂಭಗಳು ನಡೆಯುತ್ತಿವೆ ಎಂದು ತಿಳಿದರೆ ಸಾಕು, ಅದಕ್ಕೆ ನಾವೆಲ್ಲ ಸೇರಿ ಯಶಸ್ವಿಗೊಳಿಸಬೇಕಾದ್ದು ನಮ್ಮ ಆದ್ಯ ಕರ್ತವ್ಯವೆಂಬ ತಿಳಿವನ್ನು ಸಮಾಜದ ಸದಸ್ಯರಿಗೆ ಅರಿವಾಗಿಸಿ, ಕಾರ್ಯಪ್ರವೃತ್ತರನ್ನಾಗಿ ಮಾಡುವುದು ಅತಿ ಮುಖ್ಯ ಕೆಲಸ. ಇದರಿಂದ ವ್ಯಕ್ತಿ ಮತ್ತು ಸಮಾಜ ಇಬ್ಬರೂ ಬೆಳೆದಂತಾಗುತ್ತದೆ. ಜನಾಂಗದ ಕಾರ್ಯಕ್ರಮ ನಡೆಯುತ್ತದೆ ಎಂದು ಪತ್ರಿಕೆಗಳಲ್ಲಿ, ಸುದ್ದಿಮಾಧ್ಯಮಗಳಲ್ಲಿ ಪ್ರಕಟಿಸುವ ರೂಢಿಯನ್ನು ತರುವಂತಾಗಬೇಕು. ಅದನ್ನು ನೋಡಿ ನಾವು ಆಸಕ್ತಿಯಿಂದ ಕೂಡಿ ಅಲ್ಲಿಗೆ ಹೋಗಿ ನಮ್ಮ ಪಾಲಿನ ಕೆಲಸ. ನಿರ್ವಹಿಸುವ ಮನೋಭಾವ ಬೆಳೆಸಿಕೊಂಡಾಗ ಮಾತ್ರ ನಮ್ಮ ಸಮಾಜ ಬೆಳೆಯುತ್ತದೆ ಎಂದು ತಿಳಿದು ಪ್ರಾಮಾಣಿಕಕಾರ್ಯ ಸಾಗಬೇಕು. ಈ ರೀತಿಯ ಮನೋಭಾವಗಳನ್ನು ಪ್ರತಿ ವ್ಯಕ್ತಿಯಲ್ಲಿ ಬೆಳೆಸುವ ಕಾರ್ಯ ಮೊದಲಾಗಬೇಕು. ಆಗ ಸಮಾಜ ಸದೃಢವಾಗಿ ನಿಂತು ಇತರೆ ಸಮಾಜದೊಂದಿಗೆ ಬೆರೆತು ದೇಶದೇಳಿಗೆಯನ್ನು ಕಾಣುತ್ತದೆ.

ಈಗ ದುಂದುವೆಚ್ಚದ ಕಾಲ. ಆದ್ದರಿಂದ "ವೈಭವ ತೋರಿಸುವ ಮನೋಭಾವ" ಬಿಟ್ಟು, ಹಾಸಿಗೆ ಇದ್ದಷ್ಟು ಕಾಲು ಚಾಚುವ ಮಾತನ್ನು ನೆನೆಸಿಕೊಂಡು ಕ್ರಮವರಿತು ಸಾಗುವುದು ಉತ್ತಮವಲ್ಲವೆ ? ಕಾರಣ ಸಮಾಜದ ಆಹ್ವಾನಪತ್ರಿಕೆಗಳನ್ನು ಬಂಧುಗಳ ಮನೆಗೆ ಹಂಚುವ ಕೆಲಸ ಇಂದು ಬಹಳ ಸುಲಭವೆನ್ನಕೂಡದು. ಇದರ ಅನುಭವ ಎಲ್ಲರಿಗೂ ಒದಗಿದಾಗ ವೇದ್ಯವಾಗುತ್ತದೆ. ತದನಂತರ ಮರೆಯುವುದು ಮಾನವ ಸ್ವಭಾವ ಅದನ್ನು ನೆನಪುಮಾಡಿಕೊಂಡು ಮುಂದೆ ಅಂತಹ ಹಿಂಸೆಗೆ ನಾವು ಎಡೆಕೊಡದೆ ನಡೆಯುವುದು ಜಾಣತನವಲ್ಲವೆ ? ಅಂಚೆಯ ಮೂಲಕವೆಂದರೆ ಅದು ಈಗ ಬಲು ದುಬಾರಿಯಾಗಿದೆ. ಆದುದರಿಂದ ಸಮಾಜದ ಸಭೆಗಳೆಂದರೆ ನಾವು ತಪ್ಪಿಸಿಕೊಳ್ಳದೆ ಹೋಗಬೇಕು ಎಂಬ ಮನೋಭಾವ ಎಲ್ಲ ಬಂಧುಗಳಲ್ಲಿಯೂ ಕಾಣುವಂತಾಗಬೇಕು. ಸಮಾರಂಭಕ್ಕೆ ಹೋದವರೆಲ್ಲರನ್ನು ಅಲ್ಲಿನ ಕಾರ್ಯಕರ್ತರುಗಳು ಪ್ರೀತಿ, ವಾತ್ಸಲ್ಯದಿಂದ ಕಾಣುವುದು, ಮತ್ತು ಪರಸ್ಪರರಿಗೆ ಸಹಕರಿಸುವ ಮನೋಭಾವ ಬಂಧುಗಳೆಲ್ಲರಲ್ಲಿಯೂ ಕಾಣುವಂತಾಗಬೇಕು. ಅಂತಹ ಸಹನೆ, ಸಹಕಾರಗಳಿಂದ ಕೂಡಿದ ಸಭೆಗಳು ನೋಡುಗರಿಗೂ, ಕಾರ್ಯ ನಿರ್ವಹಿಸುವವರಿಗೂ ಮಾರ್ಗಸೂಚಿಯಾಗಿ ರೂಪಗೊಂಡಲ್ಲಿ ಸಮಾಜ ಖಂಡಿತ ಬೆಳೆಯುತ್ತದೆ.

ಆಹ್ವಾನಪತ್ರಿಕೆ ನಮಗೆ ತಲುಪಿಲ್ಲ, ನಾವು ಏಕೆ ಹೋಗೋಣ? ಎಂಬ ಮನೋ ಅಭಿಪ್ರಾಯಗಳು ಸಮಾಜದ ಸಮಾರಂಭಗಳಿಗೆ ಭಂಗತರಬಾರದು. ನಮ್ಮ ಸಮಾಜದ ಸಭೆ, ಸಮಾರಂಭ ಎಂದರೆ ನಮ್ಮದೆಂದು ಕೂಡಿ ಆಸಕ್ತಿಯಿಂದ ನಡೆಸುವ ಮನಶ್ಶಕ್ತಿ, ದೃಢಚಿತ್ತ ಎಲ್ಲರೂ ಬೆಳೆಸಿಕೊಳ್ಳಬೇಕು. ಅಂತಹ ಮನುಷ್ಯ ಉತ್ತಮನಾಗುವನು. ಇದನ್ನು ಮರೆತು ಭಿನ್ನತೆಯನ್ನು ಸೃಷ್ಟಿಸಕೂಡದು. ಸಮಾಜದ ಕೆಲಸ ಕಾರ್ಯಗಳನ್ನು ಅಸ್ತವ್ಯಸ್ತಗೊಳಿಸುವವರನ್ನು ಇತರೆಯವರು ಜಾಗರೂಕತೆಯಿಂದ ನಿಗಾವಹಿಸಿ ನೋಡಿ ಅಂತಹ ಚಟುವಟಿಕೆಗಳನ್ನು ಕಂಡಲ್ಲಿ ಖಂಡಿಸುವ ಮನೋಧೈರ್ಯವನ್ನು ಎಲ್ಲರೂ ಬೆಳೆಸಿಕೊಂಡರೆ, ಅದರಿಂದ ಸಮಾಜದ ಕಂಟಕ ಪ್ರಾಯರನ್ನು ಅವರ ದುರ್ಮಾರ್ಗದಿಂದ ಬಿಡಿಸಿ ಉತ್ತಮರನ್ನಾಗಿ ಮಾಡಿದರೆ, ಅವರ ಸಹಕಾರ ನಮ್ಮ ಸಮಾಜಕ್ಕೆ ಸಿಗುತ್ತದೆ ಮತ್ತು ಸಮಾಜ ಬೆಳೆಯುತ್ತದೆ. ಉತ್ತಮ ಮನುಷ್ಯನ ಎಚ್ಚರಿಕೆಯ ಕೆಲಸದಿಂದ ಈ ಎರಡೂ ಕ್ರಿಯೆಗಳು ನಡೆದು ನಮ್ಮ ಸಮಾಜ ಮುಂದಡಿ ಇಡುವುದರಲ್ಲಿ ಸಂಶಯವಿಲ್ಲ, ಅಲ್ಲವೆ?

ಸಭೆ ಸಮಾರಂಭಗಳಿಗೆ ಬಂದಂತಹ ಬಂಧುಗಳಿಗೆ ಕಾರ್ಯಕರ್ತರು ಕನಿಷ್ಠ ಗೌರವ ನೀಡಿ ಸ್ವಾಗತಿಸಿದಲ್ಲಿ ಅವರ ಮನೋಭಾವ ಸಮಾಜದತ್ತ ಒಲವು ತೋರುತ್ತದೆ. ಸಭೆಗಳಿಗೆ ಪ್ರೀತಿಯಿಂದ ಬರುವ, ಆಸಕ್ತಿಯಿಂದ ಸಭೆಯನ್ನು ವೀಕ್ಷಿಸುವ, ಅನಂತರ ಸಭೆಯ ತಿಳಿವಳಿಕೆಯನ್ನು ಚಿಂತಿಸಿ ನಮ್ಮ ಸಮಾಜದ ಅಭಿವೃದ್ಧಿಯನ್ನು ಕಂಡು ಎಲ್ಲರೂ ಆನಂದಿಸುವರು. ಇಂತಹ ಗೌರವಯುತ ಸಭೆಗಳಿಗೆ ಗಂಡು, ಹೆಣ್ಣು ಎಂಬ ಭೇದವಿಲ್ಲದೆ ಹಾಜರಾಗುವರು. ಆಗ ನಮ್ಮ ಜನಾಂಗವನ್ನು ಕೈಹಿಡಿದು ಬೆಳೆಸಬಹುದು. ಜನಾಂಗವನ್ನು ಕುರಿತು ಮುಖ್ಯಸ್ಥರು, ಕಾರ್ಯಕರ್ತರುಗಳು ಚರ್ಚಿಸಿ ಕಡ್ಡಾಯವಾಗಿ ಪ್ರೀತಿ ವಿಶ್ವಾಸಗಳನ್ನು ಜನಾಂಗದಲ್ಲಿ ಬೆಳೆಸುವ ಮಾರ್ಗ ಕಾಣಬೇಕು.

ವೇದಿಕೆಯಲ್ಲಿ ಜನರ ಬದುಕು-ಭವಿಷ್ಯಕ್ಕೆ ಸಂಬಂಧಿಸಿದಂತೆ ಅಂದಿನ ಸಮಾರಂಭದ ಉದ್ದೇಶವನ್ನು ಬಿಂಬಿಸಬೇಕು. ವ್ಯಕ್ತಿ ಮತ್ತು ಜನಾಂಗಕ್ಕೆ ಮಾರ್ಗದರ್ಶನ ಕೊಡುವಂತಹ ನಿರ್ಣಯಗಳನ್ನು ರೂಪಿಸಬೇಕು. ಇದು ಒಂದು ತಿಳಿವಳಿಕೆಯ ಸಭೆ ಎಂಬುದು ಎಲ್ಲರ ಮನಸ್ಸನ್ನು ಗೆದ್ದು ಜನಾಂಗ ಗಟ್ಟಿಯಾಗಿ ನಿಲ್ಲುವಂತೆ ಮಾಡುತ್ತದೆ. ನಮ್ಮ ಜನಾಂಗದ ಅಭಿವೃದ್ಧಿ ಯೋಜನೆಗಳು, ಕಾರ್ಯಕ್ರಮಗಳು ರೂಪಗೊಂಡಾಗ ಅದರಿಂದ ಸಭೆ ಒಂದು ತೀರ್ಮಾನಕ್ಕೆ ಬಂದು ಅದನ್ನು ಜನಾಂಗದ ಯೋಜನೆಗಳೆಂದು ಜಾರಿಗೊಳಿಸುವುದು ಉತ್ತಮವೆನಿಸುವುದು.ಆಸಕ್ತ ಬಂಧುಗಳು ಇದನ್ನು ನೋಡಿ ಹೆಚ್ಚು ಸ್ಪಂದಿಸುವರು, ನಿರಾಸಕ್ತರನ್ನು ಬಿಡದೆ ಗುರುತಿಸಿ ಅವರಲ್ಲಿ ಇದು ನಮ್ಮ ಸಮಾಜ, ಇದು ಬೆಳೆಯಬೇಕು ಮತ್ತು ಉಳಿಯಬೇಕು. ಎಂಬ ಮನೋಭಾವವನ್ನು ಬೆಳೆಸುವತ್ತ ಹೆಚ್ಚು ನಿಗವಿಟ್ಟು ಕೆಲಸ ಮಾಡಿದರೆ ಆಗ ಸಮಾಜದ ಪ್ರತಿಯೊಬ್ಬರೂ ಸೇವಾಮನೋಭಾವದಿಂದ ಜೀವನ ನಡೆಸುವ ಪರಿ ರೂಢಿಯಾಗಿ ಭದ್ರಬುನಾದಿಯಾಗಬಲ್ಲದು.

ನಮ್ಮ ಜನಾಂಗದಲ್ಲಿ ಧಾರ್ಮಿಕತೆಯ ಕಡೆಗೆ ಮನಹರಿಸುವ ಕೆಲಸ ನಿಗದಿಗೊಳಿಸಿ ಆ ಬಗ್ಗೆ ಸಭೆಯಲ್ಲಿ ವಿಚಾರ ವಿನಿಮಯ ಮಾಡಿ ಅಧ್ಯಾತ್ಮದ ಅರಿವನ್ನು ತರುವ ಕೆಲಸ ಸ್ಥಿರವಾಗಿ ಸಾಗಬೇಕು. ಆಗ ನೈತಿಕತೆ ಮತ್ತು ನ್ಯಾಯಸಮ್ಮತ ವಿಚಾರಗಳನ್ನು ಕಾರ್ಯಕ್ರಮಗಳಲ್ಲಿ ಅಳವಡಿಸುವುದರಿಂದ ಸತ್ಯಮಾರ್ಗವನ್ನು ಸಮಾಜಕ್ಕೆ ನೀಡಬಹುದು. ಈ ರೀತಿಯ ಕಾರ್ಯಕ್ರಮಗಳನ್ನು ಸಭೆ - ಸಮಾರಂಭಗಳ ಮೂಲಕ ಜನಾಂಗದಲ್ಲಿ ಪ್ರಾಮಾಣಿಕ ಜಾಗೃತಿ ಮೂಡಿಸುವುದಾದಲ್ಲಿ, ಅದು ಮನೆಮನೆಯ ಹಬ್ಬವಾಗಿ ನಮ್ಮಲ್ಲಿ ಆಚರಣೆಗೊಂಡಿರುವುದು ಮನವರಿಕೆಯಾಗಿ ಜನಾಂಗದ ಅಭಿಮಾನ ಮತ್ತು ಆಸಕ್ತಿ ಬೆಳೆಯುತ್ತದೆ. ಜನರ ಪ್ರೋತ್ಸಾಹ ಹೆಚ್ಚಿ ಸೇವಾಮನೋಭಾವ ಜನರಲ್ಲಿ ಕಾಣುತ್ತದೆ. ಇದರಿಂದ ನಮ್ಮ ಸಮಾಜವನ್ನು ದೃಢವಾಗಿ ಕಟ್ಟಿ ಬೆಳೆಸಬಹುದು.

ಇಂತಹ ಮನೋಭಾವಗಳನ್ನು ನಮ್ಮ ಸಮಾಜದ ಜನರಲ್ಲಿ ಮೂಡುವಂತೆ ಮಾಡುವುದರಿಂದ ಚಿಂತನೆಯನ್ನು ಉತ್ತಮಗೊಳಿಸಿ ಜನಾಂಗವನ್ನು ಅವನತಿಯಿಂದ ಉನ್ನತಿಗೆ ನಡೆಸಲು ನಾವು ಮಾಡಬಹುದಾದ ಸ್ತುತ್ಯಕಾರ್ಯ. ಅತ್ತ ನಾವೆಲ್ಲರೂ ಸಾಗೋಣ. ಇಂತಹ ವಿಷಯದಲ್ಲಿ ಪಾಲಕರೇ ಪೋಷಕರಾದರೆ ಸಂಘ ಸಂಸ್ಥೆಗಳನ್ನು ಬೆಳೆಸಲು ಸಾಧ್ಯ ಅಲ್ಲವೆ ?

* * *

## ಮದುಮಗಳು

ಮದುಮಗಳನ್ನು ಮದುವೆ ಮಾಡಿದವರು ತವರಿಗೆ ಕರೆದುಕೊಂಡು ಬರುವುದು ಒಂದು ವಿಶೇಷ. ತಕ್ಷಣ ಮದುವೆಯಾಗಿ ಗಂಡನ ಮನೆಗೆ ಹೋದಾಕೆಗೆ ತೌರಿನ ಆಸೆ ಇರುತ್ತದೆ. ಆ ಕಾರಣ ತಿಂಗಳು ತೌರಿಗೆ ಕರೆತಂದು ಮದುಮಗಳಿಗೆ ಹರುಷ ಹಾಗೂ ಗೆಲುವು ಉಂಟು ಮಾಡಬೇಕು ಆ ಮೂಲಕ ಅವರುಗಳ ಬಾಂದವ್ಯ ಚಿಗುರಿಸುವ ಮನೋಭಾವ ನಮ್ಮ ಹಿರಿಯರಲ್ಲಿ ನೆಲೆಗೊಂಡಿರುವುದು ಔಚಿತ್ಯ ಪೂರ್ಣವು ಆಗಿದೆ. ಇಂತಹ ಕಾರ್ಯಗಳನ್ನು ನಮ್ಮ ಹಿರಿಯರು ನಮಗೆ ಯುಕ್ತವಾಗಿ ತಿಳಿಸಿಲ್ಲವಾದರೂ ಚಿಂತಿಸಿದವರಿಗೆಲ್ಲ ವಿಷಯ ಸುಸ್ಪಷ್ಟಗೊಳ್ಳುತ್ತದೆ ಅಲ್ಲವೆ.

# ಸ್ವಯಂಭುಲಿಂಗ

ಶ್ರೀ ಆರ್. ಕುಮಾರಾರಾಧ್ಯರು ಹುಟ್ಟಿ ಬೆಳೆದದ್ದು ಹೆಗ್ಗಡದೇವನಕೋಟೆ ತಾಲ್ಲೂಕು ಜಿನ್ನಹಳ್ಳಿ ಎಂಬ ಸಣ್ಣಗ್ರಾಮದಲ್ಲಿ. ಮುಂದೆ ಇವರು ತಮ್ಮ ಬದುಕನ್ನು ನಾನಾ ಪ್ರಕಾರಗಳಲ್ಲಿ ತೊಡಗಿಸಿಕೊಂಡರು. ಆದಾಗ್ಯೂ ಹೆಚ್ಚು ಸಮಾಜಸೇವೆಗಾಗಿ ತಮ್ಮನ್ನು ಮೀಸಲಾಗಿಸಿಕೊಂಡರು. ಅದು ಅವರ ಮನದ ತುಡಿತ, ಕಾಳಜಿ ಮತ್ತು ಬಯಕೆ ಅನ್ನುವುದರಲ್ಲಿ ಸಂಶಯವಿಲ್ಲ.

ಇವರ ಮೂಲ ವಂಶಸ್ಥರು ಅಂದರೆ ಮುತ್ತಜ್ಜರು ಟಿ.ನರಸೀಪುರ ತಾಲ್ಲೂಕಿನ ಸಮೀಪದಲ್ಲಿರುವ ಸೋಸಲೆ ಗ್ರಾಮದವರು. ಪಂಚಾಚಾರ್ಯರಲ್ಲಿ ಪ್ರಮುಖ ಆಚಾರ್ಯರಾದ ರೇಣುಕವಂಶಸ್ಥರು. ಇವರ ಅಜ್ಜನವರಿಗೆ ರಾತ್ರಿಯಲ್ಲಿ ಒಂದು ದಿನದಲ್ಲಿ ಇದ್ದಕ್ಕಿದ್ದ ಹಾಗೆ ಆಶ್ಚರ್ಯವಾದ ಕನಸು ಬಿದ್ದಿತಂತೆ. ಬಿದ್ದ ಕನಸಲ್ಲಿ ಕಂಡದ್ದು ಶ್ರೀ ಮಾದೇಶ್ವರಸ್ವಾಮಿ. ಆ ದೈವ ಹೇಳಿದ್ದು ಹೀಗಂತೆ. ಜಿನ್ನಹಳ್ಳಿ ಎಂಬ ಗ್ರಾಮದಲ್ಲಿ ನಾನು ಒಡ ಮೂಡಿದ್ದೇನೆ. ಆದಕಾರಣ ನೀನು ನನ್ನ ನಿರಂತರ ಪೂಜೆಗೆ, ಸೇವೆಗೆ ಅಲ್ಲಿಗೆ ಬಂದು ಅಲ್ಲಿಯೇ ನೆಲೆಸಿ ಕಾಯಕ ಮಾಡಬೇಕು ಎಂದು ತಿಳಿಸಿತಂತೆ. ಅದರಂತೆ ಅವರು ಸೋಸಲೆ ಗ್ರಾಮವನ್ನು ತ್ಯಜಿಸಿ ಜಿನ್ನಹಳ್ಳಿ ಎಂಬ ಊರಿಗೆ ಬಂದು ದೇವರ ಸೇವೆಗೆ ಬದ್ಧರಾದರು. ಒಡಮೂಡಿದ ಕಲ್ಲು ಲಿಂಗಾಕೃತಿಯಲ್ಲಿರುವುದು. ಮುಂದೆ ಇವರ ಮಕ್ಕಳು ಮೊಮ್ಮಕ್ಕಳುಗಳೆಲ್ಲ ಜಿನ್ನಹಳ್ಳಿಯಲ್ಲಿಯೇ ಹುಟ್ಟಿ ಬೆಳೆದು ಜಿನ್ನಹಳ್ಳಿ ಗ್ರಾಮದವರೇ ಆದರು. ಇದು ಒಂದು ಹಿನ್ನೆಲೆ.

ವೇ|| ಬ್ರಂ|| ಶ್ರೀ|| ರೇವಣಾರಾಧ್ಯರು ಉರುಫ್ ಪುಟ್ಟಸ್ವಾಮಿಯವರು ಮತ್ತು ಅವರ ಪತ್ನಿ ಶ್ರೀಮತಿ ಬಸವಾಜಮ್ಮ ಎಂಬ ದಂಪತಿಗಳಿಗೆ ಶ್ರೀ ಆರ್. ಕುಮಾರಾರಾಧ್ಯರು ತೃತೀಯಪುತ್ರರಾಗಿ ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ ನೃಪಶಾಲಿವಾಹನಶಕೆ ಪಾರ್ಥಿವಸಂವತ್ಸರದಲ್ಲಿ ಅಂದರೆ ತಾರೀಖು 21-6-1885 ರಲ್ಲಿ ಜನ್ಮ ತಳೆದರು. ಇವರ



- ಚೇತನ್ ಪ್ರಭು
ಮನೆ ಸಂ.810
ಎಲ್.ಐ.ಜಿ. ಹುಡ್ಕೊ
1 ನೇ ಹಂತ, ಹೆಬ್ಬಾಳು
ಮೈಸೂರು-17

ಕೂಡ ಹುಟ್ಟಿದ ಏಕಮಾತ್ರ ಸಹೋದರ ಶ್ರೀ ಆರ್. ರೇವಣಾರಾಧ್ಯರು. ಇವರ ಅಕ್ಕಂದಿರು ಪಾರ್ವತಮ್ಮ ಮತ್ತು ದೇವಾಜಮ್ಮ ಎಂಬುವರು.

ಕುಮಾರಾರಾಧ್ಯರ ವಿದ್ಯಾಭ್ಯಾಸವೆಲ್ಲ ಅಂದಿನ ಗುರುಮಠದಲ್ಲಿ ನಡೆಯಿತು. ಹಾಗಾಗಿ ಓದು ಬರಹವನ್ನು ಪೂರ್ಣವಾಗಿ ಅಭ್ಯಸಿಸಿ, ಅನುಭವಕ್ಕೆ ತಂದುಕೊಂಡರು. ಇದರಿಂದ ಅವರಿಗೆ ಜ್ಞಾನದ ತೀಕ್ಷ್ಣತೆ ತೀವ್ರವಾಗಿ ವ್ಯವಹಾರಗಳ ಸೂಕ್ಷ್ಮತೆಗೆ ದಾರಿಯಾಯಿತು. ಹೊಸ ಅನುಭವಗಳಿಗೆ ಪುಷ್ಟಿ ಒದಗಿಸಿತು.

ಆರ್. ಕುಮಾರಾರಾಧ್ಯರು ತಮ್ಮ ಇಪ್ಪತ್ತೈದನೆ ವಯಸ್ಸಿನಲ್ಲಿ ಅಂದರೆ 1910 ನೆ ಇಸ್ವಿಯಲ್ಲಿ ಹೆಬ್ಬಲಗುಪ್ಪೆ ಮಠದ ವೇ|| ಬ್ರಂ|| ಶ್ರೀ ಮಲ್ಲಾರಾಧ್ಯರ ಪುತ್ರಿ ಪಾರ್ವತಾಂಬಿಕೆ (ಪಾರ್ವತಮ್ಮ) ಎಂಬುವವರನ್ನು ಪಾಣಿಗ್ರಹಣಮಾಡಿದರು. ತದನಂತರ ಇವರ ದಾಂಪತ್ಯ ಶುದ್ಧ ಹಾಗೂ ಸುಖದ ಸಂಪ್ರೀತಿಗೆ ಸನಿಹವಾಗಿತ್ತು. ಸಹಬಾಳ್ವೆಗೆ ಸಹಜ ಗೆಲುವು ಒಲವುಗಳನ್ನು ಕೊಟ್ಟಿತು. ಆ ದೈವ ಮಾದೇಶ್ವರನ ಕೃಪೆಯಿಂದ ಎಂಟು ಮಕ್ಕಳನ್ನು ಪಡೆದರು. ಅವರಲ್ಲಿ ಆರು ಹೆಣ್ಣು ಮಕ್ಕಳು, ಎರಡು ಗಂಡು ಮಕ್ಕಳುಗಳು. ಆದರೆ ವಿಧಿಯ ಸೂತ್ರದ ಸೆಳವಿಗೆ ಅರಿವಿಲ್ಲದ ಕರ್ಮದ ಕಬಂಧ ಬಾಹುಗಳ ಉಗ್ರಶಕ್ತಿಯ ಕ್ರೂರವಶಕ್ಕೆ ಆರು ಮಕ್ಕಳುಗಳು ಶ್ರೀ ಕುಮಾರಾರಾಧ್ಯರ ಕೈತಪ್ಪಿದವು. ಉಳಿದ ಮಕ್ಕಳು ಎರಡೇ. ಇದು ಕುಮಾರಾರಾಧ್ಯರ ಬದುಕಿನಲ್ಲಿ ಸುಳಿದು ಬಡಿದಂತ ಸಿಡಿಲೇ ? ಇಲ್ಲವೇ ಬೀಸಿಬಂದಂತ ಭೀಕರ ಬಿರುಗಾಳಿಯೇ? ಅಥವಾ ದೈವದ ಕೃಪೆಯಿಂದ ದೂರಾಗಿ ಜಾರಿದರೇ ? ಆದರೂ ಕುಮಾರಾರಾಧ್ಯರು ವಿಚಲಿತರಾಗದೆ, ವಿಷಣ್ಣವದನರಾಗದೆ, ವಿಷಾದದ ವಿಷಸುಳಿಗೂ ಬೀಳದೆ ಆ ದೈವ ಕೊಟ್ಟ ಫಲದ ಪ್ರಾಪ್ತಿ ಇಷ್ಟೇ ಎಂದು ಮನಕ್ಕೆ ಸಮಾಧಾನ ತಂದುಕೊಂಡು ತಮ್ಮ ಆಂತರ್ಯದ ಸಂಕಟಕ್ಕೆ ಕಡಿವಾಣ ಹಾಕಿ ತಮ್ಮ ಆ ಎರಡು ಮಕ್ಕಳನ್ನು ಅಕ್ಕರೆಯಿಂದ ಪೋಷಿಸಿ, ಬೆಳೆಸಿ ತಮ್ಮ ಕರ್ತವ್ಯವನ್ನು ಮಾಡುತ್ತ ಮುಂದೆ ತಾವು ಮಾಡಬೇಕಾಗಿರುವ ಕೆಲಸಕಾರ್ಯಗಳಲ್ಲಿ ದಿಟ್ಟ ಹೆಜ್ಜೆ ಇಟ್ಟರು.

ತಮ್ಮ ಏಕಮಾತ್ರ ಪುತ್ರಿ ಅಂಬುಜಾಕ್ಷಿ(ಪಾರ್ವತಮ್ಮ)ಎಂಬಾಕೆಯನ್ನು ಹೆಗ್ಗಡದೇವನಕೋಟೆ ತಾಲ್ಲೂಕು ಸಾಗರೆ ಮಠದ ಶ್ರೀ ಚಂದ್ರಶೇಖರಾರಾಧ್ಯರ ಪುತ್ರ ಜೆ.ಸಿ. ಚಂದ್ರಶೇಖರಾರಾಧ್ಯರಿಗೆ ಕೊಟ್ಟು ಲಗ್ನ ಮಾಡಿದರು. ಚಂದ್ರಶೇಖರಾರಾಧ್ಯರು ವೃತ್ತಿಯಲ್ಲಿ ಶಿಕ್ಷಕರಾಗಿ ಪ್ರವೃತ್ತಿಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಚಳವಳಿಗೆ ಇಳಿದು ತಮ್ಮ ಜೀವನವನ್ನೇ ಅದಕ್ಕೆ ಮುಡಿಪಾಗಿಟ್ಟರು. ತಮ್ಮ ಮಗ ನಾಗಭೂಷಣಾರಾಧ್ಯ [ನಾಗರಾಜು] ನನ್ನು ವಿದ್ಯಾಭ್ಯಾಸಕ್ಕಾಗಿ ತಮ್ಮ ಸ್ವಂತ ಬಂಧುಗಳ ಮನೆಗೆ ಕರೆದೊಯ್ದು ಇರಿಸಿ ಆಗಾಗ್ಗೆ ಬಂದು ಮಗನ ಆಗುಹೋಗುಗಳನ್ನು ತಿಳಿದು ಹೋಗುತ್ತಿದ್ದರು.

ಜಿನ್ನಹಳ್ಳಿ ಗ್ರಾಮದಲ್ಲಿರುವ ಗುಡ್ಡದಲ್ಲಿನ ಶ್ರೀಮಾದೇಶ್ವರದೇವರು ಒಡಮೂಡಿ ಲಿಂಗಾಕೃತಿಯಲ್ಲಿರುವುದು. ಅದರಿಂದ ಆ ದೇವಸ್ಥಾನವು ಮಾದೇಶ್ವರ ಗುಡ್ಡವೆಂದು ಕರೆಯಲ್ಪಡುತ್ತಿದೆ. ಆ ಗುಡಿಗೆ ಮೊದಲಿಗೆ ಐದು ಅಂಕಣದ ಸಣ್ಣ ಹೆಂಚಿನ ಮನೆ ಇತ್ತು.

ಕುಮಾರಾರಾಧ್ಯರ ತಂದೆ ರೇವಣಾರಾಧ್ಯ [ಪುಟ್ಟಸ್ವಾಮಿ] ರು ಜಿನ್ನಹಳ್ಳಿಗೆ ತೀರ ಸುತ್ತಮುತ್ತಲಿರುವ ಗ್ರಾಮದ ಮುಖಂಡರುಗಳೊಡನೆ ದೇವಸ್ಥಾನದ ಬಗ್ಗೆ ವಿಷಯ ಪ್ರಸ್ತಾಪಿಸಿ ಅವರ ಸಹಾಯ ಪಡೆದು ಎಂಟು ಅಂಕಣಕ್ಕೆ ಕಲ್ಲಿನಿಂದ ಗುಡಿಯನ್ನು ಕಟ್ಟಿಸಿದರು. ಪ್ರತಿವರ್ಷ ಚೈತ್ರಮಾಸದ ಪಾಡ್ಯದಲ್ಲಿ ಶ್ರೀ ಮಾದೇಶ್ವರನ ಜಾತ್ರೆ, ತೆಪ್ಪೋತ್ಸವ, ಬಾಯಿಬೀಗ, ಹುಲಿವಾಹನಸೇವೆ ನಡೆಯುತ್ತದೆ. ದೀಪಾವಳಿಯಲ್ಲಿ ಎಣ್ಣೆಮಜ್ಜನ, ರುದ್ರಾಭಿಷೇಕ, ಕೊಂಡ, ಆರಾಧನೆ, ಅನ್ನ ಸಂತರ್ಪಣೆಗಳೆಲ್ಲ ಸಾಂಗವಾಗಿ ನಡೆಯುವುವು. ಇವೆಲ್ಲ ಈಗಲೂ ಆಗಮಿಕರಾದಂಥ ಆರಾಧ್ಯ ಗುರುಗಳ ಮುಂದಾಳತ್ವದಲ್ಲಿ ನಡೆಯುತ್ತಿವೆ. ಈ ಗುಡಿಗೆ ಕರಿಗಳ ಗ್ರಾಮದ ನಾಲಾ ಬೈಲಲ್ಲಿ ತರೀ ಜಮೀನನ್ನು ತೆಗೆದುಕೊಂಡಿರುತ್ತದೆ. ಈ ದೇವರ ಹೆಸರಿನಲ್ಲಿ ಇನಾಮತಿ ಜಮೀನನ್ನು ಬಿಟ್ಟಿರುತ್ತದೆ. ಈ ಸ್ಥಳದ ಇನ್ನೊಂದು ಆಶ್ಚರ್ಯವೇನೆಂದರೆ ಮಾದೇಶ್ವರಗುಡ್ಡದ ಬಳಿ ಹುಲಿಯೊಂದು ಗೋಚರಿಸುತ್ತದೆಂಬ ಪ್ರತೀತಿ ಇದೆ.

ಊರೊಳಗೆ ಮಾರಮ್ಮನ ಗುಡಿ ಇದೆ. ಫಾಲ್ಗುಣ ಬಹುಳದಲ್ಲಿ ಹಬ್ಬ ನಡೆಯುತ್ತದೆ. ಮಾರೀಕುಣಿತ, ಮುಖವಾಡ ಧರಿಸಿ ಬರುವ ಆಚಾರಿಯ ಆಕರ್ಷಣೆ ಭಕ್ತಾದಿಗಳನ್ನು ರಂಜಿಸುತ್ತದೆ. ಇದು ಆರಾಧ್ಯರ ನೇತೃತ್ವದಲ್ಲಿ ನಡೆಯುತ್ತದೆ. ಇದಲ್ಲದೆ ಶ್ರೀರಾಮಮಂದಿರ ಇದೆ. ರಾಮೋತ್ಸವದಲ್ಲಿ ವಿಶೇಷಪೂಜೆ, ಭಜನೆ, ಹರಿಕಥೆ, ಪ್ರಸಾದ ವಿನಿಯೋಗವಾಗುವುದು. ರಾಮೋತ್ಸವದಲ್ಲಿ ಕುಮಾರಾರಾಧ್ಯರು ಪಾಲ್ಗೊಂಡು ದೇವರಹಾಡನ್ನು ಹಾಡಿ ಅವನ ಕೃಪೆಗೆ ಪಾತ್ರರಾಗುತ್ತಿದ್ದರು.

ಜಿನ್ನಹಳ್ಳಿ ಊರಿಂದ ಹಂಪಾಪುರ ಗ್ರಾಮಕ್ಕೆ ಬರುವಾಗ ಪಶ್ಚಿಮ ದಿಕ್ಕಿನಲ್ಲಿ ಮುರುಡ ಬಸವೇಶ್ವರ ದೇವಸ್ಥಾನವಿದೆ. ಈ ದೇವರ ಮಹಿಮೆ ಏನೆಂದರೆ ಸಕಾಲದಲ್ಲಿ ಮಳೆ ಬಾರದೆ ಬಂದ ಬೆಳೆ ನಾಶವಾಗುವ ಪರಿಸ್ಥಿತಿ ಬಂದಾಗ ಶ್ರೀ ಮುರುಡಬಸವೇಶ್ವರಮೂರ್ತಿಯನ್ನು ಕಪಿಲಾನದಿ ತೀರಕ್ಕೆ ಮೆರವಣಿಗೆ ತಂದು ಹೊಳೆಯಲ್ಲಿ ಅಭ್ಯಂಜನ ಮಾಡಿಸಿ ನೇಮ ನಿಷ್ಠೆಯಿಂದ ಪೂಜೆ ಸಲ್ಲಿಸಿ, ಭಕ್ತಿಯಿಂದ ಪ್ರಾರ್ಥಿಸಿ. ಶ್ರೀ ಮುರುಡಬಸವೇಶ್ವರಮೂರ್ತಿಯನ್ನು ಹೊಳೆಯಲ್ಲಿ ಮುಳುಗಿಸಿ ಮನೆಗೆ ಹಿಂದಿರುಗಿದ ಕೆಲವೇ ಘಂಟೆ ಒಳಗೆ ಸಮೃದ್ಧವಾಗಿ ಮಳೆ ಬಿದ್ದು ಭೂತಾಯಿಯ ಹಸಿವನ್ನು ಇಂಗಿಸಿ ಪಸಲಿಗೆ ಜೀವರಸ ನೀಡುವುದಂತೆ. ನಂತರ ಕಪಿಲಾನದೀ ದಂಡೆಯಿಂದ ಶ್ರೀ ಮುರುಡಬಸವೇಶ್ವರಮೂರ್ತಿಯನ್ನು ತಂದು ಹೋಮಹವನಗಳಿಂದ ರುದ್ರಾಭಿಷೇಕ ಮಾಡಿ ಪೀಠದಲ್ಲಿ ಕೂರಿಸಲಾಗುವುದು. ಮತ್ತು ಆರಾಧನೆ ನಡೆಸುವರು. ಇದು ಆರಾಧ್ಯರ ಮನೆತನದವರುಗಳ ಸನ್ನಿಧಿಯಲ್ಲಿಯೇ ನಡೆಯುವುದು. ಹಾಗೆ ಜಾನುವಾರುಗಳೇನಾದರೂ ಮನೆಗೆ ಬಾರದೆ ತಪ್ಪಿಸಿಕೊಂಡಲ್ಲಿ ಶ್ರೀ ಮುರುಡಬಸವೇಶ್ವರನ ಹೆಸರಲ್ಲಿ ಕಾಣಿಕೆ ಕಟ್ಟಿ, ಹರಕೆ ಮಾಡಿಕೊಂಡಲ್ಲಿ ಒಂದೆರಡು ದಿನಗಳಲ್ಲಿ ಹೋದ ಹಸುಗಳು ಮನೆಗೆ ಹಿಂದಿರುಗಿ ಬರುತ್ತಿದ್ದವಂತೆ. ಈಗಲೂ ಆ ನಂಬಿಕೆ ಊರಿನ ಜನರಲ್ಲಿ ಇದೆ.

ಆರ್. ಕುಮಾರಾರಾಧ್ಯರು ಹಂಪಾಪುರದ ಛೇರ್ಮನ್ ಮುತ್ತಣ್ಣನವರು ಸೇರಿ 1928ನೆಯ ಇಸ್ವಿಯಲ್ಲಿ ಡಾ||ಉಸ್ಮಾನ್ ಸಾಹೇಬರ (ಸೀನಿಯರ್ ಸರ್ಜನ್) ಉದಾರ ಕರುಣೆಯನ್ನು ಕೋರಿ

ಆಸ್ಪತ್ರೆಯನ್ನು ಹಂಪಾಪುರ ಗ್ರಾಮಕ್ಕೆ ಕೊಡಬೇಕೆಂಬ ಬೇಡಿಕೆಯನ್ನು ಅವರಲ್ಲಿ ವಿಶದಪಡಿಸಿದರು. ತದನಂತರ ಅವರಿಂದ ಆರ್ಡರ್ ಮಾಡಿಸಿ ಮೈಸೂರು ಜಿಲ್ಲಾ ಡೆಪ್ಯೂಟಿ ಕಮೀಷನರ್ ಶ್ರೀ ಅನಂತರಾಮನ್ ಬಿ.ಎ., ಸಾಹೇಬರವರವನ್ನು ಆಹ್ವಾನಿಸಿ ಅವರ ಘನ ಅಧ್ಯಕ್ಷತೆಯಲ್ಲಿ ಆಸ್ಪತ್ರೆಯನ್ನು ಹಂಪಾಪುರದಲ್ಲಿ ಪ್ರಾರಂಭಿಸಲಾಯಿತು. ಅಲ್ಲದೇ ಸದರೀ ಆಸ್ಪತ್ರೆಗೆ ಬರುವ ರೋಗಿಗಳ ಉಪಚಾರಕ್ಕೆ [ಹಾಲು, ಗಂಜಿ ಇತರೇ ಸಣ್ಣ ಸೌಲಭ್ಯಗಳಿಗಾಗಿ] ಆರ್. ಕುಮಾರಾರಾಧ್ಯರು ಚೊಂಪನಹಳ್ಳಿ ಗ್ರಾಮದಲ್ಲಿನ ನಾಲಾ ಕೆಳಗಿನ ಭಾಗದಲ್ಲಿದ್ದ ತಮ್ಮ ಜಮೀನಿನಲ್ಲಿಹದಿನೈದು ಎಕರೆ ಭೂಮಿಯನ್ನು ದಾನವಾಗಿ ಬಿಟ್ಟುಕೊಡುವ ತಮ್ಮ ಮನದ ಇಂಗಿತವನ್ನು ದಿವಾನ್ ಮಿರ್ಜಾ ಮಹಮ್ಮದ್ ಇಸ್ಮಾಯಿಲ್ ಸಾಹೇಬರವರಿಗೆ ಪತ್ರದ ಮೂಲಕ ವ್ಯಕ್ತಪಡಿಸಿದರು. ಮುಂದೆ ಸರ್ಕಾರದಿಂದ ಆರ್ಡರಾಗಿ ದಾನಿಗಳ ಅನುಮತಿಯಂತೆ ಸದರಿ ಜಮೀನನ್ನು ಹರಾಜು ಮಾಡಿಸಿ ಬಂದ ಆ ಹಣವನ್ನು ಹೆಗ್ಗಡದೇವನಕೋಟೆ ತಾಲ್ಲೂಕು ಟ್ರೆಜರಿಯಲ್ಲಿ ಡಿಪಾಸಿಟ್ ಮಾಡಿಸಲಾಯಿತು. ಇದು ಕಮಾರಾರಾಧ್ಯರ ಹೃದಯಶ್ರೀಮಂತಿಕೆ.

ಹಂಪಾಪುರದಲ್ಲಿ ಪೋಲೀಸ್ ಸ್ಟೇಷನ್ ತೀರ ಹಳೆಯದಾದ ಸಣ್ಣ ಹೆಂಚಿನ ಮನೆಯಲ್ಲಿ ಇದ್ದಿತು. ಆರ್. ಕುಮಾರಾರಾಧ್ಯರು ಸರ್ಕಾರಕ್ಕೆ ಅರ್ಜಿ ಹಾಕಿ ವಿಷಯ ತಿಳಿಸಿದ ಮೇಲೆ ಹಳೇ ಕಟ್ಟಡ ಹೊಸದಾಗಿ ನವೀಕರಿಸಲ್ಪಟ್ಟಿತು. ಅದು ಮೈಸೂರು ಜಿಲ್ಲಾ ಸೂಪರಿಂಟೆಂಡೆಂಟ್ ಮರಿಯಪ್ಪನವರ ಸಹಕಾರದಿಂದಾದುದು. ಕುಮಾರಾರಾಧ್ಯರ ಅತೀವ ಶ್ರಮದ ಫಲ ಎಂದರೆ ತಪ್ಪಿಲ್ಲ. ಹಾಗೆಯೇ ಹಳೆಯದಾದ ಧರ್ಮಛತ್ರ ತುಂಬಾ ಶಿಥಿಲವಿದ್ದ ಕಾರಣ ಕುಮಾರಾರಾಧ್ಯರು ಸರ್ಕಾರಕ್ಕೆ ತಮ್ಮ ಅರ್ಜಿಯ ಅಹವಾಲನ್ನು ಕಳುಹಿಸಿ ನಾಲ್ಕಾರು ಬಾರಿ ಭೇಟಿ ಮಾಡಿದ ನಂತರ ಮೈಸೂರು ಡಿಸ್ಟ್ರಿಕ್ಟ್ ಬೋರ್ಡಿನ ಅಧ್ಯಕ್ಷರಾದಂಥ ಚನ್ನಬಸಪ್ಪನವರು ಆ ಛತ್ರವನ್ನು ಹೊಸದಾಗಿ ನವೀಕರಿಸಿ ಅದನ್ನು ಟಿ.ಬಿ.ಯನ್ನಾಗಿ ಪರಿವರ್ತಿಸಿದರು.

ಕರಿಗಳ ಗ್ರಾಮದಲ್ಲಿ ನಡೆಯುತ್ತಿದ್ದ ಸಂತೆಯನ್ನು ಹಂಪಾಪುರ ಗ್ರಾಮಕ್ಕೆ ವರ್ಗ ಮಾಡಿಸಿ ಅಲ್ಲಿ ಸಂತೆ ನಡೆಯುವಂತೆ ಕುಮಾರಾರಾಧ್ಯರು ಏರ್ಪಾಡು ಮಾಡಿದರು. ಅಲ್ಲದೆ ಮಸ್ತಾನ್ ಸಾಹೇಬರ ಜತೆಗೂಡಿ ಮಾರ್ಚಹಳ್ಳಿ ಪಟೇಲ್ ಅಬ್ದುಲ್ ಲತೀಫ್‌ರವರ ಆರ್ಥಿಕ ನೆರವಿನಿಂದಲೂ ಇತರೇ ಖರ್ಚುಗಳನ್ನು ತಮ್ಮ ಕೈಯಿಂದಲೂ ಹಾಕಿ ಬಡಪರಿಶಿಷ್ಟ ಜನಾಂಗದವರ ಐದು ಮದುವೆಗಳನ್ನು [ಪಂಚಕಲ್ಯಾಣ] ಡೆಪ್ಯೂಟಿ ಕಮೀಷನರ್‌ರವರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು.

ಹುಣಸೂರ್ ತಾಲ್ಲೂಕು ಕರೀಮುದ್ದನಹಳ್ಳಿಯ ಗಂಗಾಭವಾನೀ ನದೀ ತೀರದಲ್ಲಿಮಾದೇಶ್ವರ ದೇವಸ್ಥಾನವಿದೆ. ಉತ್ತರದೇಶದ ಆರಾಧ್ಯವಂಶಜರಾದ ಶ್ರೀ ಕೆಂಡಗಣ್ಣ ಮಹಾಸ್ವಾಮಿಗಳ ಗದ್ದುಗೆ ಇರುವುದು. 1927ರಲ್ಲಿ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಗಳವರು ಅಲ್ಲಿನ ಗದ್ದುಗೆಗೆ ಬಂದ ಸಂದರ್ಭದಲ್ಲಿ ಆರ್. ಕುಮಾರಾರಾಧ್ಯರು ಮಹಾರಾಜರಿಗೆ ಅರ್ಜಿಯನ್ನು ಅರ್ಪಿಸಿ ಮೈಸೂರು ಮಾನಂದ್ವಾಡಿ ಹೈ ರೋಡು, ಮೇಟುಕಲ್ಲು

ಗುಡ್ಡದ ಉತ್ತರ ದಿಕ್ಕಿನಲ್ಲಿ ಗದ್ದುಗೆಗೆ ರಸ್ತೆ ಮಾಡಿಸಿಕೊಡಬೇಕು ಹಾಗೂ ದೇವಸ್ಥಾನದ ಜೀರ್ಣೋದ್ಧಾರಕ್ಕೆ ತಮ್ಮ ಅಮೂಲ್ಯ ಕೊಡುಗೆ ಆಗಲೆವೇಕೆಂದು ಪ್ರಾರ್ಥಿಸಿಕೊಂಡಾಗ ಒಡೆಯರು ಸಮ್ಮತಿಸಿ ಆ ಕಾರ್ಯವನ್ನು ಪೂರ್ಣಗೊಳಿಸಿಕೊಟ್ಟರು. ಮುಂದೆ ಅಲ್ಲಿಗೆ ಬರುವ ಭಕ್ತಾದಿಗಳ ಅನುಕೂಲಕ್ಕೆ ಹಾಗೂ ನಿತ್ಯ ದೇವರಸೇವೆಗೆಂದು ಕುಮಾರಾರಾಧ್ಯರು ತಮ್ಮ ಜಮೀನಿನಲ್ಲಿ ಒಂದು ಎಕರೆ ಜಮೀನನ್ನು ಕೆಂಡಗಣ್ಣ ಸ್ವಾಮಿಯ ಹೆಸರಲ್ಲಿ ದೇವಸ್ಥಾನಕ್ಕೆ ಬರೆದು ರಿಜಿಸ್ಟರ್ ಮಾಡಿಸಿ ಕುಟ್ಟವಾಡಿ ಗ್ರಾಮದ ಅರ್ಚಕರಿಗೆ ಆ ಪತ್ರವನ್ನು ಕೊಟ್ಟಿರುತ್ತಾರೆ.ಇದಲ್ಲದೆ ಹಂಪಾಪುರದಲ್ಲಿ ಪ್ರೈಮರಿ ಶಾಲೆ, ಬಸ್‌ಸ್ಟ್ಯಾಂಡ್ ಮುಂತಾದ ಜನೋಪಯೋಗದ ಕಾರ್ಯಗಳಿಗೆ, ಹೆಚ್ಚಿನ ಶ್ರಮಸಾಧನೆಗೆ ಮುಂದಾದರೆಂದರೆ ಅತಿಶಯವಿಲ್ಲ.

ಇದಿಷ್ಟೇ ಅಲ್ಲವೆಂಬಂತೆ ಕುಮಾರಾರಾಧ್ಯರು ಮೈಸೂರು ನಗರದಲ್ಲಿರುವ ಆರಾಧ್ಯ ಜನಾಂಗದವರ ಹಾಸ್ಟೆಲ್ಲಿಗೆ 25ಎಕರೆ ಜಮೀನನ್ನು ದಾನವಾಗಿ ಕೊಟ್ಟಿರುತ್ತಾರೆ. ಅದು ಆ ಹಾಸ್ಟೆಲ್ಲಿನಲ್ಲಿ ಇದ್ದು ವಿದ್ಯಾಭ್ಯಾಸವನ್ನು ಮಾಡುವ ಆರಾಧ್ಯ ಜನಾಂಗದ ವಿದ್ಯಾರ್ಥಿಗಳ ಊಟಕ್ಕೋಸ್ಕರವಾಗಿಯೇ ಹೊರತು ಮತ್ತಾವ ಕಾರಣಕ್ಕಾಗಿ ಅಲ್ಲ. ಹಾಸ್ಟೆಲ್ ವಿಷಯದಲ್ಲಿ ಕುಮಾರಾರಾಧ್ಯರು ಬಹಳ ವರ್ಷಗಳ ಹಿಂದೆಯೇ ಅನೇಕ ಸ್ಥಳಗಳಲ್ಲಿ, ಗ್ರಾಮಗಳಲ್ಲಿ ಗಣ್ಯ ವ್ಯಕ್ತಿಗಳಿಂದ ಸಭೆಗಳನ್ನು ನಡೆಸಿದ್ದರೆಂಬುದಕ್ಕೆ ಆ ಸಭೆಗಳ ಕರಪತ್ರಗಳೇ ಸಾಕ್ಷಿ. ಅಲ್ಲದೆ 1943 ನೆ ಇಸ್ವಿಯಲ್ಲಿ" ಆರಾಧ್ಯಯುವಕಸಂಘ" ಸ್ಥಾಪಿಸಲು ಕುಮಾರಾರಾಧ್ಯರೂ ಕಾರಣವಾಗಿದ್ದುದು ಸತ್ಯವು, ಇದಲ್ಲದೆ ಅನೇಕ ಸಣ್ಣಪುಟ್ಟ ಕಾರ್ಯಗಳನ್ನು ನಿಷ್ಠೆಯಿಂದ, ನಿಸ್ವಾರ್ಥ ಭಾವನೆಯಿಂದ ನಡೆಸುತ್ತಿದ್ದರೆಂಬುದರಲ್ಲಿ ಎರಡು ಮಾತಿಲ್ಲ. ಇದೇ ಆರ್. ಕುಮಾರಾರಾಧ್ಯರ ಬದುಕು ಹಾಗೂ ಅವರು ಮಾಡಿದಂತ ಸಾಧನೆಗಳ ಸಾಫಲ್ಯ.

ಇನ್ನು ಅವರ ಜೀವನದ ಬಗ್ಗೆ ಹೇಳುವುದಾದರೇ, ಆ ಕಾಲದ ವಾತಾವರಣ ಹೇಗೆ ಇತ್ತೆಂಬುದನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸುವುದಿದೆ. "ತಾಯಿಯಂತೆ ಮಗಳು, ನೂಲಿನಂತೆ ಸೀರೆ" ಎಂಬ ನಾಣ್ನುಡಿಯಂತೆ ತಂದೆ ತಾಯಿಗಳ ಸದ್ಗುಣಗಳೇ ಕುಮಾರಾರಾಧ್ಯರಿಗೆ ಆನುವಂಶಿಕವಾಗಿ ಬಂದಿತ್ತೆಂದರೆ ತಪ್ಪಿಲ್ಲ. ಕುಮಾರಾರಾಧ್ಯರು ಎತ್ತರವಾದ, ಶ್ಯಾಮಲ ವರ್ಣದ, ವಿಶಾಲನೇತ್ರಗಳ, ಕೋಮಲಮನಸ್ಸಿನ ಸಹೃದಯ ವ್ಯಕ್ತಿ.ಇವರು ತೀರ ಸರಳಸ್ವಭಾವದವರು. ಸರಳ ಉಡುಗೆ ಮತ್ತು ದೇವರಲ್ಲಿ ಅಪಾರ ನಂಬಿಕೆ, ಭಕ್ತಿ ಉಳ್ಳವರು. ಇವರು ದೂರದ ಪ್ರಯಾಣ ಮಾಡುವ ಸಂದರ್ಭಗಳಲ್ಲಿ ಉಡುಪಿನಲ್ಲಿ ಸ್ವಲ್ಪ ಬದಲಾವಣೆ ಇತ್ತು. ಕೋಟು, ತಲೆಗೆ ಮೈಸೂರು ಪೇಟ,ಬಿಳಿಯ ಕಚ್ಚೆಪಂಚೆ. ಇವರು ಹೆಚ್ಚಾಗಿ ಕುದುರೆಯ ಮೇಲೆ ಪಯಣಿಸುತ್ತಿದ್ದರು. ಆದ ಕಾರಣ ಕುದುರೆಯನ್ನೂ ಸಾಕಿಕೊಂಡಿದ್ದರು.

ಧಾರ್ಮಿಕ ಹಬ್ಬಗಳನ್ನು ನಡೆಸದೇ ಬಿಟ್ಟವರಲ್ಲ. ಹಬ್ಬ ಹರಿದಿನಗಳಲ್ಲಿ, ಊರಿನ ಅನೇಕರು ಇವರ ಮನೆಗೆ ಬರುತ್ತಿದ್ದರು. ಕಾರಣ ಇಷ್ಟೇ. ಗುರುಗಳ ಮನೆಯ ಪ್ರಸಾದ ಪಡೆದು ಹೋದಲ್ಲಿ ನಮಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಆ ಜನರಲ್ಲಿತ್ತು. ಹಾಗೆ ಕೆಲವು ಮುಸಲ್ಮಾನ ಜನರೂ ಕೂಡ ಬಂದು ಹೋಗುತ್ತಿದ್ದರು. ನೆಂಟರಿಷ್ಟರು ಬಂದಾಗ ಅವರಿಗೆ ಭೂರಿ ಭೋಜನ ಮಾಡಿಸುತ್ತಿದ್ದರು. ಅವರುಗಳನ್ನು ಪ್ರೀತಿಯಿಂದ ಎರಡು ಮೂರು ದಿನಗಳು

ಬಳಸಿಕೊಳ್ಳುತ್ತಿದ್ದರು. ಕುಮಾರಾರಾಧ್ಯರಲ್ಲಿ ಮತ್ತೊಂದು ವೈಶಿಷ್ಟ್ಯವಿತ್ತು. ಅದೆಂದರೆ ಒಂದು ದೋಸೆಯೋ, ಇಡ್ಲಿಯೋ ಅಥವಾ ಒಂದು ಬಾಳೆಹಣ್ಣೋ ಯಾವುದೇ ಆಗಿರಲಿ ಅದರಲ್ಲಿ ಯೂ ಒಂದು ಸ್ವಲ್ಪವನ್ನು ಇತರರಿಗೆ ಕೊಟ್ಟು, ತಾವು ನಂತರ ಸ್ವೀಕರಿಸುತ್ತಿದ್ದುದು. ಇವರ ಸಹೃದತೆಯ ಸಂಪನ್ನತೆಗೆ ಸಹಧರ್ಮಿಣಿ ಪಾರ್ವತಮ್ಮ ಹೊಂದಿಕೊಂಡಿದ್ದರು. ಪತಿಗೆ ನೆಳಲಾಗಿದ್ದರು. ಸೇವೆಗೆ ಸಿದ್ಧರಾಗಿದ್ದರು, ಪ್ರೀತಿಗೆ ಬದ್ಧರಾಗಿದ್ದರು.

ಸುಳ್ಳು, ಮೋಸ, ವಂಚನೆಗಳಿಂದ ಕುಮಾರಾರಾಧ್ಯರು ಎಷ್ಟು ದೂರದಲ್ಲಿ ಇದ್ದರೆಂದರೆ, ಅದನ್ನು ಹೇಳಲು ಬರುವುದಿಲ್ಲ. ನೇರನಡೆ, ನೇರನುಡಿ, ಸೃಜತೆಗೆ ಚೇತನವಾಗಿತ್ತು. ಸ್ಥಿರತೆಗೆ ಸ್ಫೂರ್ತಿಯಾಗಿತ್ತು. ಭಾವನೆಗಳಿಗೆ ಪೂರಕವಾಗಿತ್ತು.

ಕುಮಾರಾರಾಧ್ಯರಿಗೆ ಕೋಪದ ನಂಟೂ ಇತ್ತು. ಆದರೆ ಆ ಕೋಪವನ್ನು ಸಮಯ ಸನ್ನಿವೇಶಗಳಲ್ಲಿ ಮಾತ್ರ ಬಳಸುತ್ತಿದ್ದರು. ಸುಳ್ಳು ಹೇಳುವವರನ್ನು ಕಂಡಾಗ ಸಂಕಟಪಡುತ್ತಿದ್ದರು. "ಸುಳ್ಳು ವಿಷದ ಜೇನುತುಪ್ಪವಿದ್ದಂತೆ" ಎಂದು ಎಷ್ಟೋ ಸಂದರ್ಭಗಳಲ್ಲಿ ಹೇಳಿದ್ದುಂಟು.

ಇವರ ಮತ್ತೊಂದು ವೈಶಿಷ್ಟ್ಯವೇನೆಂದರೆ ಮಕ್ಕಳೊಡನೆ ಬೆರೆತು ತಮಾಷೆ ಇಲ್ಲವೇ ಹಾಸ್ಯದ ಮಾತುಗಳನ್ನು ಆಡುತ್ತ, ಮಕ್ಕಳಲ್ಲಿ ಮಕ್ಕಳಂತೆ ಆಡುತ್ತಿದ್ದರು. ಇವರಿಗೆ ಒಳ್ಳೆಯ ಕಂಠ ಇದ್ದುದರಿಂದ ಹಾಡುತ್ತಿದ್ದರು. ಅಲ್ಪ ಸ್ವಲ್ಪ ಸಂಗೀತದ ಜ್ಞಾನವಿತ್ತು. ಇವರಿಗೆ ಪಿಟೀಲು ನುಡಿಸುವ ಸಾಮರ್ಥ್ಯವಿತ್ತು. ಆದಕಾರಣ ತಮ್ಮ ಮನೆಯಲ್ಲಿ ತಬಲ, ದಮ್ಮಡಿ, ಚಿಟ್ಟಿತಾಳ, ಸಣ್ಣ ಹಾರ್ಮೋನಿಯಂಗಳು ಇದ್ದವು. ಆದರೆ ಪಿಟೀಲು ನುಡಿಸುವುದರಲ್ಲಿ ಅತಿಯಾದ ಮೋಹ. ಇವರು ತಮ್ಮದೇ ರಾಗದಲ್ಲಿ ಕೆಲವು ಪದ್ಯಗಳನ್ನೋ ಹಾಡುಗಳನ್ನೋ ಇಲ್ಲವೇ ಜಾನಪದಗಳನ್ನೋ ಪಿಟೀಲು ನುಡಿಸುತ್ತ ಹಾಡುತ್ತಿದ್ದರು. ಅವರು ಹಾಡುತ್ತಿದ್ದ ಕೆಲವು ಹಾಸ್ಯಭರಿತ ಪದಗಳ ಸಾಲುಗಳು ಹೀಗಿದ್ದವು.

*ಚಲುವಿನ ಹುಡುಗೀಯ ಹುಡುಕಾಟ ಏನಯ್ಯ?*
*ಬೆಡಗೀನ ಹುಡುಗೀಯ ನಡುವೀನ ಬಳುಕಾಟ ಏನಯ್ಯ?*
*ಯಾಕೇ ಏನೇ ತಲೆದಿಂಬಿಗಾಗಿ ತಡಕಾಡುತಾ ಪರದಾಡುತಾ*
*ಅಳುತಾಳೆ ಯಾಕೆ ತನ್ನ ತಲೆಯನ್ನೇ ಕೆರಿತಾಳೆ ಯಾತಕ್ಕೆ*
*ಗುಡುಗುತ್ತಾಳೆ ಸಿಡುಕುತ್ತಾಳೆ ಹಲ್ಲನ್ನೇ ಮಸೆಯುತ್ತಾಳೆ*

*ಹಾಗೆಯೇ ಮಾದೇಶ್ವರನ ಮೇಲೆ ಹಾಡುತ್ತಿದ್ದ ಸಾಲುಗಳು ಹೀಗಿವೆ.*
*ದಿನ ದಿನ ದಿನ್ ದಿನ ದಿನ ದಿನ್*
*ನಾದರ್ ದಿನ್ನ ನಾದರ್ ದಿನ್ನ ನನನನಾ....*
*ಬಾರೇ ಬಾರೇ ಚಿನ್ನ ಕುಂತು ಕೇಳೇ ಚಿನ್ನ*
*ಸುಂಡೆಕಾಯಿ ಉಂಡೆಕಾಯಿ ಬೆಂಡೆಕಾಯಿ*
*ಬದ್ನೆಕಾಯಿ ಬಾಳೆಕಾಯಿ ಕುಂಬಳಕಾಯಿ ತಂದನಾ ತಂದನಾ ತಂದನಾ*

*ಸಂತೆ ಯಾಕೇ ಚಿಂತೆ ಯಾಕೇ ದೀಪ ಯಾಕೇ ಧೂಪ ಯಾಕೇ*
*ತಾಳ ಯಾಕೆ ತಂತಿ ಯಾಕೆ ಭಕ್ತೀಲಿ ಹಾಡೇ ಮಾದೇಶ್ವರನ್ನ*
*ಭಕ್ತೀಲಿ ಒಲಿವ ಪ್ರೀತೀಲಿ ಬರುವ ನಮ್ಮ ಮಾದೇಶ್ವರ*
*ಹರಹರ ಶಂಭೋ ಶಂಕರ, ಮಾದೇಶ್ವರ ಮಾದೇಶ್ವರ ||*

ಹೀಗೆ ಅವರು ಮಾದೇಶ್ವರನ ಬಗ್ಗೆ ತನ್ಮಯರಾಗಿ ಹಾಡುತ್ತಿದ್ದರು. ಇದು ನನ್ನ ನೆನಪಿನಲ್ಲಿ ಈಗಲೂ ಹಚ್ಚಹಸುರಾಗಿ ಉಳಿದಿದೆ. ತಮ್ಮ ಶಿಷ್ಯರಿಗೆ ಆಗಲಿ, ಸ್ನೇಹಿತರಿಗೆ ಆಗಲಿ, ಬಂಧುಗಳಿಗೆ ಆಗಲಿ ಕೆಲವು ಒಳ್ಳೆಯ ಮಾತುಗಳನ್ನು ಹೇಳುತ್ತಿದ್ದುದು ನನ್ನ ನೆನಪಿನಿಂದ ಮಾಸಿಲ್ಲ. ಆ ಮಾತುಗಳೇನೆಂದರೆ,

*ರಾಮಾಯಣ ಕೇಳ್ಬಿದ್ರು ಪಾರಾಯ್ಣ ಪಟ್ನೇ*
*ಸತ್ಯ ಬಿಟ್ರು ಬಿದು ಆದ್ರೆ ಸುಳ್ಳಿನ ಸುಳಿಗೆ ಬೀಳ್ಬೇಡ*
*ಹಸ್ವು ಆಯ್ತೂಂತ ಅಂಗ್ಲಾ ಚದು ತಪ್ಪು ದಣ್ವಾಯ್ತೂಂತ ಮಲ್ಗದ್ ತಪ್ಪು*
*ಅಪ್ಪಾಂತ ಅಂದಿದ್ರು ಚಿಂತೆ ಇಲ್ಲ ಅಯ್ಯಪ್ಪಾಂತ ಅಡ್ಬೀಳ್ಬೇಡ*

ಈ ಮಾತುಗಳು ಎಷ್ಟು ಅರ್ಥಪೂರ್ಣ, ಸತ್ವಪೂರ್ಣ ಆಗಿತ್ತು ಎಂದರೆ ಕುಮಾರಾರಾಧ್ಯರು ಎಂದೂ ಕಷ್ಟಾಂತ ಕರಗದೆ, ನಷ್ಟಾಂತ ನಲುಗದೆ ಮೃಷ್ಟಾನ್ನ ಭೋಜನವಂತೂ ಬಯಸದೆ ದೇವರು ಕರುಣಿಸಿದ ಪ್ರಸಾದವನ್ನು ಪರಮಶ್ರೇಷ್ಠ ಎಂದು ಸ್ವೀಕರಿಸುವ ಸಹಜ ಮನಸ್ಸು ಅವರದಾಗಿತ್ತು. ಎಂದೂ ಅವರು ಸೋಮಾರಿ ಆಗಿರಲಿಲ್ಲ. ಆಲಸ್ಯವನ್ನೂ ಹೊಂದಿರಲಿಲ್ಲ. ನಿತ್ಯಕರ್ಮಗಳನ್ನು ಬಿಡದೆ ಮಾಡುತ್ತಿದ್ದರು. ಮಾಡುವ ಕೆಲಸದಲ್ಲಿ ಮನಸ್ಸನ್ನು ಏಕಾಗ್ರತೆಗೆ ಒಳಪಡಿಸಿಕೊಳ್ಳುತ್ತಿದ್ದರು.

ಮತ್ತೊಂದು ವಿಷಯ ಅವರಲ್ಲಿ ಕಂಡುಬರುತ್ತಿದ್ದುದು ಖರ್ಚುವೆಚ್ಚಗಳ ಬಗ್ಗೆ, ಮುಖ್ಯ ವಿಚಾರಗಳ ಬಗ್ಗೆ, ಘಟನೆಗಳು ಸಂಭವಿಸಿದ್ದರ ಬಗ್ಗೆ ತಮ್ಮ ಡೈರಿಯಲ್ಲಿ ಬಿಡದೆ ಬರೆಯುತ್ತಿದ್ದರು. ಎಲ್ಲ ಜನರನ್ನು ಪ್ರೀತಿ ವಿಶ್ವಾಸಗಳಿಂದ ಕಾಣುತ್ತಿದ್ದರು. ಇಷ್ಟೇ ಅಲ್ಲ ಕಷ್ಟದಲ್ಲಿರುವ ವ್ಯಕ್ತಿಗಳು ಯಾರೇ ಆಗಿರಲಿ ಅವರಿಗೆ ಸಮಾಧಾನ, ಧೈರ್ಯಗಳನ್ನು ತುಂಬಿ ತಮ್ಮ ಕೈಲಾದ ಸಹಾಯವನ್ನು ಮಾಡುವ ಉದಾರ ಮನೋಭಾವನೆ ಇತ್ತು. ಇವರು ಕೆಲವು ಕಾಲದವರೆಗೆ ಪಾಠ ಹೇಳಿಕೊಡುವ ಗುರು [ಶಿಕ್ಷಕ] ವಾಗಿ ಕೆಲಸ ಮಾಡಿರುತ್ತಾರೆ. ಸ್ಟಾಂಪ್ ವೆಂಡರ್ ಆಗಿಯೂ ಕೆಲವಾರು ವರ್ಷಗಳು ಸೇವೆ ಮಾಡಿರುತ್ತಾರೆ.

ಆರಾಧ್ಯರು ಆಕಸ್ಮಿಕವಾಗಿ ಮರದ ಮೇಲಿಂದ ಬಿದ್ದು ಕಾಲನ್ನು ಮುರಿದುಕೊಂಡು ಹಾಸಿಗೆ ಹಿಡಿದರು. ಅದು ಅವರ ಎಲ್ಲ ಚಟುವಟಿಕೆಗಳ ಉತ್ಸಾಹಕ್ಕೆ ಮುಳುವಾಯಿತು. 1961ನೇಯ ಇಸ್ವಿಯಲ್ಲಿ ಪರಂಧಾಮಗೈಯ್ದರು. ಇದೇ ಆರ್ ಕುಮಾರಾರಾಧ್ಯರ ಸರಳ ಜೀವನ, ಸಹಕಾರಭಾವ, ಸಜ್ಜನಿಕೆಯ ಸಿರಿ.

* * *

# ಭುವಿಯ ಭಾಗ್ಯ




*"ಅಸ್ಥಿರಂ ಜೀವಿತಂ ಲೋಕೇ*
*ಅಸ್ಥಿರೇ ಧನಯೌವನೇ*
*ಅಸ್ಥಿರಾ ಪುತ್ರದಾರಾಶ್ಚ*
*ಧರ್ಮಕೀರ್ತಿದ್ವಯಂ ಸ್ಥಿರಮ್"*

"*ಜೀವನ ನಶ್ವರ, ನೀರಮೇಲಣ ಗುಳ್ಳೆ ನಿಜವಲ್ಲ ಪ್ರಭುವೇ*" ಎಂದಿದ್ದಾರೆ ಹಿರಿಯರು. ಮಾನವನ ವಯೋಮಿತಿ ಒಂದುನೂರು ವರ್ಷವೆಂದಿದ್ದರೂ ಸ್ಥಿರವಲ್ಲ. ಜಾತಸ್ಯ ಮರಣಂ ಧ್ರುವಂ. ಅದು ಎಂದೂ ತಪ್ಪಿದ್ದಲ್ಲ.

*ತ್ರೀಮಾಸಮರ್ಧಮಾಸಂ ವಾ ಚೇಷ್ಟಿಕಾ ವಿನಿವರ್ತತೇ*
*ವಿಕಾರಸ್ತು ತದಾರಬ್ಧೋ ನಿತ್ಯಂ ಲಶುನಗಂಧವತ್ ||*

"ಸಂಪತ್ತು ತಿಂಗಳೋ ಹದಿನೈದು ದಿನಗಳೋ ಬಂದು ಹಗರಣ ಮಾಡಿ ಹೋಗುತ್ತದೆ. ಆದರೆ ಅದು ಆರಂಭಗೊಳಿಸಿದ ವಿಕಾರ ಚೇಷ್ಟೆಗಳು ಮಾತ್ರ ಬೆಳ್ಳುಳ್ಳಿಯ ದುರ್ಗಂಧದಂತೆ ಇದ್ದು ತೀರುತ್ತದೆ" ಎಂದು ಮನುಸ್ಮೃತಿಯಲ್ಲಿ ಹೇಳಿದೆ. "*ಸಿರಿನಿಂದ ಕಾಲೇಳೇನೀದಪಳೇ*" ಎಂಬ ನಾಣ್ನುಡಿಯೂ ಇದೆ. ಆದ್ದರಿಂದ ಮನುಷ್ಯನನ್ನು ಧನ ಹಿಂಬಾಲಿಸುವುದಿಲ್ಲ.

ಧನ ಹೇಗೆ ಅಸ್ಥಿರವೋ ಹಾಗೆಯೇ ಯೌವನವೂ ಕೂಡ ಅಸ್ಥಿರ. ಯೌವನ ನಾಲ್ಕಾರು ವರ್ಷ ಮಾತ್ರ. ಅನಂತರ ಮುಪ್ಪಡುರತ್ತದೆ. ಅದರಿಂದ ಯೌವನ ಮನುಷ್ಯನನ್ನು ಹಿಂಬಾಲಿಸುವುದಿಲ್ಲ.

*ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಟಸಮಂ ಕ್ಷಿತೌ |*
*ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ |*
*... ಮನುಸ್ಮೃ...*

ಜೀವಿಯು ಸತ್ತು ಶವವಾದೊಡನೆ ಕಲ್ಲು, ಸೌದೆ ಮಣ್ಣುಗಳಂತೆ ಅದನ್ನು ಬಿಟ್ಟು ಹೋಗುತ್ತಾರೆ. ಧರ್ಮವೊಂದೆ ಮೃತನನ್ನು ಹಿಂಬಾಲಿಸುತ್ತದೆ.

ಹೆತ್ತು ಹೊತ್ತು ತನ್ನ ಪಾಲಿನ ಅನ್ನವನ್ನೂ, ನೀರನ್ನೂ ಕೊಟ್ಟು ಸಾಕಿ ಸಲಹಿದ ಮಕ್ಕಳು ಸ್ಥಿರವಲ್ಲ. ತನ್ನ ಜೀವವನ್ನೆ



**- ಬಿ. ಎಂ. ಎಂ. ಆರಾಧ್ಯ**
ಎಂ. ಎ., ಎಲ್‌ಎಲ್.ಬಿ.,
ವಕೀಲರು ಮತ್ತು ಅಧ್ಯಕ್ಷರು,
ಆರಾಧ್ಯ ವಿವಿದೋದ್ದೇಶ ಸಂಘ
ರಿ. ಬೆಂಗಳೂರು.
ದೂ. 26654628

ಸವೆಸಿ ಸಾಕಿದ ಹೆಂಡತಿಯೂ ಎಷ್ಟೋ ವೇಳೆ ಸ್ಮಶಾನದವರೆಗೂ ಹೋಗುವುದಿಲ್ಲ.

ಹಾಗಾದರೆ ಮಾನವನನ್ನು ಬೆನ್ನುಬಿಡದೆ ಹಿಂಬಾಲಿಸುವುದು ಏನೂ ಇಲ್ಲವೇ ಎಂದರೆ ಇದೆ. ಮಾನವನು ತನ್ನ ಜೀವಿತಕಾಲದಲ್ಲಿ ಮಾಡಿದ ಧರ್ಮ, ಗಳಿಸಿದ ಕೀರ್ತಿ ಇವೆರಡೂ ಮನುಷ್ಯನನ್ನು ಹಿಂಬಾಲಿಸುತ್ತವೆ. ಧನ ಮತ್ತು ಯೌವನದಂತೆ ಅವನನ್ನು ತ್ಯಜಿಸುವುದಿಲ್ಲ.ಕೈ ಹಿಡಿದ ಹೆಂಡತಿ ಗಂಡನ ಶವವನ್ನು ಮಣ್ಣು ಮಾಡಿ ಪಂಚಭೂತಗಳಿಗೆ ಒಪ್ಪಿಸಿ ಮನೆಗೆ ಮರಳುವಂತೆ ಹಿಂದಿರುಗುವುದಿಲ್ಲ.ಧರ್ಮ ಮತ್ತು ಕೀರ್ತಿ ಅವನ ಆತ್ಮವನ್ನು ಎಡೆಬಿಡದೆ ಹಿಂಬಾಲಿಸುತ್ತವೆ.

ಅದರಿಂದಲೇ ತಿಳಿದವರು ದಾನ, ಧರ್ಮ, ಪರೋಪಕಾರಗಳನ್ನು ಮಾಡುವುದರಲ್ಲಿ ನಿರತರಾಗುತ್ತಾರೆ. ದಾನ - ಧರ್ಮಗಳು, ಮನುಷ್ಯನು ಮಾಡುವ ಪುಣ್ಯ ಕಾರ್ಯಗಳು ಅವನಿಗೆ ಕೀರ್ತಿತರುತ್ತವೆ. ಆ ಧರ್ಮ ಕೀರ್ತಿಗಳು ಸ್ಥಿರವಾಗಿ ಅವನೊಡನೆ ಇರುತ್ತವೆ.

*ಇಳೆಯಿಂದ ಮೊಳಕೆಯೊಗೆವಂದು ತಮಟೆಗಳಿಲ್ಲ*
*ಫಲವಾಗುವಂದು ತುತ್ತೂರಿಯ ದನಿಯಿಲ್ಲ*
*ಬೆಳಕೀವ ಸೂರ್ಯಚಂದ್ರರದೊಂದುಸದ್ದಿಲ್ಲ*
*ಹೊಲಿ ನಿನ್ನ ತುಟಿಗಳನು ಮಂಕುತಿಮ್ಮ - ೯೯೧*

ಈ ಭುವಿಯ ಭಾಗ್ಯವೋ ಏನೋ ಎಷ್ಟೋ ಜನ ಮಹಾತ್ಮರು ಅವತರಿಸುತ್ತಾರೆ. ಬದುಕುತ್ತಾರೆ. ಅವರ ಇಲ್ಲಿನ ಕಾರ್ಯ ಮುಗಿದಂದು ಕಣ್ಮರೆಯಾಗುತ್ತಾರೆ. unsung and unheard ಎಂಬಂತೆ.

ಈರೀತಿ ಬಾಳಿ ಬದುಕಿ ಧರ್ಮಕೀರ್ತಿಗಳನ್ನು ಗಳಿಸಿ ಇಹವನ್ನಗಲಿದ ಅನೇಕ ಜೀವರಾಶಿಗಳಲ್ಲಿಒಬ್ಬರು ದಿವಂಗತ ಆರ್ ಕುಮಾರಾರಾಧ್ಯರು, ಉತ್ತಮ ಸಾಧಕರು ಎಂಬುದು ನನ್ನ ಭಾವನೆ.

ಶ್ರೀ ಕುಮಾರಾರಾಧ್ಯರ ಬಗ್ಗೆ ನನಗೇನು ಅಷ್ಟು ಪರಿಚಯವಿಲ್ಲ. 1958ರಲ್ಲಿನನಗೆ ತಳಗವಾದಿ ಪುಟ್ಟಸೋಮಾರಾಧ್ಯರ ಪರಿಚಯವಾಯಿತು. ಅವರು ಮೈಸೂರಿನ ಅಂದಿನ ಆರಾಧ್ಯ ಬ್ರಾಹ್ಮಣ ಮಹಾಸಭೆಯ ಬಗ್ಗೆ ಹೇಳುತ್ತ ಆ ಸಂಸ್ಥೆಗೆ ಕುಮಾರಾರಾಧ್ಯರು ಬಡವಿದ್ಯಾರ್ಥಿಗಳ ಪೋಷಣೆ ಮತ್ತು ವಿದ್ಯಾಭ್ಯಾಸಕ್ಕೆಂದು 25 ಎಕರೆ ಜಮೀನನ್ನು ದಾನವಾಗಿ ಕೊಟ್ಟಿರುವರೆಂದು ಹೇಳಿ ಅವರ ಬಗ್ಗೆ ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದರು. ನನಗೆ ಸಂತೋಷವಾಯಿತು. *"ಪರೋಪಕಾರಾರ್ಥಮಿದಂ ಶರೀರಂ"* ಎನ್ನುವವರು ನಮ್ಮ ಕುಲದಲ್ಲಿಯೂ ಇರುವರೆಂದು.

ದಿವಂಗತ ಆರ್ ಕುಮಾರಾರಾಧ್ಯರು ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರದ ಹೋಬಳಿ ಜಿನ್ನಹಳ್ಳಿ ಗ್ರಾಮದವರೆಂದು ನಂತರ ತಿಳಿಯಿತು.ಇವರು ಜನ್ಮ ತಾಳಿದ್ದು 1885 ನೆ ಇಸವಿ ಜೂನ್ ತಿಂಗಳ 21ರಂದು. ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದರೂ ಸಂಪ್ರದಾಯಗಳನ್ನು ಬದಿಗಿಟ್ಟು, ಮೇಲುಕೀಳೆಂಬ ಭಾವನೆಗಳನ್ನು ತ್ಯಜಿಸಿ ಸರಳ ಸಹೃದಯಿಯಾಗಿದ್ದರೆಂದು ಕೇಳಿದ್ದೇನೆ. ಇವರನ್ನು ಗ್ರಾಮಸ್ಥರು *"ದೊಡ್ಡ ಬುದ್ಧಿ"* ಯವರೆಂದೂ,

"ಶಾಂತ ಆರಾಧ್ಯ" ಎಂದೂ ಕರೆದು ಗೌರವಿಸುತ್ತಿದ್ದರು. ಇವರು ಸೇವಾಮನೋಭಾವದಿಂದ ಎಲ್ಲರಿಗೂ ಸಹಾಯ ಮಾಡುತ್ತಿದ್ದರು. ಸಮಾಜದ ಏಳಿಗೆ, ಸಮಾಜಸೇವೆಯೇ ಇವರ ಜೀವನದ ಏಕೈಕ ಗುರಿಯಾಗಿತ್ತು.

ಇವರ ಜನಾನುರಾಗಿ ಗುಣ, ಸೇವಾಮನೋಭಾವ, ನಿಷ್ಪಕ್ಷಪಾತವ್ಯಕ್ತಿತ್ವಗಳನ್ನು ಮನಗಂಡ ಅಂದಿನ ಘನಸರ್ಕಾರ 1944-45 ರಿಂದ 1953-54 ನೇ ಸಾಲಿನವರೆಗೆ ಇವರನ್ನು ಪಂಪಾಪುರ ಗ್ರಾಮದ ಗ್ರಾಮಮುನ್ಸೀಫ್ (Village Munsiff)ಎಂದು ನೇಮಕ ಮಾಡಿತ್ತು. ಗ್ರಾಮ ಮುನ್ಸೀಫ್ ಆಗಿ ಸಹಸ್ರಾರು ತಕರಾರನ್ನು (ವ್ಯಾಜ್ಯಗಳನ್ನು)ನ್ಯಾಯಬದ್ಧವಾಗಿ ತೀರ್ಮಾನಿಸಿ ಆದೇಶ ನೀಡುತ್ತಿದ್ದರು. ಇವರು ನೀಡಿದ ತೀರ್ಪುಗಳು ಇಂದಿಗೂ ಜಿಲ್ಲಾ ನ್ಯಾಯಾಲಯದ ಕಡತಗಳಲ್ಲಿದ್ದು ಅವುಗಳನ್ನು ಪರಿಶೀಲಿಸಲು ಅವಕಾಶವಿದೆ.

ಕಾನೂನು ಪದವೀಧರರಾದ ನ್ಯಾಯಾಧೀಶರುಗಳ ನ್ಯಾಯಾಲಯಗಳಲ್ಲಿ ಅನೇಕ ವರ್ಷಗಳು ತೀರ್ಮಾನವಾಗದೇ ಉಳಿದಿರುವ ಮೊಕದ್ದಮೆಗಳನ್ನು ಈಗ ನಾವು ನೋಡುತ್ತಿದ್ದೇವೆ. ಆದರೆ ಯಾವ ಪದವಿಯೂ ಇಲ್ಲದ ಕುಮಾರಾರಾಧ್ಯರು ಮೊಕದ್ದಮೆಗಳನ್ನು ವಿಳಂಬಮಾಡದೆ ತೀರ್ಮಾನಿಸುತ್ತಿದ್ದುದು ಅವರ ವ್ಯಕ್ತಿತ್ವ ಎಷ್ಟು ಶ್ಲಾಘನೀಯವಾದುದು ಎಂದು ತಿಳಿಯುತ್ತದೆ.

ಸಾರ್ವಜನಿಕ ಸೇವಾ ಕಾರ್ಯಕ್ಕೆ ತಮ್ಮನ್ನು ಮುಡುಪಾಗಿಟ್ಟ ಆರಾಧ್ಯರು ಜನ್ನಹಳ್ಳಿಯಲ್ಲಿ ಒಂದು ಶಾಲೆ, ಪಂಪಾಪುರದಲ್ಲಿ ಒಂದು ಆಸ್ಪತ್ರೆ ನಿರ್ಮಿಸಲು ಶ್ರಮಿಸಿದ್ದಾರೆ. ಪಂಪಾಪುರದ ಆಸ್ಪತ್ರೆಗಾಗಿ ಇವರು ಚೋಳನಹಳ್ಳಿ ಗ್ರಾಮದಲ್ಲಿದ್ದ ತಮ್ಮ 15ಎಕರೆ ಜಮೀನನ್ನು ದಾನ ಮಾಡಿದ್ದಾರೆ.

ಇವರು ಮನೆಯಲ್ಲಿ ಹತ್ತಾರು ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾಭ್ಯಾಸ, ಊಟ, ವಸತಿಗಳನ್ನು ಏರ್ಪಡಿಸಿದ್ದರೆಂದು ತಿಳಿಯುತ್ತದೆ.

ಅಂದಿನ ಸರ್ಕಾರ ಹಾಗೂ ಮುಜರಾಯಿ ಕಮೀಶನರ್‌ರವರಿಗೆ ಅರ್ಜಿಗಳನ್ನು ಸಲ್ಲಿಸಿ ತಮ್ಮ ಸುತ್ತಮುತ್ತಲ ಹಳ್ಳಿಗಳ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ. 1927 ರಲ್ಲಿ ಅಂದಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರು ಕೆಂಪಗಣ್ಣಸ್ವಾಮಿ ಗದ್ದುಗೆಗೆ ದಯಮಾಡಿಸಿದಾಗ ಕುಮಾರಾರಾಧ್ಯರು ಅವರಿಗೆ ಅರ್ಜಿ ಸಲ್ಲಿಸಿ ಮೈಸೂರು-ಮಾನಂದವಾಡಿ ಮುಖ್ಯ ರಸ್ತೆ ಮತ್ತು ಮೇಟಿಕಲ್ಲುಗುಡ್ಡದ ಉತ್ತರದಲ್ಲಿ ಗದ್ದುಗೆಗೆ ರಸ್ತೆ ನಿರ್ಮಾಣ ಮಾಡಿಸುವಂತೆ ಕೇಳಿಕೊಂಡು ರಸ್ತೆಗಳು ನಿರ್ಮಾಣವಾಗಲು ಕಾರಣೀಭೂತರಾಗಿದ್ದಾರೆ.

ಆರಾಧ್ಯರು ಕೊಡುಗೈದಾನಿಗಳಾಗಿದ್ದರೂ ಅವರು ಹೇಳಿಕೊಳ್ಳುವಷ್ಟು ಧನಿಕರಾಗಿರಲಿಲ್ಲ. ಆದರೆ ಅವರ ಹೃದಯ ವಿಶಾಲವಾಗಿತ್ತು. ದೇಹಿ ಎಂದು ಬಂದವರಿಗೆ ಇಲ್ಲವೆಂದು ಹೇಳುವ ಮನೋಭಾವ ಅವರಿಗಿರಲಿಲ್ಲ. ಅವರು ಭುವಿಯ ಭಾಗ್ಯವಾಗಿದ್ದರು. ಅಂತಹ ಒಬ್ಬ ಶ್ರೇಷ್ಠ ಆರಾಧ್ಯಮಹೇಶ್ವರರನ್ನು ನಮ್ಮ ಸಮಾಜ ಕಳೆದುಕೊಂಡು ಬಡವಾಗಿದ್ದು 17-2-1961ರಲ್ಲಿ.

*ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು*
*ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ ||*

*ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ*
*ಎಲ್ಲ ರೊಳಗೊಂದಾಗು - ಮಂಕುತಿಮ್ಮ || 789*

ಎಂಬ ಡಿ.ವಿ.ಜಿ.ಯವರ ಕವನದ ಸಾಲುಗಳು ಕುಮಾರಾರಾಧ್ಯರಿಗೆ ಹೇಳಿ ಬರೆಯಿಸಿದಂತಿವೆ.

ಇವರಂತಯೇ ಇವರ ಧರ್ಮಪತ್ನಿಯಾದ ಪಾರ್ವತಮ್ಮನವರು ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ತಮ್ಮ ಕಷ್ಟಗಳನ್ನು ಕಡೆಗಣಿಸಿ ಅವರಿಗೆ ಊಟ ಉಪಚಾರಗಳನ್ನು ನೀಡುತ್ತಿದ್ದರು. ಕುಮಾರಾರಾಧ್ಯರಿಗೆ ಇಬ್ಬರು ಮಕ್ಕಳು, ಒಂದು ಗಂಡು ಒಂದು ಹೆಣ್ಣು. ಮಗಳನ್ನು ಸಾಗರೆ ಚಂದ್ರಶೇಖರಾರಾಧ್ಯರಿಗೆ ಕೊಟ್ಟು ವಿವಾಹ ಮಾಡಿದ್ದರು. ಇವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯ ಪಾತ್ರ ವಹಿಸಿ ಸೆರೆವಾಸ ಅನುಭವಿಸಿದ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ಶಿಕ್ಷಕರು.

ಕುಮಾರಾರಾಧ್ಯರ ಏಕೈಕ ಪುತ್ರರೇ ಶ್ರೀ ಜಿನ್ನಹಳ್ಳಿ ನಾಗಭೂಷಣಾರಾಧ್ಯರು. "ಮುನಿಸಂದೇಶ" ಮಾಸ ಪತ್ರಿಕೆಯ ಸಂಪಾದಕರಾಗಿದ್ದು ಹಾಲಿ "ಆರಾಧ್ಯಸಂಪದ"ಎಂಬ ಮಾಸ ಪತ್ರಿಕೆಯ ಸಂಪಾದಕರಾಗಿದ್ದಾರೆ. ಮೈಸೂರಿನಲ್ಲಿ ಸ್ಥಾಪಿಸಲಾದ "ಆರಾಧ್ಯಧರ್ಮಸಭಾ ಟ್ರಸ್ಟ್(ರಿ)" ಸಂಸ್ಥೆಯ ಸ್ಥಾಪಕ ಅಧ್ಯಕ್ಷರೂ ಆಗಿದ್ದಾರೆ. ಇವರು ತಮ್ಮ ತಂದೆಯ ಹೆಜ್ಜೆ ಗುರುತಿನ ಮೇಲೆ ನಡೆಯುತ್ತ ಆರಾಧ್ಯಸಮಾಜದ ಏಳಿಗೆಗೆ ಶ್ರಮವಹಿಸಿ ದುಡಿಯುತ್ತಿರುವ ಮಹನೀಯರುಗಳಲ್ಲಿ ಒಬ್ಬರು.

*ಸತ್ತೆ ನೆಂದೆನಬೇಡ, ಸೋತೆನೆಂದೆನಬೇಡ*
*ಬತ್ತಿ ತೆನ್ನೊಳು ಸತ್ವದೂಟೆ ಎನಬೇಡ*
*ಮೃತ್ಯುವೆನ್ನ ವುದೊಂದು ತೆರೆಇಳಿತ ತೆರೆಯೇರು*
*ಮತ್ತೆ ತೋರ್ಪುದು ನಾಳೆ, ಮಂಕುತಿಮ್ಮ || 593*

ದಿ. ಆರ್. ಕುಮಾರಾರಾಧ್ಯರು ಈ ರೀತಿ ನಡೆದವರು. ಅವರ ಪುತ್ರರಾದ ಜಿನ್ನಹಳ್ಳಿ ನಾಗಭೂಷಣಾರಾಧ್ಯರೂ ಕೂಡ ಇದೇ ಮಾರ್ಗದಲ್ಲಿ ನಡೆಯುತ್ತಿರುವುದು ನಮಗೆ ಹೆಮ್ಮೆಯ ವಿಷಯ.

* * *

## ಬೆಳಕು

'ಬೆಳಕು' ಒಂದು ನಿರಂತರ ಕ್ರಿಯೆ. ಇದನ್ನು ಅರಿತಾಗ ಬುದ್ಧಿಗಮ್ಯವಾದುದರತ್ತ ನಮ್ಮನ್ನು ಆ ಜ್ಞಾನ ಕರೆದೊಯ್ಯುತ್ತದೆ. ಅದೇ ದೈವ. ಅದೇ ಜ್ಞಾನ. ಅದೇ ಬೆಳಕು. ಅದೇ ಈ ಜಗತ್ತಿನ ಪ್ರತಿಯೊಬ್ಬರೂ ಅರಸುತ್ತಿರುವುದು. ಒಬ್ಬೊಬ್ಬರು ಒಂದೊಂದು ಮಾರ್ಗದಲ್ಲಿ ಅಂದರೆ, ತತ್ತ್ವಜ್ಞಾನ, ಅಧ್ಯಾತ್ಮಜ್ಞಾನ, ವಿಜ್ಞಾನ ,ಇತ್ಯಾದಿ ಮಾರ್ಗಗಳಲ್ಲಿ ಭಿನ್ನವಾಗಿ ಶೋಧಿಸುತ್ತಿರುವುದು.

# ವಿಶ್ವಮಾನವತೆ




**- ಹರಂಬಳ್ಳಿ ರೇಣುಕಾರಾಧ್ಯ**
ಬಿ. ಎ., ಎಲ್ ಎಲ್. ಬಿ.,
ವಕೀಲರು
#120,7 ನೇ ಕ್ರಾಸ್,
'ಹೆಚ್' ಬ್ಲಾಕ್, ರಾಮಕೃಷ್ಣನಗರ
ಮೈಸೂರು - 23
ದೂ. : 2462329


ಇತ್ತೀಚಿನ ದಿನಗಳಲ್ಲಿ ಜನಸಾಮಾನ್ಯರ ಸಾಮಾಜಿಕ ಜೀವನದಲ್ಲಿ ಜಾತೀಯತೆಯ ಪಾತ್ರ ಪ್ರಮುಖ ತಿರುವನ್ನು ಪಡೆಯುತ್ತಿದೆ. ಇಂದಿಗೂ ಜನಸಾಮಾನ್ಯರು ತಮ್ಮದೆ ಆದ ಜಾತಿಯ ಕಟ್ಟುಪಾಡುಗಳಿಗೆ, ಧರ್ಮ - ನೀತಿಗಳಿಗೆ, ಒಂದಲ್ಲ ಒಂದು ರೀತಿಯಲ್ಲಿ ಬದ್ಧರಾಗಿರುವುದನ್ನು ಕಾಣುತ್ತಿದ್ದೇವೆ. ಪಾಶ್ಚಾತ್ಯಜೀವನದ ಬೆಡಗಿಗೆ ಮೋಹಗೊಂಡು ನವೀನ ನಾಗರಿಕರೆಂಬ ಭ್ರಾಂತಿಯಿಂದ ಕೂಡಿದ ಜನರಿಂದ ಕೆಲವು ಜಾತಿಯ ಪದ್ಧತಿಗಳು ನಶಿಸಿ ಹೋಗುತ್ತಿವೆ. ಗೌಣವಾಗುತ್ತಿವೆ. ಮಾನವನಿಗೆ ಅಸಹಜವೆನ್ನಿಸುವ ಕೆಟ್ಟಪದ್ಧತಿಗಳು ನಶಿಸಿ ಹಾಳಾದಲ್ಲಿ ಸಂತಸಗೊಳ್ಳಬಹುದು. ಆದರೆ, ಧರ್ಮನೀತಿಗೆ, ಹಾಗೂ ನಮ್ಮ ಸಂಸ್ಕೃತಿಯ ಬುನಾದಿಯಂತಿರುವ ಧಾರ್ಮಿಕ ತಳಹದಿಯನ್ನೊಳಗೊಂಡಿರುವ ಭಾರತದ ತಲೆ ತಲಾಂತರದಿಂದ, ಸಾರ್ವತ್ರಿಕವಾಗಿ ಅನುಸರಿಸಿಕೊಂಡು ಬರುತ್ತಿರುವ ಒಳ್ಳೆಯ ಪದ್ಧತಿಗಳನ್ನು ಕೈ ಬಿಡುತ್ತಿರುವ ಬಗ್ಗೆ 'ಎಚ್ಚರಿಕೆ' ಅಗತ್ಯ. 'ಜಾತಿ' ಪದ್ಧತಿ ಇತ್ತೀಚಿನ ದಿನಗಳಲ್ಲಿ ಹೊಸತಿರುವನ್ನು ಪಡೆಯುತ್ತಿದೆ. ಅದೂ ಅಲ್ಲದೆ 'ಜಾತಿ' ನಿರ್ದಿಷ್ಟವಾದ ವೈಶಿಷ್ಟ್ಯವನ್ನು ಹೊಂದಿಯೋ, ಅಥವಾ ನಕಾರಾತ್ಮಕ ನಿಷಿದ್ಧ, ನಿರಾಕರಣೆಯ ವಾದವನ್ನು ಅನುಸರಿಸಿಯೋ ಮುಂದುವರಿಯುತ್ತಲೇ ಬರುತ್ತಿದೆ. ಇದಕ್ಕೆ ಕೊನೆ ಇಲ್ಲ. ಜಾತಿ ಒಂದು ಸಾಮಾಜಿಕ ಕಾಳಜಿಯ ಅಂಟು. ಇದನ್ನು ಇನ್ನು ಸಾವಿರ ವರ್ಷ ಕಳೆದರೂ ಮನುಷ್ಯ ಕಿತ್ತೊಗೆಯಲಾರ. ಇದಕ್ಕೆ ಸಾಕ್ಷಿ ಎಲ್ಲ ಮುಂದುವರಿದ ದೇಶಗಳಲ್ಲಿ ಈಗಲೂ ಇರುವ, ಅವರವರದೇ ಆದ ಜಾತಿ ಪದ್ಧತಿಯ ಅನುಕರಣೆ.

ಇತ್ತೀಚಿನ ದಿನಗಳಲ್ಲಿ 'ಜಾತಿ'ಯನ್ನು ರಾಜಕೀಯ ಲಾಭಕ್ಕಾಗಿ, ಓಟು ಪಡೆಯಲಿಕ್ಕಾಗಿ ಉಪಯೋಗಿಸುತ್ತಿರುವುದು ಸರ್ವಸಾಮಾನ್ಯ. ಆಧುನಿಕ ಸಮಾಜದಲ್ಲಿ 'ಜಾತಿ' ಯನ್ನು

ಗುರ್ತಿಸಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಹಿಂದುಳಿದ ಜನಾಂಗವನ್ನು ಮೇಲೆತ್ತುವ ಕಾರ್ಯ ಸರ್ಕಾರದ ಜವಾಬ್ದಾರಿಯಾಗಿದೆ.

ಒಂದು ದೃಷ್ಟಿಯಲ್ಲಿ ನೋಡಿದಾಗ ಸಮಾಜದ ಮೇಲೆ, ಧರ್ಮದ ಒತ್ತಡ (ಇತ್ತೀಚಿನ ದಿನಗಳಲ್ಲಿ) ಹೆಚ್ಚಾಗುತ್ತಿದೆ. ಈಗ ಹಿಂದಿಗಿಂತಲೂ, 'ಜಾತೀಯತೆ' ಹೆಮ್ಮರವಾಗಿ ಬೆಳೆಯುತ್ತಿದೆ. ಇಂತಹ ಸ್ಥಿತಿಯಲ್ಲಿ 'ಆರಾಧ್ಯ ಜಾತಿ', ಸಣ್ಣಪೈರಾಗಿ ನೀರೆರೆಯುವವರಿಲ್ಲದೆ. ಬಾಡಿ, ಮುದುಡಿ, ನಿಂತು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ, ಭಯ ಈಗ ಹೆಚ್ಚಾಗಿದೆ. ನಮ್ಮ ಆಚಾರ, ವಿಚಾರಗಳಲ್ಲಿ ಹಳೆಯಕಾಲದ ಸಂಸ್ಕೃತಿ ಸಂಪ್ರದಾಯಗಳನ್ನು ಕಳೆದುಕೊಳ್ಳುತ್ತಿದ್ದೇವೆ ಎನ್ನಿಸುತ್ತಿದೆ. ಸಂಸ್ಕೃತಿ, ಸಂಪ್ರದಾಯಗಳ ಬಗ್ಗೆ ಮಾತಾಡಿದರೂ, ಆಚರಣೆಯನ್ನು ನೋಡಿದಾಗ ಅಜಗಜಾಂತರ ವ್ಯತ್ಯಾಸವನ್ನು ಕಂಡು ಖೇದವಾಗುತ್ತದೆ. ಈಗ ಮನುಷ್ಯತ್ವವಿರುವ ಮನುಷ್ಯರನ್ನು ಹುಡುಕಾಡಬೇಕಾಗಿರುವುದು ಒಂದು ವಿಪರ್ಯಾಸವೆ ಸರಿ.

ಧರ್ಮದ ಅನುಕರಣೆಯಲ್ಲಿ ಶ್ರದ್ಧೆ, ಪ್ರಾಮಾಣಿಕತೆ ಇದ್ದರೆ ಬೇರೇನು ಬೇಡ. ಮನುಷ್ಯನಲ್ಲಿ ಪ್ರಾಮಾಣಿಕತೆ ಬಿಟ್ಟು ಬೇರೆ ಎಲ್ಲವೂ ಇದ್ದರೂ, ಯಾವುದೂ ಇದ್ದಂತೆ ಅಲ್ಲ. ನೀತಿ, ಧರ್ಮ, ಶ್ರದ್ಧೆ, ಪ್ರಾಮಾಣಿಕತೆ ಇರುವ ಮನುಷ್ಯ ದೈಹಿಕವಾಗಿ ದುರ್ಬಲನಾಗಿದ್ದರೂ ಅವನಂತಹ ಬಲಶಾಲಿ ಬೋರೊಬ್ಬನಿಲ್ಲ. ದುರ್ಬಲಮನಸ್ಸಿನ ದುಷ್ಟಚಾರಿತ್ರ್ಯಉಳ್ಳವನು ಪ್ರಾಮಾಣಿಕನಾಗಲು ಸಾಧ್ಯವಿಲ್ಲ. ಸತ್ಯ ಎಲ್ಲ ಕಾಲಕ್ಕೂ ಸತ್ಯವೇ. ಅದನ್ನು ಎಲ್ಲರೂ ಒಪ್ಪಿಕೊಳ್ಳಬೇಕು. ಆದರೆ ನಾವೀಗ ಸತ್ಯವನ್ನು ಗೌರವಿಸುವುದನ್ನೇ ಮರೆತಿದ್ದೇವೆ.

ವೇದಗಳಲ್ಲಿರುವ ಒಳ್ಳೆಯ ಅಂಶಗಳನ್ನು ಕುರಿತು ಹೇಳ ಹೊರಟರೆ ; ಎಲ್ಲಿ ಇವರು 'ವೈದಿಕರೆಂದಾರೋ' ಎಂಬ 'ಭಯ' ನಮ್ಮನ್ನು ಕಾಡಲು ಶುರುವಾಗಿದೆ. ನಮಗೆ ಸತ್ಯಯಾವುದು? ನಿಜ ಏನು? ಇದು ಸರಿ, ಇದು ತಪ್ಪು ಎಂಬ ಪರಿಜ್ಞಾನ ಮನಸ್ಸಿನಲ್ಲಿ ಅಂತರ್ಜಲದಂತೆ ಉಕ್ಕುತ್ತಿರುತ್ತದೆ. ಆದರೆ ವಾಸ್ತವವಾಗಿ ಪಂಚೇಂದ್ರಿಯಗಳ ಹಿಡಿತಕ್ಕೆ ಸಿಕ್ಕಿಕೊಂಡು ವಾಸ್ತವವನ್ನು ಮುಚ್ಚಲು ಪ್ರಯತ್ನಿಸುತ್ತೇವೆ.

ಮಾನವನಲ್ಲಿ ಇಂದು ಧಾರ್ಮಿಕ ಭಯೋತ್ಪಾದಕತೆ ಹೆಚ್ಚುತ್ತಿದೆ. ಇದರಿಂದ ಸ್ಥಿರತೆ, ಶಾಂತಿ ನಾಶವಾಗಿ, ನಾಗರಿಕ ಜಗತ್ತಿಗೆ ಇದು ಅಪಾಯಕಾರಿಯಾಗಿದೆ. ಇಂತಹ ದಿನಗಳಲ್ಲಿ ಜಾತೀಯತೆಗೆ ಹೆಚ್ಚು ಒತ್ತು ಕೊಡದೆ ನೆಮ್ಮದಿಯಿಂದ ಬದುಕಿ, ನೆಮ್ಮದಿಯಿಂದ ನಿರ್ಗಮಿಸಿ ಬದುಕನ್ನು ದೇವರು ಕೊಟ್ಟಿರುವ ಶೇ. 90 ಭಾಗ ಸುಖವನ್ನು ಸಂತಸದಿಂದ ಸ್ವೀಕರಿಸಿ ; ಕೊಡದ, ಸಿಕ್ಕದ, ದಕ್ಕದ ಶೇ. 10 ಭಾಗಕ್ಕೆ ಚಿಂತೆಪಡುವುದನ್ನು ಬಿಟ್ಟು. "*ಬೇಕು ಬೇಕು ಇನ್ನೂ ಬೇಕು ಎಂಬ ಬೇಕುಗಳ ಬೊಬ್ಬೆ ಇಡುವ ಜಪಕ್ಕೆ ಸಾಕೆಂಬುದಿಲ್ಲ - ಬೇಕು, ಬೇಕೆನೆ - ಕಲಹ, ಸಾಕು, ಸಾಕೆನೆ ಶಾಂತಿ - ಈ ಸಾಕೆಂಬುದ ಮರೆತರೆ - ಮುಂದೇನುಗತಿ. ಯಾಕೆ ಈ ದ್ವಂದ್ವವನು ಮನುಷ್ಯನಲ್ಲಿಟ್ಟನೋ ಆ ದೇವ - ಇದರಿಂದ ವ್ಯಾಕುಲತೆ ತಪ್ಪೀತೆ* "? ಸತ್ಯ ಎಂದ್ದಿದ್ದರೂ ಸತ್ಯವೇ.

ಡಾ|| ಚಿದಾನಂದ ಮೂರ್ತಿಯವರ ಲಿಂಗಾಯಿತ ಅಧ್ಯಯನಗಳು ಎಂಬ ಪುಸ್ತಕದಲ್ಲಿ (ಅನುಬಂಧ 2) 'ಆರಾಧ್ಯ ಜಾತಿಯ ಜನಾಂಗದ ಬಗ್ಗೆ ವಿವರಣೆ ನೀಡಿ "ಆರಾಧ್ಯ ಜನಾಂಗವೊಂದು ತಮ್ಮದೇ ಆದ ವಿಶಿಷ್ಟ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿರುವ ಸ್ವತಂತ್ರ ಜನಾಂಗ. ಇವರು ಇತ್ತ ಲಿಂಗಾಯಿತರೂ ಅಲ್ಲ ಅತ್ತ ಬ್ರಾಹ್ಮಣರೂ ಅಲ್ಲ. ಈ ಎರಡು 'ಜಾತಿ'ಯ ಸಾತ್ವಿಕಸಂಪ್ರದಾಯಗಳನ್ನು ಅಳವಡಿಸಿಕೊಂಡು, ಪ್ರತ್ಯೇಕತೆಯನ್ನು ಹೊಂದಿರುವ ಸಾತ್ವಿಕ ಗುಣವುಳ್ಳ "ಜನಾಂಗ" ಎಂದು ವಿವರಿಸಿರುವುದನ್ನು ಇಲ್ಲಿ ಸ್ಮರಿಸುತ್ತಾ, ಡಾ. ಸಿ. ಆರ್. ಚಂದ್ರಶೇಖರ್‌ರವರು ವಿವರಿಸಿರುವಂತೆ, "ಇಂದಿನ ದಿನಗಳ ಎಲ್ಲ ಒತ್ತಡದ ಮಧ್ಯದಲ್ಲಿ ಮನುಷ್ಯ, ನೆಮ್ಮದಿಯಿಂದ ಬದುಕಲು, ಸರಿಗುರಿ, ಸಮಾಧಾನ, ನೆಮ್ಮದಿಯ ಕೆಲಸದಿಂದ ಆನಂದ, ಆತ್ಮೀಯರೊಡನೆ ಅನಿಸಿಕೆಗಳನ್ನು ಹಂಚಿಕೊಳ್ಳುವಿಕೆ, ಇವು ಜೀವನವನ್ನು ಸಂತೋಷದಿಂದ ನಿಭಾಯಿಸುವ ಕೆಲವು ಸೂತ್ರಗಳೆಂಬುದನ್ನು ಮನಗಂಡುಕೊಂಡು, ವಿನಾಕಾರಣ "ಜಾತಿ"ಯ ಬಗ್ಗೆ ತಲೆ ಕೆಡಿಸಿಕೊಳ್ಳದೆ ವಿಶ್ವಮಾನವರಾಗಿ ಬದುಕುವುದನ್ನು ರೂಢಿಸಿಕೊಳ್ಳೋಣ.

* * *

## ಹುಟ್ಟು ಮತ್ತು ಸಾವು

ಹುಟ್ಟು ಸಂತಸ, ಸ್ವಾಗತಾರ್ಹ. ಆದರೆ ಸಾವು ಮಾತ್ರ ದುಃಖಕಾರಿ. ಸಂಸಾರ, ಮಕ್ಕಳು, ಮೊಮ್ಮಕ್ಕಳನ್ನು ಕಂಡು ಅವರೊಂದಿಗೆ ಆಡಿ, ಪಾಡಿ, ಜೀವನ ನಡೆಸಿದ ಮೇಲೂ ಬದುಕಿನ ಬಗ್ಗೆಯೇ ಆಲೋಚನೆ, ಯೋಜನೆ ಹಂಚಿಕೆ. ಸಾಯಲು ಮನಸಾರೆ ಸಿದ್ಧವಾಗುವುದೇ ಇಲ್ಲ. ಈ ಮಾತು ಎಲ್ಲರಿಗೂ ಅನ್ವಯಿಸದು. ಹುಟ್ಟಿನಂತೆ ಸಾವು ಸಹಜ, ಸ್ವಾಭಾವಿಕ. ಅರ್ಥಮಾಡಿಕೊಂಡವರಿಗೆ ಸಾವು ಸಹ ದುಃಖಕಾರಿ ಎನಿಸುವುದಿಲ್ಲ. ಪರಿಪಕ್ವ ವ್ಯಕ್ತಿಗಳು ತಮಗೆ ಸಾವು ತಾನಾಗಿಯೇ ಬಂದಾಗ ಒಪ್ಪಿಕೊಳ್ಳುತ್ತಾರೆ. ಒಪ್ಪಲಿ, ಒಪ್ಪದಿರಲಿ. ಸಾವು ಎಂಬುದು ಪ್ರತಿಜೀವಿಯ ಪಾಲಿಗೂ ಕಡ್ಡಾಯ. ಹೀಗಾಗಿ ಇಂಥ ಅನಿವಾರ್ಯವಾದ ಸಾವನ್ನು ಅದು ಸಹಜವಾಗಿ ಬಂದಾಗ ಸ್ವೀಕರಿಸುವುದು ಜೀವನಾನುಭವ ಮತ್ತು ತಿಳವಳಿಕೆಯ ಲಕ್ಷಣ. ಜೀವಿತದ ಕಷ್ಟ ಕೋಟಲೆಗೆ ಹೆದರಿ, ಆತ್ಮಹತ್ಯೆಯಂಥ ದಿಢೀರ್ ಕ್ರಮಗಳ ಮೂಲಕ ಸ್ವತಃ ಸಾವನ್ನು ಆಹ್ವಾನಿಸುವಂತಹವರನ್ನು ಹೇಡಿಗಳು ಎಂದೇ ಅನುಭವಿಗಳು ಬಣ್ಣಿಸಿರುವುದುಂಟು. ಸಾವು ಬರುವಾಗ ಬಂದೇ ಬರುತ್ತದೆ. ಅದಕ್ಕಾಗಿ ಆತುರಪಡುವುದಾಗಲೀ, ಭಯಪಡುವುದಾಗಲಿ ಸಲ್ಲ. ಹುಟ್ಟಿನಂತೆ ಸಾವು ಸಹಜ ಎಂಬುದನ್ನು ಮನದಟ್ಟು ಮಾಡಿಕೊಂಡು ನಮಗೆ ಲಭ್ಯವಿರುವ ಜೀವಿತಾವಧಿಯನ್ನು ಸಾರ್ಥಕಗೊಳಿಸಿಕೊಳ್ಳತಕ್ಕದ್ದು. ಹುಟ್ಟು, ಸಾವು ಒಂದು ನಾಣ್ಯದ ಎರಡು ಮಗ್ಗುಲುಗಳು. ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಇದು ಸೃಷ್ಟಿ ನಿಯಮ. ಆದಾಗ್ಯು ಮನುಷ್ಯ ಒಂದನ್ನು ಆನಂದಿಸುವುದು, ಇನ್ನೊಂದನ್ನು ದುಃಖಿಸುವುದು ಸ್ವಭಾವ.

# ಉಪಕಾರವೀರ

*ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ*
*ಕೊಟ್ಟಿದ್ದು ಕೆಟ್ಟಿತೆನಬೇಡ-ಅದು ಮುಂದೆ*
*ಕಟ್ಟಿಟ್ಟ ಬುತ್ತಿ ಸರ್ವಜ್ಞ*

*"ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು ತನ್ನಂತೆ ಪರರ ಬಗ್ಗೆವುದು, ಸಿರಿ ಬಂದ ಕಾಲಕ್ಕೆ ಕರೆದು ದಾನವ ಮಾಡುವುದು"* ಈ ಮಾತುಗಳಿಗೆ ನಿದರ್ಶನವಾಗಿ ಬದುಕಿದವರು *"ಜಿನ್ನಹಳ್ಳಿ ದೊಡ್ಡಬುದ್ಧಿ"* ಯವರೆಂದು ಪಂಡಿತ ಪಾಮರರಿಂದ ಕರೆಸಿಕೊಳ್ಳುತ್ತಿದ್ದ, ದಾನಧರ್ಮದಿಂದ ಜನಬಾವಣಿಕೆಯ ದ್ರಷ್ಟಾರರಾಗಿದ್ದ ವಿಲೇಜ್ ಮುನ್ಸೀಫ್ ಆರ್. ಕುಮಾರಾರಾಧ್ಯರು.

ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರ ಹೋಬಳಿ ಜಿನ್ನಹಳ್ಳಿ ಗ್ರಾಮದಲ್ಲಿ 21-06-1885ರಲ್ಲಿ ಶಿವಭಕ್ತೆ ಬಸವಾಜಮ್ಮ ರೇವಣಾರಾಧ್ಯ ದಂಪತಿಗಳ ಸತ್ಪುತ್ರರಾಗಿ ಜನಿಸಿದ ಕುಮಾರಾರಾಧ್ಯರು 17-02-1961ರವರೆಗೆ 76ವರ್ಷಗಳ ಸಾರ್ಥಕ ಬದುಕನ್ನು ನಡೆಸಿ ಆದರ್ಶಗಳ ಸರಮಾಲೆಯನ್ನು ಬಿಟ್ಟು ಹೋದವರು.

ಸೇವೆಯ ಸಾಕಾರಮೂರ್ತಿ ಕುಮಾರಾರಾಧ್ಯರು ವೈದಿಕರಾಗಿ ಹುಟ್ಟಿದ್ದರೂ ಎಲ್ಲರೂ ಭಗವಂತನ ಸ್ವರೂಪರೆಂದು ಭಾವಿಸಿದ ಜ್ಞಾನಿಗಳಾಗಿದ್ದರು. ತಾವು ಹೆಚ್ಚು, ಇತರರು ತಮಗಿಂತಲೂ ಹೆಚ್ಚು ಎಂದು ಭಾವಿಸಿ ಬಡವರ ಅಭಿವೃದ್ಧಿಯನ್ನೇ ಬಯಸುತ್ತಿದ್ದರು. *'ಸರ್ವೇ ಜನಾಃ ಸುಖಿನೋ ಭವಂತು'* ಎಂಬುದರ ನಿದರ್ಶನದಂತೆ ಬಾಳಿದರು. ಗ್ರಾಮದ ಮುಖಂಡರಾಗಿದ್ದ *'ದೊಡ್ಡಬುದ್ಧಿ'* ಯವರು ಛೇರ್ಮನ್ನರೂ ಆಗಿದ್ದು ಊರಿನ ಅಭಿವೃದ್ಧಿಗೆ ಏನು ಕಾಮಗಾರಿಗಳು ಬೇಕೋ ಅವುಗಳನ್ನೆಲ್ಲ ಅಧಿಕಾರಿಗಳನ್ನು ಒಲಿಸಿ ಮಾಡಿಸುತ್ತಿದ್ದರು.

ಊರಿನ ಅಭಿವೃದ್ಧಿ, ದೀನ ದುರ್ಬಲರ ಬಗ್ಗೆ ಅನುಕಂಪ ಹೊಂದಿದ್ದ ಬುದ್ಧಿಯವರು ಹುಟ್ಟಿದ ಊರಿನ ಋಣ ತೀರಿಸಲು ಸಂಕಲ್ಪ ಮಾಡಿದರು. ತಾನೊಬ್ಬ ಓದಿದರೆ ಸಾಲದು, ಊರಿನ



- ಡಾ. ಅರ್ಜುನಪುರಿ ಅಪ್ಪಾಜಿಗೌಡ ಎಂ.ಎ.,ಪಿಎಚ್.ಡಿ.,
ಪ್ರಾಂಶುಪಾಲರು
ಎಚ್. ಕೆ. ವಿ. ಪದವಿ ಕಾಲೇಜು,
ಶ್ರೀ ಸಿದ್ಧಾರೂಢನಿಲಯ,
ಕೆಂಗಲ್ ಬಡಾವಣೆ, ಮದ್ದೂರು
ದೂ. 08232 - 232214

ಮಕ್ಕಳೆಲ್ಲರೂ ವಿದ್ಯಾವಂತರಾಗಬೇಕು. ಬಿ.ಎ., ಎಂ.ಎ., ಮಾಡದಿದ್ದರೂ ಓದು ಬರಹ ಕಲಿಯುವಂತಾಗಬೇಕು, ವಿದ್ಯೆ ಇಲ್ಲದೆ ಉತ್ತಮ ಬದುಕು ಸಾಧ್ಯವಿಲ್ಲ, ಅಕ್ಷರ ಕೆಲವರ ಸ್ವತ್ತಾಗಬಾರದು, ಎಲ್ಲರಿಗೂ ದಕ್ಕಬೇಕೆಂಬ ದೂರದೃಷ್ಟಿಯಿಂದ ಜಿನ್ನಹಳ್ಳಿಯಲ್ಲಿ ಒಂದು ಶಾಲೆ ಪ್ರಾರಂಭಮಾಡಿದರು. ಅಕ್ಷರ ಕಲಿಯಲು ಆರೋಗ್ಯ ಮುಖ್ಯ. ಆರೋಗ್ಯವಿಲ್ಲದ ಜನ ಸುಖವಾಗಿರಲಾರರು. ನೆಮ್ಮದಿಯ ಜೀವನಕ್ಕೆ ಆರೋಗ್ಯವೇ ಅಡಿಪಾಯ ಎಂದು ಭಾವಿಸಿ ಹೋಬಳಿ ಕೇಂದ್ರ ಹಂಪಾಪುರದಲ್ಲಿ ತಮ್ಮದಾಗಿದ್ದ ಫಲವತ್ತಾದ ೧೫ ಎಕರೆ ತರಿ ಜಮೀನನ್ನು ದಾನವಾಗಿ ನೀಡಿ ಆಸ್ಪತ್ರೆ ಪ್ರಾರಂಭ ಮಾಡಲು ನೆರವಾದರು.

ಬೆಲೆ ಬಾಳುತ್ತಿದ್ದ 25 ಎಕರೆ ಜಮೀನನ್ನು ದಾನವಾಗಿ ನೀಡಿ ಆರಾಧ್ಯ ವಿದ್ಯಾರ್ಥಿಗಳಿಗಾಗಿ ಹಾಸ್ಟೆಲ್ ಒಂದನ್ನು ಮೈಸೂರಿನಲ್ಲಿ ಇತರರೊಡಗೂಡಿ ಪ್ರಾರಂಭಿಸಿದರು. ಪ್ರತಿಭೆಗೆ ಕೊರತೆ ಇಲ್ಲದಿದ್ದರೂ ಕಿತ್ತು ತಿನ್ನುತ್ತಿದ್ದ ಬಡತನದಲ್ಲಿ ನರಳುತ್ತಿದ್ದ ಹತ್ತಾರು ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಊಟ ವಸತಿಸೌಲಭ್ಯ ಕಲ್ಪಿಸಿ ವಿದ್ಯಾವಂತರಾಗುವಂತೆ ಮಾಡಿದರು.

1927ರ ಸಂದರ್ಭದಲ್ಲಿ ಮೈಸೂರು ಅರಸರಾದ ಶ್ರೀ ಕೃಷ್ಣರಾಜ ಒಡೆಯರ್ ಅವರಿಗೆ ಮನವಿ ಸಲ್ಲಿಸಿ ಸುತ್ತಮುತ್ತಲ ಗ್ರಾಮಗಳ ರಸ್ತೆ, ದೇವಸ್ಥಾನಗಳ ಜೀರ್ಣೋದ್ಧಾರ ಮಾಡಿಸಿದರು.

ಶ್ರೀ ಕುಮಾರಾರಾಧ್ಯರ ಜನಪ್ರಿಯತೆ, ಅವರು ಜನರಿಗೆ ನೀಡುತ್ತಿದ್ದ ಮಾರ್ಗದರ್ಶನ, ಊರಿನ ಹಿತಕ್ಕಾಗಿ ಮಾಡುತ್ತಿದ್ದ ಸೇವಾಕಾರ್ಯಗಳನ್ನು ಮನಗಂಡ ಸರ್ಕಾರ ಹೋಬಳಿ ಕೇಂದ್ರವಾದ ಹಂಪಾಪುರಕ್ಕೆ ಮುನ್ಸೀಫರಾಗಿ 1944ರಲ್ಲಿ ನೇಮಕಮಾಡಿತು. 1954ರವರೆಗೆ ದಶಕದ ಕಾಲ ನ್ಯಾಯಾಧೀಶರಾಗಿ ಸಾವಿರಾರು ತಕರಾರುಗಳನ್ನು ಚಾಣಾಕ್ಷತೆಯಿಂದ ಇತ್ಯರ್ಥಗೊಳಿಸಿದ ದಾಖಲೆಗಳನ್ನುಇಂದಿಗೂ ನೋಡಬಹುದಾಗಿದೆ. ತಮ್ಮ 60ನೆಯ ವಯಸ್ಸಿನಲ್ಲಿ ನ್ಯಾಯಾಧೀಶರಾಗಿ ಉಭಯತ್ರರಿಗೂ ಅನ್ಯಾಯವಾಗದಂತೆ ಯಾವುದೇ ರೀತಿಯ ತಕರಾರುಗಳನ್ನು ಸುಖಾಂತ್ಯವಾಗಿ ತೀರ್ಮಾನ ಮಾಡುತ್ತಿದ್ದ ಜಾಣ್ಮೆ ಬರೆದಿರುವ ಜಡ್ಜ್‌ಮೆಂಟ್‌ಗಳಲ್ಲಿ ಕಂಡು ಬರುತ್ತದೆ.

ಜ್ಯೋತಿಷ್ಯ, ಪೌರೋಹಿತ್ಯದ ಜೊತೆಗೆ ಪತ್ರ ಬರಹಗಾರರಾಗಿಯೂ ಪ್ರಸಿದ್ಧರಾಗಿದ್ದರು. ಜನ ಸಾಮಾನ್ಯರಿಗೆ ಕಷ್ಟ ಕಾರ್ಪಣ್ಯಗಳು ಬಂದಾಗ ಸಾಂತ್ವನದ ಮಾತುಗಳನ್ನಾಡಿ, ಮನಸ್ಸಿಗೆ ನೆಮ್ಮದಿ ಬರುವಂತೆ, ಬದುಕಿನಲ್ಲಿ ಆಶಾವಾದ ಮೂಡಿಸುತ್ತಿದ್ದರು, ಗ್ರಹಗತಿ ನೆಟ್ಟಗಿಲ್ಲ, ಹೆದರಬೇಡ, ಮನೆದೇವರಿಗೆ ಕೈಮುಗಿದು ಪೂಜೆ ಮಾಡು ಬಂದ ಕಷ್ಟ ಬಯಲಾಗುತ್ತದೆ, ರಾತ್ರಿ ಕಳೆದು ಹಗಲಾಗುತ್ತದೆ. ಎದೆಗುಂದಬೇಡ ಎಂಬ ಭರವಸೆಯ ಮಾತುಗಳನ್ನು ಆಡುತ್ತಿದ್ದರು.

ಸರ್ಕಾರದಿಂದ 81ಎಕರೆ ಜಮೀನು ಮಂಜೂರು ಮಾಡಿಸಿದ ಬುದ್ಧಿಯವರು ಭೂರಹಿತ ಕೃಷಿ ಕಾರ್ಮಿಕರಿಗೆ ಹಾಗೂ ಸಂಘ ಸಂಸ್ಥೆಗಳಿಗೆ 80 ಎಕರೆ ಜಮೀನನ್ನು ಸ್ವಪ್ರೇರಣೆಯಿಂದ ನೀಡಿ ತಾವು ಕೇವಲ ಒಂದು ಎಕರೆಯನ್ನು ಮಾತ್ರ ಇಟ್ಟು ಕೊಂಡರು. ಸ್ವಾರ್ಥ ತಲೆಹಾಕಲೇ ಇಲ್ಲ. ಆಗರ್ಭ ಶ್ರೀಮಂತರೂ ಅಲ್ಲ, ಶ್ರೀಮಂತರಾಗುವ ಬಯಕೆಯೂ ಇರಲಿಲ್ಲ! ಇವರ ಪತ್ನಿ ಪಾರ್ವತಮ್ಮನವರು ಸಾಧ್ವಿ. ಅತಿಥಿಅಭ್ಯಾಗತರು ಯಾವುದೇ ವೇಳೆಯಲ್ಲಿ

ಬರಲಿ, ಗಂಡನ ಬಗ್ಗೆ ಬೇಸರಿಸಿಕೊಳ್ಳದೆ ಬಂದವರಿಗೆ ಆತಿಥ್ಯ ನೀಡುತ್ತಿದ್ದ ಸಾಕ್ಷಾತ್ ಅನ್ನಪೂರ್ಣೇಶ್ವರಿ ಆಗಿದ್ದರು.

ಇವರ ಏಕೈಕ ಪುತ್ರ ಜಿನ್ನಹಳ್ಳಿ ಶ್ರೀ ನಾಗಭೂಷಣಾರಾಧ್ಯರು ಸರಳ ಸಜ್ಜನಿಕೆಯಿಂದ ಕೂಡಿ ತಂದೆಯ ಪ್ರತಿರೂಪರಾಗಿದ್ದಾರೆ. ತಮ್ಮ ಜನಾಂಗವಷ್ಟೇ ಅಲ್ಲ. ಎಲ್ಲರೂ ಚೆನ್ನಾಗಿ ಬದುಕಬೇಕೆಂಬ ಔದಾರ್ಯದ ಗುಣವುಳ್ಳವರಾಗಿದ್ದಾರೆ. ಸಾಮಾಜಿಕ ಚಟುವಟಿಕೆಗಳಲ್ಲಿ ಕಾರ್ಯಕ್ರಮ ರೂಪಿಸುವುದರಲ್ಲಿ, ಕಷ್ಟದಲ್ಲಿರುವವರಿಗೆ ನೆರವಾಗುವುದರಲ್ಲಿ ಮುಂದಾಗಿದ್ದಾರೆ.

ಕೀರ್ತಿಶೇಷ ಕುಮಾರಾರಾಧ್ಯರು ಮತ್ತೊಬ್ಬರಿಗೆ ನೆರವಾಗುವ ಸಂಭ್ರಮದಲ್ಲಿ ಇಳಿವಯಸ್ಸಿನಲ್ಲಿ ಕಾಲು ಮುರಿದುಕೊಂಡು ಮೈಸೂರು ಸೇರಿದವರು ಮತ್ತೆ ಹಳ್ಳಿಗೆ ಮರಳಲಿಲ್ಲ. ಫೆಬ್ರವರಿ 17,1961ಶಿವನಲ್ಲಿ ಲೀನರಾದರು. ಅವರ ನೆನಪು, ಅವರು ಮಾಡಿ ಹೋದ ಸೇವಾ ಕಾರ್ಯಗಳೆಲ್ಲ ಹಚ್ಚಹಸಿರಾಗಿದ್ದು ಮುಂದಿನವರಿಗೆ ಆದರ್ಶವಾಗಿವೆ.

* * *

## ದೇವಪೂಜೆ

ದೇವಮಂದಿರ ಹಾಗೂ ಗುರುಮಂದಿರಗಳಲ್ಲಿ ದೇವರನ್ನು ಮತ್ತು ಗುರುವನ್ನು ಪೂಜಿಸುವ ಪದ್ಧತಿ ಎಲ್ಲ ಮತಗಳಲ್ಲೂ ಇದೆ.

ಅವರವರ ನಂಬಿಕೆ, ಭಾವನೆ ಮತ್ತು ಪದ್ಧತಿಯಂತೆ ಪೂಜಿಸುತ್ತಾರೆ. ಈ ಪದ್ಧತಿಯಲ್ಲಿ ಉಚ್ಚ - ನೀಚ ಭಾವನೆ ತಾಳುವುದು ಸರಿಯಲ್ಲ. ಸರ್ವಜ್ಞನೂ, ಸರ್ವಶಕ್ತನೂ ಆಗಿರುವ ಭಗವಂತನೇ ನೂರಾರು, ಸಹಸ್ರಾರು, ಲಕ್ಷಾಧಿಕ ನಾಮರೂಪಗಳಿಂದ ತೋರುತ್ತಿದ್ದಾನೆ. *"ಏಕಂ ಸದ್ವಿಪ್ರಾಃ ಬಹು ಧಾ ವದಂತಿ"*- ಎಂದು ವೇದಗಳು ಸಾರಿವೆ. ಭಾರತೀಯಸಂಪ್ರದಾಯದಂತೆ ದೇವಪೂಜೆ ಅತ್ಯಂತ ಮಂಗಳಕರ, ಅತ್ಯಂತ ಪವಿತ್ರದ ಕೆಲಸ. ಸ್ನಾನ, ಮಡಿ, ಭಸ್ಮ ಇತ್ಯಾದಿ ಧರಿಸಿ ವೇದಮಂತ್ರಗಳಿಂದ ಧ್ಯಾನಾದಿ ಷೋಡಶೋಪಚಾರಗಳನ್ನು ಮಾಡುವುದೇ ಪೂಜೆ ಎಂದು ತಿಳಿದಿದ್ದೇವೆ.

ಇವಿಷ್ಟೇ ದೇವಪೂಜೆಯೆಂದು ತಿಳಿಯಬಾರದು. ವೇದಮಂತ್ರಗಳನ್ನು ಹೇಳಿದರೆ, ದೇವಪೂಜೆಯೆಂದು ಭಾವಿಸಬಾರದು.

ದೇವರೆಂದರೆ ವಿಗ್ರಹ ಎಂದೂ ತಿಳಿಯಬಾರದು. ಭಾವುಕರು ಹಾಗೆ ಮಾಡಲಿ.

ದೇವರೆಂದರೆ, *"ದೀವ್ಯತಿ ಇತಿ ದೇವಃ"*- ಎನ್ನುವಂತೆ ನಮ್ಮ ಕಣ್ಮನಗಳಿಗೆ ಆನಂದವನ್ನು ತರುವ ಕೆಲಸ, ವಸ್ತುಗಳೂ ಭಗವಂತನೇ, ಗಿಡ, ಮರಗಳು, ಸೂರ್ಯ, ಚಂದ್ರ, ನಗುಮುಖದ ಮಕ್ಕಳು, ಪ್ರಕೃತಿ ಎಲ್ಲವೂ ದೇವರೇ.

ಹೊರಗಿನ ಆಡಂಬರದ, ಜಂಬದ ಪೂಜೆಗಿಂತಲೂ ಶುದ್ಧವಾದ ಮನಸ್ಸಿನಿಂದ ಎಲ್ಲರನ್ನು ಪ್ರೀತಿಸುವುದು ದೇವಪೂಜೆಯೇ. ಕಷ್ಟದಲ್ಲಿರುವವನನ್ನು, ಸಂಕಟದಲ್ಲಿರುವವನನ್ನು ಕಂಡಾಗ ಅನುಕಂಪವನ್ನು ತೋರಿಸುವುದೂ ದೇವಪೂಜೆಯೇ. ಇತರರಿಗೆ ಪ್ರೀತಿ ಹಂಚುವುದು, ಸಹಕಾರ ನೀಡುವುದೂ ಪೂಜೆಯೇ. ಪೂಜೆಗೆ ಮುಖ್ಯವಾಗಿ ಬೇಕಾದ ಪುಷ್ಪವೆಂದರೆ, ಅವು...... ಪ್ರೀತಿ, ಪ್ರೇಮ, ಅನುಕಂಪಗಳು. ಇವುಗಳನ್ನು ಬಳಸಿದಾಗ ಅದೂ ದೇವಪೂಜೆಯೇ.

# ಮರೆಯಲಾಗದ ಮಹನೀಯ

ಮೈಸೂರು ಜಿಲ್ಲಾ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಪ್ರದೇಶವು ಎಂದೂ ಕನ್ನಡನಾಡಿನ ಪ್ರದೇಶವಾಗಿ ಉಳಿದುಬಂದಿದೆ. ಇದು ಕ್ರಿ.ಶ.(ಸು.) ಎರಡು ನೂರಕ್ಕೂ ಮೊದಲಿಂದ ಐದನೇ ಶತಮಾನದ ಕಡೆಯುವರೆಗೂ ಬಾಳಿದ ಪುನ್ನಾಡ ದೊರೆಗಳು ಕಟ್ಟಿದ ರಾಜ್ಯ. ಪುನ್ನಾಡು ಆರು ಸಾವಿರ ನಾಡಾಗಿದ್ದಿತು. ಇದರ ರಾಜಧಾನಿ ಕೀರ್ತಿಪುರ (ಕಿತ್ತೂರು). ಪುನ್ನಾಡು ಕ್ರಮ ಕ್ರಮವಾಗಿ ಗಂಗರಾಜ್ಯದಲ್ಲಿ ಸೇರಿಹೋಯಿತು. ಇದು ಪದಿನಾರು ಎಂಬ ಹೆಸರಲ್ಲಿಯೇ ಉಳಿಯಿತು. ಮುಂದೆ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೂ, ಅನಂತರ ಮೈಸೂರು ಅರಸರ ಆಳ್ವಿಕೆಗೂ ಒಳಪಟ್ಟು, ಅಚ್ಚಗನ್ನಡ ಪ್ರದೇಶವಾಗಿಯೇ ಉಳಿದಿದೆ.

ಈ ತಾಲ್ಲೂಕಿನ ಹಂಪಾಪುರ ಹೋಬಳಿಗೆ ಸೇರಿದ ಗ್ರಾಮ ಜಿನ್ನಹಳ್ಳಿ. ಹೆಸರೇ ಹೇಳುವಂತೆ ಇದು ಜೈನ ಸಂಬಂಧವಾದ ಊರು ಹೆಸರಾಗಿದ್ದಿರಬಹುದೇ? ಕಾರಣ, ಪುನ್ನಾಡು ಜೈನಪ್ರದೇಶವಾಗಿದ್ದುದು. ಇಲ್ಲಿ ಶ್ರೀ ಶಿವಾದ್ವೈತ ಸಂಪ್ರದಾಯದ ಸ್ವಯಂ ಆಚಾರ್ಯರು ನೆಲಸಿದರು. ಇವರದು ವೈದಿಕ ಮನೆತನ. ಇವರ ಹಿರಿಯರು ಆಂಧ್ರಪ್ರದೇಶದಿಂದ ಬಂದವರಾಗಿರುತ್ತಾರೆ. ಈ ವಂಶದ ಶ್ರೀ ರೇವಣಾರಾಧ್ಯ-ಶ್ರೀಮತಿ ಬಸವಾಜಮ್ಮ ದಂಪತಿಗಳು ಸೋಸಲೆ ಗುರುಮಠದ ಮನೆತನದವರು. ಅಲ್ಲಿಂದ ಜಿನ್ನಹಳ್ಳಿಗೆ ಕರೆಸಲ್ಪಟ್ಟವರು. ದೇವತಾಕಾರ್ಯಗಳು ಮುಂತಾದ ಶುಭಸಮಾರಂಭಗಳಿಗೆ ಆರಾಧ್ಯರನ್ನೇ ಆಹ್ವಾನಿಸುವ ರೂಢಿ ಇದ್ದ ಕಾಲ. ಸುತ್ತಮುತ್ತಲ ಮೂವತ್ತಮೂರು ಗ್ರಾಮಗಳವರು ಗ್ರಾಮಪಂಚಾಯಿತಿಗಳಿಗೆ ಆರಾಧ್ಯರನ್ನು ಬಯಸುತ್ತಿದ್ದರು. ಈ ದಂಪತಿಗಳಿಗೆ ಇಬ್ಬರು ಅಕ್ಕಂದಿರು; ಒಬ್ಬ ತಮ್ಮ.

ಈ ದಂಪತಿಗಳ ಸುಪುತ್ರರಾಗಿ (ದಿನ:೨೧ ಜೂನ್ ೧೮೮೫) ಜನಿಸಿದ ಸುಪುತ್ರರು ಶ್ರೀ ಕುಮಾರಾರಾಧ್ಯರು. ಇವರು ಮನೆತನದ ಹೆಸರನ್ನು ಉಳಿಸುವ-ಬೆಳೆಸುವ ಉನ್ನತ



- ಪಂಡಿತ ಪ. ನಾಗರಾಜಯ್ಯ
ಪ್ರಶಸ್ತಿ ವಿಜೇತರು
ನಿವೃತ್ತ ಸರ್ಕಾರಿ ಉಪನ್ಯಾಸಕರು
ಜೆ. ಪಿ. ನಗರ, ಮೈಸೂರು.
ದೂ. 2372640

ಧ್ಯೇಯವನ್ನು ಹೊಂದಿ ಅದರ ಸಾಧನೆಗಾಗಿ ಬಾಳಿದವರು. ಇವರು ಜಿನ್ನಹಳ್ಳಿ ಗುರುಮಠದಲ್ಲಿ ವಿದ್ಯಾಭ್ಯಾಸ ಮಾಡಿದವರು. ಇವರು ಕನ್ನಡ, ಸಂಸ್ಕೃತ, ಜ್ಯೋತಿಷ್ಯ, ಆಯುರ್ವೇದಗಳನ್ನು ತಿಳಿದಿದ್ದವರು. ಇಂತಹವರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರು ಪತಿಯ 'ಸಹಧರ್ಮಿಣಿ' ಎಂಬ ಮಾತಿಗೆ ಅನ್ವರ್ಥವಾಗಿ ಬಾಳಿದವರು. ಶ್ರೀ ಆರಾಧ್ಯರ ಸಾಧನೆ ಹಲವು ಕಾಲದವು; ಹಲವು ಬಗೆಯಾದವು. ನಾವು ಅವನ್ನು ಸಾಮಾನ್ಯವಾದೊಂದು ಪಟ್ಟಿ ಮಾಡಬಹುದಲ್ಲದೆ , ವಿವರಿಸಲಾರೆವು.

ಸಾರ್ವಜನಿಕ ಹಿತಾಸಕ್ತಿಯಿಂದ ಜಿನ್ನಹಳ್ಳಿಯಲ್ಲಿ ಒಂದು ಶಾಲೆಯನ್ನು ತೆರೆಸಲು, ಹಂಪಾಪುರದಲ್ಲಿ ಒಂದು ಆಸ್ಪತ್ರೆಯನ್ನು ತೆರೆಸಲು ಕಾರಣರಾದರು. ಇದೇ ತಾಲ್ಲೂಕಿನಲ್ಲಿದ್ದ ತಮ್ಮ ಹದಿನೈದು ಎಕರೆ ತರಿ ಜಮೀನನ್ನು ಆಸ್ಪತ್ರೆಗಾಗಿ ದಾನ ಮಾಡಿ, ಇದರ ವರಮಾನದಿಂದ ಬಡರೋಗಿಗಳ ಉಪಚಾರ ಮಾಡಬೇಕೆಂದು ಕೋರಿದ್ದಾರೆ. ಅವರ ಆಶಯದಂತೆಯೇ ಅದು ಉಪಯೋಗವಾಗುತ್ತಿದೆಯೇ ಎಂಬುದು ತಿಳಿಯಬೇಕಿದೆ. ಇದೇ ರೀತಿ ಮೈಸೂರಿನಲ್ಲಿರುವ ಆರಾಧ್ಯರ ವಿದ್ಯಾರ್ಥಿನಿಲಯಕ್ಕಾಗಿ ಇಪ್ಪತ್ತೈದು ಎಕರೆ ಜಮೀನನ್ನು ದಾನವಾಗಿ ನೀಡಿದ್ದಾರೆ. ಅಂತೆಯೇ ಇದರ ಪಕ್ಕದಲ್ಲಿಯೇ ಇರುವ ಶಾರದಾನಿಕೇತನ ಎಂಬ ಹೆಸರಿನ ಬ್ರಾಹ್ಮಣ ವಿದ್ಯಾರ್ಥಿನಿಲಯಕ್ಕೆ ಇಪ್ಪತ್ತೈದು ಎಕರೆ ಜಮೀನನ್ನು ದಾನವಾಗಿ ನೀಡಿದ್ದಾರೆ. ಕೆಂಡಗಣ್ಣಸ್ವಾಮಿ ಗದ್ದುಗೆಗೆ ಒಂದು ಎಕರೆ ಜಮೀನನ್ನು ಭಕ್ತಿಯಿಂದ ದಾನ ಮಾಡಿದ್ದಾರೆ. ಸ್ವತಃ ತಮ್ಮ ಮನೆಯಲ್ಲಿ ಹತ್ತಾರು ವಿದ್ಯಾರ್ಥಿಗಳಿಗೆ ಊಟ, ವಸತಿ ಸೌಕರ್ಯವನ್ನು ಒದಗಿಸಿಕೊಡುತ್ತಿದ್ದರು. ಶಾಲೆಯನ್ನೂ, ಆಸ್ಪತ್ರೆಯನ್ನೂ ತೆರೆಸಿದುದೇ ಅಲ್ಲದೆ, ಜಿನ್ನಹಳ್ಳಿಯ ದಾಖಲೆ ಗ್ರಾಮವಾದ ಮಲಾರದ ಹುಂಡಿಗೂ ಶಾಲೆಯನ್ನು ತೆರೆಸಲು, ಹಂಪಾಪುರದಲ್ಲಿ ಇಂದಿಗೂ ನಡೆಯುತ್ತಿರುವ ಸಂತೆಯನ್ನು ಪ್ರಾರಂಭಿಸಲು, ಹಂಪಾಪುರದಲ್ಲಿ ಪಶುವೈದ್ಯ ಆಸ್ಪತ್ರೆಯನ್ನೂ, ಆರಕ್ಷಕ ಠಾಣೆಯನ್ನೂ ನವೀಕರಿಸಲು, ಸಂತೆ ಮೈದಾನದ ಸಮೀಪದ ಅರಳೀಕಟ್ಟೆಯನ್ನು ಕಟ್ಟಿಸಲು ಸಹಾಯಕರಾಗಿದ್ದಾರೆ. ಕರಿಗಳದಲ್ಲಿ ಬಸವೇಶ್ವರಗುಡಿ ಕಟ್ಟಿಸಲು, ಸಂಗಮಕ್ಷೇತ್ರದ ಅಭಿವೃದ್ಧಿ ಕೆಲಸ ಮಾಡಿಸಲು, ೧೯೨೭ ರಲ್ಲಿ ಕೆಂಡಗಣ್ಣಸ್ವಾಮಿ ಗದ್ದುಗೆಗೆ ಅಂದಿನ ರಾಜಮಹರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ದಯಮಾಡಿಸಿದ್ದ ಕಾಲಕ್ಕೆ ಅವರನ್ನು ಭೇಟಿಮಾಡಿ ಮಾದಾಪುರದಿಂದ ಗದ್ದುಗೆಗೂ, ಮೈಸೂರಿನಿಂದ ಬಾವಲಿಗೂ ರಸ್ತೆಯನ್ನು ಮಾಡಿಸಲು ಕಾರಣರಾಗಿದ್ದಾರೆ. ಆಗಿನ ಹುಜೂರ್ ಅರಸರಿಗೆ ಹಾಗೂ ಮುಜರಾಯಿ ಕಮೀಷನರ್ ಅವರಿಗೆ ಪ್ರಾರ್ಥನೆ ಸಲ್ಲಿಸಿ ಸುತ್ತಲ ಗ್ರಾಮಗಳಲ್ಲಿನ ದೇವಸ್ಥಾನ ಜೀರ್ಣೋದ್ಧಾರ ಕೆಲಸಗಳಿಗೆ ಸಹಾಯಕರಾಗಿದ್ದಾರೆ. ಜಿನ್ನಹಳ್ಳಿಗ್ರಾಮದ ಪಂಚಾಯಿತಿ ಅಧ್ಯಕ್ಷರಾಗಿ ಗ್ರಾಮಾಭಿವೃದ್ಧಿ ಕೆಲಸಗಳನ್ನು ಮಾಡಿದ್ದಾರೆ. ಸ್ಟಾಂಪ್‌ವೆಂಡರ್ ಆಗಿ, ಪತ್ರಗಳ ಬರಹಗಾರರಾಗಿ ತಾಲ್ಲೂಕಿನ ಅನೇಕರಿಗೆ ಉಪಕಾರಿಗಳಾಗಿದ್ದಾರೆ.

ಹಂಪಾಪುರದಲ್ಲಿ 'ವಿಲೇಜ್ ಮುನ್ಸೀಫ್'ನ್ಯಾಯಾಲಯದ ಸ್ಥಾಪನೆಗೆ ಕಾರಣರಾದರು. ಇವರ ಸೇವಾಮನೋಭಾವವನ್ನು, ಸೇವಾ ಕಾರ್ಯಗಳನ್ನೂ, ನ್ಯಾಯಪರತೆಯನ್ನೂ ಗುರುತಿಸಿದ ಅಂದಿನ ಸರ್ಕಾರ ಇವರನ್ನು 'ವಿಲೇಜ್ ಮುನ್ಸೀಫ್'ರನ್ನಾಗಿ ನೇಮಿಸಿದರು; ಫಲವಾಗಿ ಇವರು

೧೯೪೪-೪೫ ನೇ ಸಾಲಿನಿಂದ ೧೯೫೩-೫೪ ನೇ ಸಾಲಿನವರೆಗೂ ಸಾವಿರಾರು ತಕರಾರುಗಳನ್ನು ನ್ಯಾಯಬದ್ಧವಾಗಿ ಪರಿಹರಿಸಿರುವುದನ್ನು ಈಗಲೂ ಜಿಲ್ಲಾ ನ್ಯಾಯಾಲಯದಲ್ಲಿರುವ ಹಳೆಯ ಕಡತಗಳಿಂದ ಕಾಣಬಹುದಾಗಿದೆ. ಈಗಿನ ನ್ಯಾಯಾಲಯಗಳಲ್ಲಿ ವರ್ಷಾನುಗಟ್ಟಲೆ ವಿಚಾರಣೆ ನಡೆಸಿ ತೀರ್ಮಾನಿಸುವುದನ್ನು ಈ ಹಳ್ಳಿಯ ನ್ಯಾಯಾಧೀಶ-ಒಬ್ಬ ಸಾಮಾನ್ಯ ಮನುಷ್ಯ ಒಂದೇ ದಿನದಲ್ಲಿ ತೀರ್ಮಾನಿಸಿ, ತೀರ್ಪನ್ನು ಬರವಣಿಗೆಯಲ್ಲಿ ನೀಡಿ, ತಕರಾರುಗಳನ್ನು ಪರಿಹರಿಸಿರುವುದನ್ನು ತಿಳಿಯಬಹುದಾಗಿದೆ.

ಇವರ ಖಾಸಗೀ ಜೀವನವನ್ನು ನೋಡಿದರೆ ಇಷ್ಟೆಲ್ಲ ದಾನ ಧರ್ಮಗಳನ್ನು, ಸಾರ್ವಜನಿಕ ಸೇವೆಯನ್ನು ಮಾಡಿದಂತಹವರು ಸಾಕಷ್ಟು ಹಣವಂತರಾಗಿದ್ದಿರಬಹುದೆಂದು ಭಾವಿಸುವುದು ಸಹಜವಾಗಿದೆ. ಆದರೆ ಶ್ರೀಯುತರು ಆರ್ಥಿಕವಾಗಿ ಬಹಳಷ್ಟು ಕಷ್ಟಗಳನ್ನು ಅನುಭವಿಸಿದವರು. ತಮ್ಮ ಸಹಾಯವನ್ನು ಬಯಸಿ ಬಂದವರಿಗೆ -ತಮಗೇ ಕಷ್ಟವಾಗಿದ್ದರೂ-ಸಹಾಯ ಮಾಡದೇ ಇರುತ್ತಿರಲಿಲ್ಲ. ಇದು ಅವರ ಸಹಜ ಸ್ವಭಾವ. ತಮ್ಮ ಜೀವನದ ಕಡೆಯವರೆಗೂ ಇದನ್ನು ಕಳೆದುಕೊಳ್ಳಲಿಲ್ಲ. ಸಹಾಯ ಮಾಡುವ ಆತುರದಲ್ಲಿ ತಮ್ಮ ಕಾಲನ್ನೇ ಮುರಿದುಕೊಂಡರು.

ಇವರ ಸಹಧರ್ಮಿಣಿ ಪಾರ್ವತಮ್ಮನವರು ಪತಿಯ ಮನೋಭಾವಕ್ಕೆ ತಕ್ಕಂತೆ ಸಹಮತಿಯಾಗಿ, ಸಹವರ್ತಿಯಾಗಿ ಬಾಳಿದವರು. ಎಷ್ಟೇ ಹೊತ್ತಿನಲ್ಲಿ ಮನೆಗೆ ಅತಿಥಿಗಳು ಬಂದರೂ ಸ್ವಲ್ಪವೂ ಬೇಸರಿಸದೆ, ಕಷ್ಟಗಳನ್ನು ಲೆಕ್ಕಿಸದೆ ಅವರನ್ನು ಉಪಚರಿಸುತ್ತಿದ್ದರು.

ಈ ದಂಪತಿಗಳಿಗೆ ಇಬ್ಬರು ಮಕ್ಕಳು. ಒಬ್ಬಳು ಮಗಳು; ಒಬ್ಬ ಮಗ; ಅಂಬುಜಾಕ್ಷಮ್ಮ ಮಗಳು. ನಾಗಭೂಷಣಾರಾಧ್ಯ ಮಗ. ಅಳಿಯ ಸಾಗರೆ ಜೆ.ಸಿ. ಚಂದ್ರಶೇಖರಾರಾಧ್ಯರು ತಮ್ಮ ಸರ್ಕಾರಿ ಶಾಲಾ ಉಪಾಧ್ಯಾಯ ವೃತ್ತಿಯನ್ನು ಕಡೆಗಣಿಸದೆ, ಸ್ವಾತಂತ್ರ್ಯ ಹೋರಾಟಗಾರರಾಗಿ ಬ್ರಿಟಿಷ್ ಸರ್ಕಾರದ ವಿರುದ್ಧ ಬಂಡೆದ್ದು ಹೋರಾಡಿ, ಜೈಲುವಾಸ ಅನುಭವಿಸಿದವರು. ಸ್ವಾತಂತ್ರ್ಯ ಹೋರಾಟಗಾರರಿಗೆ ಸಿಗುವ ಗೌರವಧನವನ್ನು ಪಡೆದವರು; ಇದನ್ನು ಇವರ ಧರ್ಮಪತ್ನಿ ಪಡೆಯುತ್ತಿದ್ದರು. ಮಗ ನಾಗಭೂಷಣಾರಾಧ್ಯರೂ ತಂದೆಯಂತೆಯೇ ಸಮಾಜ ಸೇವಾಸಕ್ತರು. ತಾಯಿಯಂತೆಯೇ ತಮ್ಮ ಕಷ್ಟವನ್ನು ಲೆಕ್ಕಿಸದವರು. ಆರಾಧ್ಯಬಳಗದಲ್ಲಿ ಬೆರೆತು, 'ಆರಾಧ್ಯ ಸಂಪದ','ಮುನಿಸಂದೇಶ' ಎಂಬ ಮಾಸಿಕಗಳನ್ನು ಪ್ರಾರಂಭಿಸಿ, ಕಷ್ಟದಿಂದಲೇ ನಡೆಸುತ್ತಿರುವವರು.

ಶ್ರೀ ಕುಮಾರಾರಾಧ್ಯರು "ಹೇಳದಿರು ಹೋರಾಡಿ ಫಲವಿಲ್ಲವೆಂದು" ಎಂಬ ವಾಣಿಯನ್ನು ನಂಬಿ ಹೋರಾಡಿ ಗೆದ್ದವರು. ತಮ್ಮ ವರ್ಚಸ್ಸನ್ನು ಬೀರಿ ತರುಣ ಪೀಳಿಗೆಗೆ ಸ್ಫೂರ್ತಿಯನ್ನು ನೀಡಿದವರು. ಇವರು ನಡೆದ ದಾರಿ ಇಂದಿಗೂ ಆದರ್ಶದ ದಾರಿಯಾಗಿ ಅನುಕರಣೀಯವೂ, ಅನುಸರಣೀಯವೂ ಆಗಿದೆ. ಸಹೃದಯ ಜೀವಿಯಾಗಿದ್ದು ಊರಿನವರೆಲ್ಲರಲ್ಲ "*ದೊಡ್ಡ ಬುದ್ಧಿ*"ಯವರೆಂದೂ, "*ದೊಡ್ಡ ಆರಾಧ್ಯ*"ರೆಂದೂ ಗೌರವಿಸಲ್ಪಟ್ಟವರು; ಜನಮೆಚ್ಚುಗೆಯನ್ನು ಗಳಿಸಿದವರು.

ಕಡೆತನಕ ತಮ್ಮ ಸೇವಾಪ್ರವೃತ್ತಿಯನ್ನು ಬಿಡದೆ ಬಾಳಿ, ದಿನ:೧೨ ಫೆಬ್ರವರಿ ೧೯೬೧ ರಂದು ಮೈಸೂರಿನಲ್ಲಿ ಗತಿಸಿದರು; ಇವರು ಮರೆಯಲಾಗದ ಮಹನೀಯರಾದರು.



# ಜೀವನದಲ್ಲಿ ಶಿಸ್ತು

ಪ್ರಕೃತಿಯ ನಿಯಮಗಳನ್ನು ಮೀರಲು ಸಾಧ್ಯವಿಲ್ಲ. ಮೀರಿ ನಡೆದವರಿಗೆ ಕೇಡು ತಪ್ಪದು. ಇದರಿಂದ ಪಾರಾಗಲು ನಿಯಮ ಪಾಲನೆ ಅತ್ಯಗತ್ಯ. ತಂದೆ ತಾಯಿಗಳ, ಗುರುಹಿರಿಯರ ಮಾತುಗಳನ್ನು ಮೀರಬಾರದು. ಹಿರಿಯರಿಗೆ - ವಿಧೇಯರಾಗಿ ಸಮಾಜದಲ್ಲಿ ಮಾದರಿಯಾಗಿ ನಿಯಮಬದ್ಧವಾಗಿ ನಡೆಯುವವರ ಬಾಳು ಸಂತಸದ ಬೀಡಾಗುವುದು. ನಿಯಮ ಪಾಲನೆಯಲ್ಲಿ ಸೈನಿಕರ ನಡತೆ ಅನುಕರಣೀಯವಾದದ್ದು. ಶಿಸ್ತು ಎಂದ ಕೂಡಲೆ ಅವರ ನೆನಪು ಬರುವುದು ಸಹಜ. ಹೀಗೆ ನಿಯಮ ಪಾಲನೆ, ಆಜ್ಞಾಪಾಲನೆ ಮತ್ತು ವಿಧೇಯತೆಗಳ ಕ್ರಮಬದ್ಧವಾದ ಅನುಪಾಲನೆಯೇ ಶಿಸ್ತು.

ಹಿಂದಿನ ಕಾಲದಲ್ಲಿ ನಮ್ಮ ದೇಶದಲ್ಲಿ ಗುರುಕುಲ ಪದ್ಧತಿಯ ಶಿಕ್ಷಣಕ್ರಮವಿತ್ತು. ಅಂದಿನ ಶಿಕ್ಷಣಾರ್ಥಿಗಳಲ್ಲಿ ಶಿಸ್ತು, ಸಂಯಮ, ವಿಧೇಯತೆ, ಬ್ರಹ್ಮಚರ್ಯ, ಇಂದ್ರಿಯ ನಿಗ್ರಹಶಕ್ತಿಗಳು ನೆಲೆಸಿದ್ದು ಅವರು ಗುರುಹಿರಿಯರ ಪ್ರೀತಿಗೆ ಪಾತ್ರರೂ, ಸಚ್ಚರಿತ್ರರೂ, ನೀತಿಜ್ಞರೂ, ಧರ್ಮಜ್ಞರೂ ಆಗಿದ್ದರು. ಅವರಲ್ಲಿ ಧಾರ್ಮಿಕ ಮತ್ತು ನೈತಿಕ ಭಯವಿತ್ತು. ಹೀಗಾಗಿ ಕಳ್ಳತನ, ಮೋಸ, ವಂಚನೆ, ದೌರ್ಜನ್ಯ, ಅನಾಚಾರ ಮೊದಲಾದ ಸಾಮಾಜಿಕ ಪಿಡುಗುಗಳು ಅಷ್ಟಾಗಿ ಇರಲಿಲ್ಲ. ಅಂದಿನ ಸಮಾಜ ಸುಖ, ನೆಮ್ಮದಿ, ಶಾಂತಿ, ಸಮೃದ್ಧಿಯ ನೆಲೆವೀಡಾಗಿತ್ತು. ಗುರುವಿಗೆ ಶ್ರೇಷ್ಠಸ್ಥಾನವಿತ್ತು. ತಪ್ಪು ಮಾಡಿದರೆ ಗುರುಶಾಪನೀಡುವರೆಂಬ ಭಯವೂ ಇತ್ತು. ಜೊತೆಗೆ *'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ'* ಎಂಬ ನೈತಿಕಭಯವೂ ಇತ್ತು. ಹೀಗಾಗಿ ಅಂದಿನ ಸಮಾಜದಲ್ಲಿ ಶಿಸ್ತುಬದ್ಧ ನಡವಳಿಕೆ ಕಟ್ಟುನಿಟ್ಟಾಗಿದ್ದು ಅದನ್ನು ಮೀರಿ ನಡೆಯಲು ಯಾರೂ ಸಿದ್ಧರಿರಲಿಲ್ಲ. ಇದರಿಂದಾಗಿ ಸಮಾಜದಲ್ಲಿ ಶಾಂತಿಯುತ ಸಹಬಾಳ್ವೆ, ಕ್ರಮಬದ್ಧ ಜೀವನ ನಡೆಯುತ್ತಿತ್ತು.



- ರೇವಣಾರಾಧ್ಯ
ಎಂ.ಎ., ಬಿ.ಇಡಿ.
ಸರ್ಕಾರಿ ಪ್ರೌಢಶಾಲಾ ಶಿಕ್ಷಕರು
ಮಂಡ್ಯ ಜಿಲ್ಲೆ
ಪ್ರಧಾನಕಾರ್ಯದರ್ಶಿ
ಕ.ರಾ.ಆ.ಯು.ಜ. ರಿ. ಮಂಡ್ಯ

ಇಂದಿನ ನಮ್ಮ ಶಿಕ್ಷಣ ಸಂಪೂರ್ಣವಾಗಿ ಪಾಶ್ಚಾತ್ಯರ ಅನುಕರಣೆಯಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿ ಆಂಗ್ಲರ ಪ್ರಭಾವಕ್ಕೆ ಒಳಗಾದ ನಮ್ಮ ಶಿಕ್ಷಣ ವ್ಯವಸ್ಥೆ ಕೆಲವು ಮಹತ್ವಪೂರ್ಣ ಬದಲಾವಣೆಗಳನ್ನು ಕಂಡರೂ, ಸ್ವಂತ ದೇಶೀಯ ಸೊಗಡನ್ನು ಕಳೆದುಕೊಂಡಿತು. ನಮ್ಮದು ಎನ್ನುವುದು ಎಲ್ಲವೂ ಕೀಳು, ಅನ್ಯರದೆನ್ನುವುದೆಲ್ಲವೂ ಮೇಲು ಎಂಬ ಕೀಳುಮನೋಭಾವನೆ ಬೆಳೆಯಿತು. ಅದು ಇಂದಿಗೂ ಹೋಗಿಲ್ಲ ಎಂಬುದು ಸತ್ಯ. ನಮ್ಮ ವಿಚಾರಶೀಲರೆನಿಸಿಕೊಂಡವರ ದೃಷ್ಟಿಯಲ್ಲಿ ಭಾರತೀಯಪರಂಪರೆ, ಸಂಸ್ಕೃತಿ, ಧರ್ಮ, ಜಿಜ್ಞಾಸೆಯ ಸುಳಿಯಲ್ಲಿ ಸಿಲುಕಿದ್ದು, ನಿರ್ದಿಷ್ಟ ಸ್ವರೂಪವನ್ನು ಪಡೆದಿಲ್ಲ.

ಶಿಸ್ತು ಇಂದು ವಿದ್ಯಾರ್ಥಿವೃಂದದಲ್ಲಿ ಮಾತ್ರವಲ್ಲ ಸಮಾಜದ ಎಲ್ಲ ಕ್ಷೇತ್ರದಲ್ಲೂ ಮಾಯವಾಗುತ್ತಿದೆ. ಇದಕ್ಕೆ ಕಾರಣ ಪ್ರಮುಖವಾಗಿ ಮನೆಯ ಹಿರಿಯರಲ್ಲಿ ಈ ಭಾವನೆ ಕಡಮೆಯಾಗುತ್ತಿದೆ: ನಿಯಮಪಾಲನೆಯಲ್ಲಿ ಸಡಿಲಿಕೆ, ತಮ್ಮ ಮಕ್ಕಳನ್ನು ನಿಯಂತ್ರಿಸುವಲ್ಲಿ ಹಾಗೂ ಸನ್ಮಾರ್ಗಗಳ ಕಡೆ ಅವರ ಗಮನವನ್ನು ಕೇಂದ್ರೀಕರಿಸುವಲ್ಲಿ ವಿಫಲತೆ: ಹಾಗೂ ಹಿರಿಯರು ದುರ್ಮಾರ್ಗದಲ್ಲಿ ನಡೆಯುತ್ತಿರುವುದು ಶಿಸ್ತಿನ ವಿಫಲತೆಗೆ ಮುಖ್ಯಕಾರಣವಾಗಿದೆ. ಮಕ್ಕಳ ಮನಸ್ಸು ಮುಗ್ಧವಾಗಿದ್ದು ಅನುಕರಣೆ ಅವರ ಸ್ವಭಾವವಾಗಿದೆ. ಸಮಾಜದ ಗುರು ಹಿರಿಯರು ಮಾರ್ಗದರ್ಶಕರಾಗಿರದೆ; ಇವರೇ, ಅಶಿಸ್ತಿನ ಸಿಪಾಯಿಗಳಾದರೆ, ಇವರನ್ನು ನೋಡಿ ಕಲಿಯುವ ಪೀಳಿಗೆ ಸಹಜವಾಗಿ ಅಶಿಸ್ತಿಗೊಳಗಾಗಿ ಸಮಾಜದಲ್ಲಿನ ವ್ಯವಸ್ಥೆಗೆ ಧಕ್ಕೆ ಬಂದು ನಿಯಮಪಾಲನೆಗಳೆಲ್ಲವೂ ಗಾಳಿಗೆ ತೂರಿಹೋಗಿ, ಸ್ವೇಚ್ಛಾಚಾರ ತಾಂಡವವಾಡಿ, ಸಾಮಾಜಿಕ ನೆಮ್ಮದಿ ಹದಗೆಟ್ಟು, ಅಶಾಂತಿಯ ನೆಲೆಯಾಗಲು ಕಾರಣವಾಗಿದೆ. ಅಂತೆಯೆ ಶಿಸ್ತಿನ ಗಂಧವೆ ಇಲ್ಲದ ಪೋಷಕರಲ್ಲಿ ಶಿಸ್ತಿನಸಿಪಾಯಿಗಳಂತಹ ಮಕ್ಕಳನ್ನು ನಿರೀಕ್ಷಿಸುವುದಾದರೂ ಹೇಗೆ ಸಾಧ್ಯ? ಮಕ್ಕಳು ಶಿಸ್ತಿನ ಸಿಪಾಯಿಗಳಾಗಬೇಕಾದರೆ, ಪೋಷಕ ವರ್ಗ, ಬೋಧಕ ವರ್ಗ ಹಾಗೂ ಸಮಾಜದ ಜವಾಬ್ದಾರಿ ಸ್ಥಾನದಲ್ಲಿರುವ ವರ್ಗದವರೂ ಮಾದರಿಯಾಗಿದ್ದು, ನಿಯಮಪಾಲನೆಯಲ್ಲಿ ಚಾಚೂ ತಪ್ಪದಂತೆ ನಡೆದುಕೊಂಡರೆ, ಅವರನ್ನು ಅನುಸರಿಸಿ ನಡೆಯುವ ಯುವ ಪೀಳಿಗೆಯಲ್ಲೂ ಈ ಶಿಸ್ತು ಮತ್ತು ನಿಯಮಪಾಲನೆಯನ್ನು ನಿರೀಕ್ಷಿಸಬಹುದಾಗಿದೆ. ಅದರಲ್ಲೂ ವಿಶೇಷವಾಗಿ ದೇಶದ ಪ್ರತಿಯೊಂದು ಶಿಕ್ಷಣ ಸಂಸ್ಥೆಯಲ್ಲೂ ಕಟ್ಟುನಿಟ್ಟಾದ ಶಿಸ್ತಿನ ಸಿಪಾಯಿಗಳಾದ ಗುರುವೃಂದ, ಆಡಳಿತವರ್ಗದವರು ಮಕ್ಕಳ ಮನಸ್ಸನ್ನು ಪರಿವರ್ತಿಸುವ ಮೂಲಕ ನೈತಿಕ ಹಾಗೂ ಮೌಲ್ಯ ವರ್ಧಿತಶಿಕ್ಷಣದ ಮೂಲಕ ಶಿಸ್ತಿನ ಬುನಾದಿಯನ್ನು ಪ್ರಾಥಮಿಕ ಶಿಕ್ಷಣದಿಂದ ಆರಂಭಿಸಿ, ಉನ್ನತ ಶಿಕ್ಷಣದವರೆಗೂ ಅದನ್ನು ಪರಿಪಾಲಿಸುವಂತೆ ನೋಡಿಕೊಳ್ಳಬೇಕು. ಇದಕ್ಕೆ ಸಮಾಜ ಸಂಪೂರ್ಣ ಸಹಾಯ ನೀಡಿದಾಗ ಮಾತ್ರ ನಾವು ಶಿಸ್ತುಬದ್ಧವಾದ, ಮೌಲ್ಯಾಧಾರಿತವಾದ ಸಮಾಜವನ್ನು ರೂಪಿಸಿ, ತನ್ಮೂಲಕ ಸುಖೀಸಾಮ್ರಾಜ್ಯಕಲ್ಪನೆಯನ್ನು ನನಸಾಗಿಸಲು ಸಾಧ್ಯವಾಗುತ್ತದೆ.

ವ್ಯಕ್ತಿಯ ನಡೆನುಡಿಯಲ್ಲಿ ಶಿಸ್ತು ಸಹಜವಾಗಿ ಮೂಡಿಬರಬೇಕು. ಶಿಸ್ತನ್ನು ಕೇವಲ ಕಾನೂನಿನ ಮೂಲಕ ಹೇರಿ ನಿಯಂತ್ರಿಸಲು ಸಾಧ್ಯವಿಲ್ಲ. ಪೋಲೀಸ್ ಅಧಿಕಾರಿಗಳ, ನ್ಯಾಯಾಲಯದ ಮತ್ತು ಇತರ ಅಧಿಕಾರಿಗಳ ನಿಯಂತ್ರಣದಿಂದ ಬರುವ ಶಿಸ್ತು ಶಿಸ್ತಲ್ಲ: ನಿಜವಾದ

ಶಿಸ್ತು ವ್ಯಕ್ತಿಯಲ್ಲಿ ಮನಃಪರಿವರ್ತನೆಗೊಂಡು ಬರಬೇಕು. ಶಿಸ್ತಿನಿಂದ ನಡೆಯುವುದು ಕಷ್ಟದ ಕೆಲಸ; ಆದರೆ ಆ ಕಷ್ಟವೇ ಮುಂದಿನ ಸುಖೀಜೀವನದ ಸೋಪಾನವಾಗುತ್ತದೆ. ಔಷಧಿ ನಾಲಿಗೆಗೆ ಕಹಿ ಎನಿಸಿದರೂ ಆರೋಗ್ಯದ ದೃಷ್ಟಿಯಿಂದ ಅದು ಸಂಜೀವಿನಿ ಅಲ್ಲವೇ ? ಹಾಗೆಯೇ ಶಿಸ್ತಿನಜೀವನ ಆರಂಭದಲ್ಲಿ ಕ್ಲಿಷ್ಟ ಎನಿಸಿದರೂ ಮುಂದಿನ ಆನಂದ ಜೀವನಕ್ಕೆ ನಾಂದಿಯಾಗುತ್ತದೆ.

ಶಿಸ್ತು ಮಿತಿ ಮೀರಿದರೆ ವಿಚಾರಶಕ್ತಿ, ವಿವೇಚನಾ ಶಕ್ತಿಗಳು, ಸ್ವಾತಂತ್ರ್ಯ ಮನೋಭಾವನೆಗಳೂ ಕ್ಷೀಣಿಸುವ ಸಾಧ್ಯತೆಗಳಿವೆ., ಯಾವುದೂ ಅತಿಯಾಗಬಾರದು. ನಾಯಕ ಅಥವಾ ಅಧಿಕಾರಿಯ ಆಜ್ಞೆಯನ್ನು ಪ್ರಶ್ನಿಸುವುದು ಸಿಪಾಯಿಯ ಕರ್ತವ್ಯವಲ್ಲದಿದ್ದರೂ, ಸಮಯವನ್ನು ನೋಡಿ ವಿವೇಚನೆಯಿಂದ ವರ್ತಿಸುವುದು ಅಗತ್ಯ. ಮಿತಿಮೀರಿದ ಶಿಸ್ತಿನಿಂದ ಮನೋವೈಶಾಲ್ಯತೆಗೆ ಧಕ್ಕೆ ಒದಗಬಹುದು. ಹಾಗೆ ಆಗದಂತೆ ಎಚ್ಚರ ವಹಿಸುವುದು ಅಗತ್ಯ.

ಶಿಸ್ತು ಎಂದರೆ ಕುರುಡು ವಿಧೇಯತೆಯಲ್ಲ. ಹೇಡಿತನವೂ ಅಲ್ಲ. ಅದೊಂದು ಜೀವನದ ಮೇಲ್ಪಂಕ್ತಿ. ಎಲ್ಲರೂ ಎಲ್ಲ ಕ್ಷಣದಲ್ಲೂ ಅನುಸರಿಸಬೇಕಾದ ಒಂದು ನಿಯಮ. ಅಲ್ಲದೆ ಹುಟ್ಟಿದಂದಿನಿಂದ ಸಾಯುವವರೆಗು ಎಡೆಬಿಡದೆ ಪಾಲಿಸಬೇಕಾದ ಒಂದು ನಿಯಮ ಪಾಲನೆಯೇ ಶಿಸ್ತು. ಅಂತೆಯೇ ಸ್ವಾಮಿ ವಿವೇಕಾನಂದರ ವಾಣಿಯಾದ *"ಶಿಸ್ತಿನಿಂದ ನಡೆವ ವ್ಯಕ್ತಿ ಲೋಕ ಪ್ರಿಯನಾಗುತ್ತಾನೆ."* ಎಂಬುದಕ್ಕೆ ನಮ್ಮ ರಾಷ್ಟ್ರದ ಅನೇಕ ಗಣ್ಯರ ಜೀವನ ಸಾಕ್ಷಿಯಾಗಿದೆ; ಸುಭಾಷ್‌ಚಂದ್ರ ಬೋಸ್‌ರ ಜೀವನಚರಿತ್ರೆ ಇದಕ್ಕೊಂದು ನಿದರ್ಶನವಾಗಿದೆ, ಶಿಸ್ತು ಪ್ರತಿಯೊಬ್ಬರ ಜೀವನದ ಉಸಿರಾದಾಗ, ಸುಖ, ಶಾಂತಿ, ಸಮೃದ್ಧಿಯ ಸಮಾಜನಿರ್ಮಾಣವನ್ನು ನಿರೀಕ್ಷಿಸಲು ಸಾಧ್ಯವಾಗುವುದು. ಅಂತೆಯೆ ಪ್ರತಿಯೊಬ್ಬರೂ ಶಿಸ್ತಿನ ಜೀವನವನ್ನು ಮೈಗೂಡಿಸಿಕೊಳ್ಳುವುದರಿಂದ ಸಾಮಾಜಿಕ ಸದೃಢತೆಯನ್ನು, ಸಮೃದ್ಧಿ, ಶಾಂತಿಯ ಬದುಕನ್ನು, ಸುಭದ್ರ ವ್ಯವಸ್ಥೆಯನ್ನು ಸ್ಥಾಪಿಸಬಹುದು.

* * *

## ನಾದ ಚಿಕಿತ್ಸೆ

ಓಂಕಾರವೇ ಎಲ್ಲ ನಾದಗಳ ಎಲ್ಲ ಶಬ್ದಗಳ ಮೂಲ. ಈ ಶಬ್ದನಾದವೇ ವಿವಿಧ ಸ್ವರವಿನ್ಯಾಸಗಳಾಗಿ ಪರಿವರ್ತಿಸಿ ಸಂಗೀತಶಾಸ್ತ್ರವಾಗಿದೆ. ಇದು ಅತಿ ಪವಿತ್ರವಾದ ಒಂದು ದೈವಕಲೆ ಹಾಗೂ ಸಾಧನ ಮಾರ್ಗ. ಸ್ವರ ಸ್ಪಂದನದ ಹಿಡಿತದಿಂದ ಶರೀರದಲ್ಲಿನ ಬೇಕಾದ ಭಾಗದಲ್ಲಿ ಈ ಓಂಕಾರ ಶಬ್ದತರಂಗ ಸಂಗೀತವನ್ನು ಹರಿಸಿ ಕೇಂದ್ರೀಕರಿಸಬಲ್ಲ ಶಕ್ತಿಯನ್ನು ಸಾಧನೆಯಿಂದ ಪಡೆಯಬಹುದು. ಇದನ್ನು ಪಡೆದ ಮನುಷ್ಯ ಬ್ರಹ್ಮಾನಂದ ಹೊಂದುತ್ತಾನೆ. ಈ ಆಂತರಿಕ ಗಾನತರಂಗಗಳು ಶರೀರದ ವಿವಿಧ ಭಾಗಗಳಲ್ಲಿ ಸಾಗಿ ಸ್ಪಂದಿಸುವಿಕೆಯಿಂದ ಶರೀರದ ರೋಗರುಜಿನಗಳನ್ನು ನಿವಾರಣೆ ಮಾಡುವ ಶಕ್ತಿ ಹೊಂದಿರುತ್ತವೆ. ಇದನ್ನು ನಾದಚಿಕಿತ್ಸೆ ಎನ್ನುತ್ತಾರೆ.

# ಶರಣಜ್ಯೋತಿ

(ಸ್ಫೂರ್ತಿ: ಡಿ. ಎಸ್.ಕರ್ಕಿಯವರ "ಹಚ್ಚೇವು ಕನ್ನಡದ ದೀಪ ")

ಹಚ್ಚೇವು ಶರಣರ ದೀಪ
ಸಮತೆಯ ದೀಪ, ಏಕತೆಯ ದೀಪ
ಸುಜ್ಞಾನ ಬೀರುವ ದೀಪ ||ಪ||
ಶತಮಾನದಿಂದ ಅಜ್ಞಾನದಿಂದ
ಕೂಡಿರುವ ಕತ್ತಲನು ಕೊಚ್ಚೇವು
ಎಲ್ಲೆಲ್ಲಿ ವಚನದ ಕಂಪು ಸೂಸಲು
ಅಲ್ಲಲ್ಲಿ ಮನವ ಹರಿಸೇವು
ಕರುನಾಡೆ ಇರಲಿ ಹೊರನಾಡೆ ಇರಲಿ
ಶರಣರ ನುಡಿಗಳನು ನುಡಿದೇವು
ತೊರೆದೆಲ್ಲ ದಾಹ ಮರೆತೆಲ್ಲ ಮೋಹ ಹಚ್ಚೇವು ಸಂತಸದ ದೀಪ
ನರನರಗಳನ್ನು ಹುರಿಗೊಳಿಸಿ ಹೊಸೆದು ಹಚ್ಚೇವು ನಂದದ ದೀಪ||
ಕಾಯಕವೆ ನಾಕ ಅಲಸವೆ ನರಕ
ಎಂದೆನುವ ಮಂತ್ರವನು ಜಪಿಸೇವು
ನಡೆದಂತೆ ನುಡಿದ, ನುಡಿದಂತೆ ನಡೆದ
ಶರಣರ ಅಡಿಗಳಿಗೆ ನಮಿಸೇವು
ಮಹದೇವಿ ಛಲವು, ಬಸವನ ಒಲವು
ನೀಡಿಹುದು ನಮಗೆ ಹೊಸಬಲವು
ಜ್ಞಾನದ ಜ್ಯೋತಿ ಇರಲೆಂಥ ಭೀತಿ ಎಲ್ಲರಲು ಪ್ರೀತಿಯ ತೋರೇವು
ಮನೆ ಮನೆಗಳಲ್ಲಿ ಮನ ಮನಗಳಲ್ಲಿ ಹಚ್ಚೇವು ಶಾಂತಿಯ ದೀಪ ||
ಶರಣರು ನೆಲೆಸಿದ ಈ ನಾಡನೆಲ್ಲ
ಚಂದದ ನಂದನವ ಮಾಡೇವು
ಸಕಲಜೀವಾತ್ಮಕೆ ಲೇಸನೇ ಬಯಸಿ
ಬದುಕಿನಲಿ ಸಾರ್ಥಕವ ಪಡೆದೇವು
ನಡೆಯಲ್ಲಿ ನುಡಿಯಲ್ಲಿ ಸಮರಸವ ನೀಡೆಂದು
ಭಕುತಿಯಲಿ ನಾವು ಬೇಡೇವು
ತೊರೆದೆಲ್ಲ ದಾಹ ಮರೆತೆಲ್ಲ ಮೋಹ ಹಚ್ಚೇವು ಸುಜ್ಞಾನದೀಪ
ಮನೆಮನೆಗಳಲ್ಲಿ ಮನಮನಗಳಲ್ಲಿ ಹಚ್ಚೇವು ಶಾಂತಿಯ ದೀಪ ||



ರಚನೆ:
ಪ್ರೊ. ಕೆ. ಆರ್.
ಪ್ರೇಮಲೀಲಾ
K. R. Premaleela
W/o S. Mallanna
39/A, 8th Main, 5th
Cross, K. H. Road
Saraswathipuram,
Mysore - 9
Ph : 2544368
Cell : 9448434207

* * *

# ಸಾರ್ಥಕಜೀವಿ



- ಎಂ. ಮಹದೇವಾಚಾರ್
ನಿವೃತ್ತ ಸರಕಾರಿ
ಮುಖ್ಯೋಪಾಧ್ಯಾಯರು
ಕೆ.ಕೆ. ರಸ್ತೆ,
ಯಳಂದೂರು - 571441
ಚಾಮರಾಜನಗರ ಜಿಲ್ಲೆ.
ದೂ. 958226-240196

ಇತಿಹಾಸದ ಪುಟವನ್ನು ಬಿಚ್ಚಿ ನೋಡಿದಾಗ ಐತಿಹಾಸಿಕ ಪುರುಷರ ನೆನಪು ಬರುವುದು ಸಹಜ. ಜನ್ಮಗಳಲ್ಲಿ ಮನುಷ್ಯಜನ್ಮ ಬಹಳ ಶ್ರೇಷ್ಠವಾದ ಜನ್ಮ. ಆದ್ದರಿಂದ ಮನುಷ್ಯನಾದವನು ತನ್ನ ಜೀವಿತಕಾಲದಲ್ಲಿ ತನ್ನ ಕೈಲಾದಷ್ಟು ಸತ್ಕಾರ್ಯಗಳನ್ನು ಮಾಡಿ ಸಾರ್ಥಕ ಜೀವನ ನಡೆಸಬೇಕು. ಇದು ಪ್ರತಿಯೊಬ್ಬರಲ್ಲಿಯೂ ಇರಬೇಕಾದ ಸದ್ಗುಣಗಳಲ್ಲಿ ಒಂದು.

ಅಂತಹ ಸದ್ಗುಣಗಳನ್ನು ಹೊಂದಿ ಬಾಳಿ ಬದುಕಿದವರನ್ನು ನೆನಪಿಸಿಕೊಳ್ಳುವುದು ಈ ಪೀಳಿಗೆಯ ಸಂಪ್ರದಾಯ ಹಾಗೂ ಕರ್ತವ್ಯ ಎಂದು ಹೇಳಿದರೆ ಬಹುಶಃ ತಪ್ಪಾಗಲಾರದು ಎಂದು ನನ್ನ ಭಾವನೆ.

ಅಂತಹ ಮಹನೀಯರೊಬ್ಬರನ್ನು ನೆನಪಿಸಿಕೊಳ್ಳಲು ನಾನು ಇಚ್ಛಿಸುತ್ತೇನೆ. ಅವರು ಯಾರೆಂದರೆ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರ ಹೋಬಳಿ ಜಿನ್ನಹಳ್ಳಿ ಗುರುಮಠದ ಶ್ರೀ ಆರ್. ಕುಮಾರಾರಾಧ್ಯರು.

ಜಿನ್ನಹಳ್ಳಿಯು ಕಪಿಲಾ ನದಿಯ ಒಂದು ದಡದಲ್ಲಿದೆ. ಇನ್ನೊಂದು ದಡದಲ್ಲಿ ಹೆಬ್ಬಲಗುಪ್ಪೆ ಎಂಬ ಗ್ರಾಮವಿದೆ. ಈ ಜಿನ್ನಹಳ್ಳಿ ಗ್ರಾಮದಲ್ಲಿ ದಿವಂಗತ ವೇ|| ಬ್ರಂ || ಶ್ರೀ ಆರ್. ಕುಮಾರಾರಾಧ್ಯರು ಜನ್ಮವೆತ್ತಿದರು. ದಿವಂಗತ ವೇ|| ಬ್ರಂ || ಶ್ರೀ ರೇವಣಾರಾಧ್ಯರು ಮತ್ತು ದಿವಂಗತ ಶ್ರೀಮತಿ ಬಸವಾಜಮ್ಮನವರ ಪುತ್ರರು.

ದಿವಂಗತ ವೇ|| ಬ್ರಂ || ಶ್ರೀ ಆರ್. ಕುಮಾರಾರಾಧ್ಯರು ಹೆಬ್ಬಲಗುಪ್ಪೆಯ ದಿವಂಗತ ಶ್ರೀಮತಿ ಪಾರ್ವತಮ್ಮನವರನ್ನು ವಿವಾಹವಾಗಿದ್ದರು. ಪಾರ್ವತಮ್ಮನವರು ಪತಿಗೆ ತಕ್ಕ ಸತಿಯಾಗಿ ತುಂಬು ಜೀವನ ಕಂಡವರು.

ವಿ|| ವೇ|| ಬ್ರಂ|| ಶ್ರೀ ಆರ್. ಕುಮಾರಾರಾಧ್ಯರು 1885ರಲ್ಲಿ ಜನಿಸಿದರು. ಚಿಕ್ಕಂದಿನಲ್ಲೇ ಮುಂದಾಳತ್ವವನ್ನು ಬೆಳೆಸಿಕೊಂಡವರು. ಗ್ರಾಮದಲ್ಲಿ ಇವರನ್ನು ಅಯ್ನನವರು, ದೊಡ್ಡ ಆರಾಧ್ಯರು, ದೊಡ್ಡ ಬುದ್ಧಿಯವರು ಎಂದು ಗೌರವದಿಂದ ಕರೆಯುತ್ತಿದ್ದರು.

ಇವರು ತಮ್ಮ ಜೀವಿತಕಾಲದಲ್ಲಿ ಗ್ರಾಮದ ಅಭಿವೃದ್ಧಿಗಾಗಿ ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಜಿನ್ನಹಳ್ಳಿಯಲ್ಲಿ ಸರ್ಕಾರದಿಂದ ಪ್ರಾಥಮಿಕ ಶಾಲೆಯನ್ನು ಮಂಜೂರು ಮಾಡಿಸಿ ಅನುಕೂಲ ಮಾಡಿಕೊಟ್ಟರು. ಸಾರ್ವಜನಿಕರ ಉಪಯೋಗಕ್ಕಾಗಿ ಮಾನಂದವಾಡಿರಸ್ತೆಯಿಂದ ಕೆಂಡಗಣ್ಣಸ್ವಾಮಿಗದ್ದಿಗೆವರೆಗೆ ರಸ್ತೆನಿರ್ಮಾಣ ಮಾಡಲು ಕೃಷ್ಣರಾಜ ಒಡೆಯರಿಗೆ ಮನವಿ ಸಲ್ಲಿಸಿ ರಸ್ತೆ ಕಾಮಗಾರಿಗೆ ಸಹಕರಿಸಿದರು.

ಸಾರ್ವಜನಿಕರ ಸದುಪಯೋಗಕ್ಕಾಗಿ ಹಂಪಾಪುರದಲ್ಲಿ ಆಸ್ಪತ್ರೆ ಮಂಜೂರು ಮಾಡಲು ಆಸ್ಪತ್ರೆಗಾಗಿ ಹದಿನೈದು ಎಕರೆ ಜಮೀನನ್ನು ದಾನವಾಗಿ ನೀಡಿರುತ್ತಾರೆ. ಹಂಪಾಪುರದ ಆಸ್ಪತ್ರೆಯಿಂದ ಹಲವಾರು ಹಳ್ಳಿಗಳ ಜನರಿಗೆ ಉಪಯೋಗವಾಗಿದೆ.

ಮೈಸೂರಿನಲ್ಲಿರುವ ಆರಾಧ್ಯವಿದ್ಯಾರ್ಥಿನಿಲಯಕ್ಕೆ ಇಪ್ಪತ್ತೈದು ಎಕರೆ ಜಮೀನನ್ನು ಉದಾರವಾಗಿ ದಾನಮಾಡಿರುತ್ತಾರೆ. ಈ ವಿದ್ಯಾರ್ಥಿನಿಲಯದಲ್ಲಿ ವಿದ್ಯಾರ್ಜನೆ ಮಾಡಿದ ಅನೇಕರು ದೊಡ್ಡ ದೊಡ್ಡ ಹುದ್ದೆಯಲ್ಲಿರುವುದು ತಿಳಿದುಬರುತ್ತದೆ. ತಮ್ಮ ಹಳ್ಳಿಯಲ್ಲೂ ಸಹ ಹಲವಾರು ವಿದ್ಯಾರ್ಥಿಗಳಿಗೆ ಊಟ ವಸತಿಗೆ ಅನುಕೂಲ ಕಲ್ಪಿಸಿಕೊಟ್ಟು ಅವರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿರುತ್ತಾರೆ.

ಇವರು ಊರಿನ ಛೇರ್ಮನ್ ಆಗಿ ಊರಿನ ಅಭಿವೃದ್ಧಿಗೆ ಬಹಳವಾಗಿ ಶ್ರಮಿಸಿರುತ್ತಾರೆ. ಸ್ವಗ್ರಾಮದ ಜನರಷ್ಟೇ ಅಲ್ಲದೆ ನೆರೆಹೊರೆಯ ಗ್ರಾಮಗಳ ಜನರೂ ಸಹ ಇವರನ್ನು ದೊಡ್ಡ ಆರಾಧ್ಯರು, ದೊಡ್ಡ ಬುದ್ಧಿಯವರು ಎಂದು ಸಂಬೋಧಿಸುತ್ತಿದ್ದರು. ಜನರು ಇವರಿಗೆ ಅಪಾರವಾದ ಗೌರವ ಕೊಡುತ್ತಿದ್ದರು. ಅವರಲ್ಲಿ ಯಾವುದೇ ತಂಟೆ ತಕರಾರುಗಳಿದ್ದಲ್ಲಿ ದೊಡ್ಡ ಬುದ್ಧಿಯವರ ಬಳಿಗೆ ಬಂದು ತಮ್ಮ ಕುಂದುಕೊರತೆಗಳನ್ನು ಅವರ ಗಮನಕ್ಕೆ ತಂದು ಅವರಿಂದ ಸರಿಪಡಿಸಿಕೊಳ್ಳುತ್ತಿದ್ದರು.

ಸರ್ಕಾರವು ಇವರನ್ನು ವಿಲೇಜ್ ಮುನ್ಸೀಫರನ್ನಾಗಿ ನೇಮಿಸಿತ್ತು. ಆ ಕಾಲದಲ್ಲಿ ಅವರು ನೂರಾರು ನ್ಯಾಯಪಂಚಾಯಿತಿಗಳಲ್ಲಿ ಭಾಗವಹಿಸಿ ಬಡವ - ಬಲ್ಲಿದ , ಮೇಲು - ಕೀಳು ಎಂಬ ಬೇಧವಿಲ್ಲದೆ ತೀರ್ಪು ನೀಡುತ್ತಿದ್ದರು. ಇವರು ದಾನಿಗಳು, ಸಜ್ಜನರು, ಧಾರ್ಮಿಕಾಸಕ್ತರು, ವೈದಿಕಮನೆತನದವರು, ಸಮಾಜಸೇವಕರು. ವಿಲೇಜ್‌ಮುನ್ಸೀಫರೂ ಆಗಿ ಸೇವೆ ಮಾಡಿ ಪ್ರಜಾನುರಾಗಿಗಳಾಗಿ 1961ರಲ್ಲಿ ಕೈಲಾಸವಾಸಿಗಳಾಗಿರುತ್ತಾರೆ. ಇಂತಹವರ ನೆನಪು ಮಾಡಿಕೊಳ್ಳುವುದು ಸಮಂಜಸವಲ್ಲವೆ? ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ಜ್ಞಾಪಕಕ್ಕೆ ತಾರದೇಹೋದರೆ, ಏನನ್ನೋ ಮರೆತಂತಾಗುತ್ತದೆ.

ರಾಜ್ಯಪ್ರಶಸ್ತಿವಿಜೇತರೂ, ಆರಾಧ್ಯಧರ್ಮಸಭಾಟ್ರಸ್ಟ್‌ನ ಅಧ್ಯಕ್ಷರೂ ಆದ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ದಿವಂಗತ ಶ್ರೀ ಆರ್. ಕುಮಾರಾರಾಧ್ಯರ ಸುಪುತ್ರರು. ಇವರಲ್ಲಿಯೂ

ತಂದೆಯ ಗುಣಗಳು ಲೇಪನವಾಗಿರುವುದು ಕಂಡುಬರುತ್ತದೆ. ಇವರು ವಿದ್ಯಾಇಲಾಖೆಯಲ್ಲಿ ಮುತ್ಸದ್ದಿಯಾಗಿ ಕೆಲಸ ನಿರ್ವಹಿಸಿ ಕರ್ನಾಟಕ ಸರ್ಕಾರದಿಂದ ರಾಜ್ಯ ಪ್ರಶಸ್ತಿ ಪಡೆದಿರುತ್ತಾರೆ.

ಇವರು ನಿವೃತ್ತಿಯ ನಂತರ 'ಮುನಿಸಂದೇಶ' ಪತ್ರಿಕೆಯ ಸಂಪಾದಕರಾಗಿ ಕೆಲಸ ನಿರ್ವಹಿಸಿರುತ್ತಾರೆ. 'ಆರಾಧ್ಯಸಂಪದ' ಪತ್ರಿಕೆಯ ಸಂಪಾದಕರಾಗಿ ಕೆಲಸ ನಿರ್ವಹಿಸಿರುತ್ತಾರೆ. 'ಆರಾಧ್ಯಕೈಪಿಡಿ ಅಥವಾ ಆರಾಧ್ಯಡೈರೆಕ್ಟರಿ' ತಯಾರಿಸಲು ತಮ್ಮ ತನು, ಮನ, ಧನವನ್ನು ಅರ್ಪಿಸಿದ್ದಾರೆ. ಸಮಾಜಸೇವೆಯಲ್ಲಿ ನಿರತರಾಗಿದ್ದಾರೆ.

ಇವರು ಸರಳ ಜೀವಿ, ಸ್ನೇಹಮಯಿ. ಸದಾ ಸಮಾಜಸೇವೆಯ ಗುಂಗಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವಂತೆ ಕಾಣುತ್ತದೆ. ಇವರಿಗೆ ಮೈಸೂರು ಪಟ್ಟಣದಲ್ಲಿ ನಿವೃತ್ತಿ ಜೀವನವನ್ನು ಕಳೆಯಲು ಒಂದು ಚಿಕ್ಕ ಚೊಕ್ಕ ಕುಟೀರವನ್ನು ದೇವರು ಕರುಣಿಸಲಿ ಎಂಬುದೇ ನನ್ನ ಹಾರೈಕೆ. ಕೊನೆಯದಾಗಿ ನಾನು ಭಗವಂತನಲ್ಲಿ ಪ್ರಾರ್ಥಿಸುವುದು ಏನೆಂದರೆ ಇವರು ಮತ್ತು ಇವರ ಕುಟುಂಬವರ್ಗಕ್ಕೆ ಆಯುರಾರೋಗ್ಯ, ಐಶ್ವರ್ಯಗಳನ್ನು ಕರುಣಿಸಿ ಇನ್ನೂ ಹೆಚ್ಚಿನ ಜನೋಪಯೋಗಿ ಕೆಲಸ ನಿರ್ವಹಿಸಲು ಚೈತನ್ಯ ನೀಡಲಿ ಎಂದು ಭಗವಂತ ಶ್ರೀ ರೇವಣಸಿದ್ಧೇಶ್ವರ ಸ್ವಾಮಿಯನ್ನು ತುಂಬು ಹೃದಯದಿಂದ ಪ್ರಾರ್ಥಿಸುತ್ತೇನೆ.

* * *

## ಅಧ್ಯಾತ್ಮ

ಆಧ್ಯಾತ್ಮಿಕಶಕ್ತಿಯು ಪರಿಪೂರ್ಣವ್ಯಕ್ತಿತ್ವದ ಅಂಶವಾಗಿರುತ್ತದೆ. ನಮ್ಮನ್ನು ನಾವು ಆತ್ಮ ಎಂದು ತಿಳಿದು ಆತ್ಮಭಾವದಲ್ಲಿದ್ದರೆ ಆಗ ನಾವು ಅಧ್ಯಾತ್ಮಿಗಳೆಂದೆನಿಸಿಕೊಳ್ಳುತ್ತೇವೆ.

ನಮ್ಮ ಮೂಲಸ್ವರೂಪವೇ ಆತ್ಮ. ಆ ಆತ್ಮವೇ ಸರ್ವಶಕ್ತಿ. ಆ ಶಕ್ತಿಯೇ ಪ್ರಣವಸ್ವರೂಪಿ. ಭಗವಂತನನ್ನು ಅರಿಯುವಿಕೆಯೇ ಅಧ್ಯಾತ್ಮ. " *ಆ ಓಂಕಾರ ಸ್ವರೂಪಿ ಆತ್ಮ ವೇ ನಾನು*", ಎಂಬ ಸತ್ಯವನ್ನು ಅನುಭವಕ್ಕೆ ತಂದುಕೊಂಡಾಗಲೇ ನಾವು ನಿಜವಾದ ಅರ್ಥದಲ್ಲಿ ಶಕ್ತಿವಂತರಾಗುವುದು. ವಿಕಾಸಗೊಂಡ ಶರೀರಶಕ್ತಿ ಅದ್ಭುತವಾಗುವುದು. ಇದನ್ನು ಮೀರಿಸಿದ್ದು ಬುದ್ಧಿಶಕ್ತಿ. ಇದರ ವರ್ಚಸ್ಸನ್ನು ನೈತಿಕ ಶಕ್ತಿಯಲ್ಲಿ ಕಾಣಬಹುದು. ಈ ಮೇಲಿನ ಐದು ಶಕ್ತಿಗಳ ಮೂಲ ಆಧ್ಯಾತ್ಮಿಕಶಕ್ತಿ ಬೆಳಗುತ್ತದೆ. ಇದರ ಬೆಳಕಿನಲ್ಲಿ ವಿಶ್ವವ್ಯಾಪಿ ಭಗವಂತನನ್ನು ಅರಿಯಬಹುದು.



# ಕರ್ತವ್ಯಪಾಲನೆ

ಭಗವದ್ಗೀತೆ ಮತ್ತು ವಚನಗಳನ್ನು ಓದಿದವರು ಬಹಳ ಜನರಿದ್ದಾರೆ. "ಓಹೋ!ನಾನೂ ಅದನ್ನೆಲ್ಲಾ ಓದಿದ್ದೇನೆ"ಎಂದು ಅನೇಕರ ಬಾಯಿಂದ ಕೇಳಿದ್ದೇವೆ. ಅದರಂತೆ ಪಾಲಿಸಿ ನಡೆಯುತ್ತಿರುವವರು ಸಾವಿರಕ್ಕೆ ಒಬ್ಬರು ದೊರೆಯಬಹುದು ಎನ್ನುವುದು ಸಂಶಯ. ಪಾಲಿಸಿ ನಡೆಯುತ್ತಿರುವವರು ನಿಜವಾಗಿಯೂ ಗೌರವಾನ್ವಿತರು. ಪ್ರತಿಷ್ಠೆಗೆ ಕಾಯುವುದೇ ಇಲ್ಲ. ಕರ್ತವ್ಯಪಾಲನೆಯೇ ಇವರ ಗುರಿ. ಈ ವಿಷಯ ಬಹುವಿಧವಾಗಿ ವಿವರಿಸಬಹುದು. ಸಕ್ಕರೆ ಇದ್ದಲ್ಲಿ ಇರುವೆಗಳು ಬರುತ್ತವೆ. ಆದರೆ ಇರುವೆಗಳಿದ್ದಲ್ಲಿ ಸಕ್ಕರೆ ಹೋಗುವುದಿಲ್ಲ. ಆದಕ್ಕಾಗಿ ಸತ್ಸಂಗ ಅವಶ್ಯ. ಸತ್ಸಂಗದಲ್ಲಿ ಬೋಧಕ ಮಾತುಗಳೇ ಇರುತ್ತವೆ. ಅರಿತುಕೊಳ್ಳಬೇಕಷ್ಟೆ. ಆಗಲೇ ನಿಜಜ್ಞಾನೋದಯ.

"ನಿಂದಕನಿಯರೇ ರಾಖಿಯೇ ಅಂಗನೀ ಕುಟಿ ಚವಾಯ್‌ನ ಸಾಬೂನ ಜಿನಾ ನಿರ್ಮಲ ಹೋಯ್ ಸುಬಾಯ್" ಎಂದು ಕಬೀರದಾಸರು ಹೇಳಿದರೆ "ನಿಂದಕನ ಮನೆ ಅಂಗಳದಲ್ಲಿ ಇರಬೇಕು"ಎಂದು ಬಸವಣ್ಣನವರು ಹೇಳಿದ್ದಾರೆ.

ಪ್ರತಿನಿತ್ಯ ಇನ್ನೊಬ್ಬರನ್ನು ನಿಂದಿಸುವುದೆ ಕೆಲವರ ಗುಣವಾಗಿದೆ. ಅಂದರೆ ಅಸೂಯೆಯೂ ಇರಬಹುದು. ಯಾಕೆ ಹೀಗೆ ಎಂದು ನಾವು ನಮ್ಮೊಳಗೆ ಕೊರಗುತ್ತಿರಬಹುದು. ಚಂಚಲ ಮನಸ್ಸಿಗೆ ಅವಕಾಶವೀಯದೆ ಅಂದರೆ ನಾವು ಅವರ ಮಾತಿಗೆ ಗಮನ ಹರಿಸದೆ ಮರುಮಾತನಾಡದೆ ಸ್ನೇಹದೃಷ್ಟಿಯನ್ನೆ ಬೀರುತ್ತ ನಡೆದರೆ ಅಂತಹ ಅಸೂಯಾವಾದಿಗಳಿಗೆ ಸೋಲು. ಅದು ಹೇಗೆ ಎನ್ನಬಹುದು. ಇಷ್ಟೊಂದು ಧಿಕ್ಕಾರ ತೋರಿದರೂ ಅವನು ಏನೂ ಬೇಸರ ಪಡಲಿಲ್ಲವಲ್ಲ! ಎಂದಿನಂತೆ ಮುಂದುವರಿದು ಸುಧಾರಿಸಿಕೊಂಡು ಇರುತ್ತಾನಲ್ಲ! ಎನ್ನುತ್ತ ಎಚ್ಚರಗೊಂಡಾಗ ತಾನೇ ಸೋತೆನೆಂದು ತಣ್ಣಗಾಗುತ್ತಾನೆ.

- **ಎಚ್. ಸೀತಾರಾಮರಾವ್**
ಪತ್ರಿಕಾ ವರದಿಗಾರರು
ಪಿ. ವಿ. ಎಸ್. ಹೌಸ್
ಅರ್ಬನ್ ಕೋ ಆಪರೇಟಿವ್
ಬ್ಯಾಂಕ್ ಹಿಂಭಾಗ, ಕಾಕರ್‌ಮಠ್
ಅಂಕೋಲ - 581 314
ಉತ್ತರ ಕನ್ನಡ ಜಿಲ್ಲೆ

ಇನ್ನೊಬ್ಬರು ನಮ್ಮನ್ನು ಅಂದರೆ ನಮ್ಮ ಪ್ರಗತಿಯನ್ನು ಕಂಡು ಅಸೂಯೆಪಡಬಹುದು. ನಿಂದಿಸುತ್ತಲೇ ಇರಬಹುದು.

ಆಗ ನಾವು ನಿಂದಿಸಲು ಕಾರಣವೇನೆನ್ನುವುದನ್ನು ನಮಗೆ ನಾವೇ ಕಂಡುಹಿಡಿದು ನಾವೆಲ್ಲಿ ತಪ್ಪುತ್ತಿದ್ದೇವೆ. ಎಂಬುದನ್ನು ಅರಿತು, ಅದನ್ನು ತಿದ್ದಿಕೊಂಡು ಮುಂದುವರಿಯಲು ಪ್ರಯತ್ನಿಸಬೇಕು. ಮಹಾತ್ಮರ ನುಡಿಯಂತೆ ಸಾಬೂನು ಇಲ್ಲದೆ ನಮ್ಮ ದೇಹದ ಕೊಳೆ ಸ್ವಚ್ಛ. ಅಂದರೆ ನಮ್ಮ ಮನಸ್ಸು ಶುದ್ಧವಾಗುವುದು.

ಗೀತೋಪದೇಶ ಅರ್ಜುನನಿಗೆ ಆಯಿತು. ಆ ಸಂದರ್ಭ ಹಾಗಿತ್ತು. ಆ ಉಪದೇಶ ನಮಗೂ ಅನ್ವಯವಾಗುತ್ತದೆ ಎಂದು ನಾವು ತಿಳಿಯಬೇಕು. ಆಳವಾಗಿ ಅರ್ಥ ಮಾಡಿಕೊಳ್ಳಬೇಕು.

"ಎಲೈ ಅರ್ಜುನ, ಸಕಲ ಶಸ್ತ್ರಾಸ್ತ್ರವಿದ್ಯಾಪಾರಂಗತ ನೀನು. ನಿನಗೆ ಸೋಲೇ ಇಲ್ಲ. ನಿನಗೂ ಅರಿವಿದೆ. ಈಗ ನೀನು ನಿಂತಿರುವ ಕ್ಷೇತ್ರ ಯಾವುದು? ಕುರುಕ್ಷೇತ್ರ. ಅಂದರೆ ಯುದ್ಧಕ್ಷೇತ್ರ. ರಣರಂಗ. ನೀನು ಇಲ್ಲಿಗೆ ಬಂದದ್ದು ಯುದ್ಧಕ್ಕಾಗಿ. ಯುದ್ಧದಲ್ಲಿ ಜಯಿಸುವುದಕ್ಕಾಗಿ. ಅದನ್ನು ಬಿಟ್ಟು ನನ್ನವರು, ಹಿರಿಯರು, ಗುರುಗಳು, ಬಂಧುಬಾಂಧವರು ಎನ್ನುವ ಮಾಯೆಯ ಬಲೆಯಲ್ಲಿ ಸಿಲುಕಿರುವೆ. ಭ್ರಾಂತನಾಗಿರುವೆ . ಆದರೆ ಎದುರಾಳಿಗಳು ಯುದ್ಧಕ್ಕೆ ಸನ್ನದ್ಧರಾಗಿ ನಿಂತಿದ್ದಾರೆ. ಪರಾಕ್ರಮಿಯಾದ ನಿನ್ನನ್ನು ಸೋಲಿಸಿ ಜಯಿಸುವುದೇ ಅವರ ಗುರಿಯಾಗಿದೆ. ನೀನು ತಿಳಿದಂತೆ ಸದ್ಭಾವನೆ ಅವರಲ್ಲಿದೆಯೇ? ಇಲ್ಲವೇ ಇಲ್ಲ.

ಅರ್ಜುನ! ಇಲ್ಲಿಯವರೆಗೆ ನಿನ್ನೊಡನೆ ನಾನಿದ್ದರೂ ನನ್ನನ್ನು ನೀನು ಸಂಪೂರ್ಣ ಅರಿತುಕೊಳ್ಳಲಾಗಲಿಲ್ಲ. "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ........" ಎನ್ನುವುದರೊಂದಿಗೆ ತನ್ನ ದಿವ್ಯದೃಷ್ಟಿಯನ್ನು ಬೀರಿ ತನ್ನ ಅವತಾರಗಳ ಮಹಿಮೆಯನ್ನು ಶ್ರೀಕೃಷ್ಣಪರಮಾತ್ಮ ತೋರಿಸಿದಾಗ ಶರಣಾಗತನಾದ ಅರ್ಜುನ ಎಚ್ಚರಗೊಂಡು ಕರ್ತವ್ಯಪಾಲನೆಗಾಗಿ ಸನ್ನದ್ಧನಾಗುತ್ತಾನೆ.

ಅರ್ಜುನ, "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ನೀನು ಮಾಡುವುದು ಯುದ್ಧಮಾತ್ರ. ಮುಂದಿನ ಆಗುಹೋಗುಗಳನ್ನು ನೋಡಿಕೊಳ್ಳುವವನು ನಾನು" ಎನ್ನುತ್ತಾನೆ ಶ್ರೀಕೃಷ್ಣ.

ಕೆಲವರು ಉದ್ಯೋಗ ವ್ಯವಹಾರಗಳಲ್ಲಿ, ಕೆಲವರು ನೌಕರಿ ಜೀವನದಲ್ಲಿ, ಅಧಿಕಾರದಲ್ಲಿ, ಭೂಮಿ, ಹೊಲ, ತೋಟ ಮುಂತಾದವುಗಳಲ್ಲಿ ನಿರತರಾಗಿರುತ್ತಾರೆ.ಅದಕ್ಕೆ ನಿಷ್ಠೆ ಬೇಕು. ಸುಧಾರಿಸಿ ಪ್ರಗತಿ ಹೊಂದುವ ಗುರಿ ಇರಬೇಕು. ಅದೇ ಕರ್ತವ್ಯಪಾಲನೆ. ಆಗಲೇ ದೈವೀಕೃಪೆ ಉಂಟಾಗುತ್ತದೆ. ಗೆಲುವಾಗುತ್ತದೆ. ಗೌರವಾದರಗಳು ತಾನಾಗಿಯೇ ಬರುತ್ತಿರುತ್ತವೆ.



# ಕರ್ನಾಟಕ ರತ್ನ

ಶ್ರೀ ಆರ್. ಕುಮಾರಾರಾಧ್ಯರು ಬಹುಮುಖಿ ವ್ಯಕ್ತಿತ್ವವುಳ್ಳವರು. ಬಡವರ, ದುರ್ಬಲರ, ನೊಂದವರ ಅಭಿವೃದ್ಧಿಗೆ ಅನವರತ ದುಡಿದವರು. ದಾನದಲ್ಲಿ, ಸತ್ಯದ ನಡೆ ನುಡಿಯಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವರು. ಜನ ಸೇವೆಗೆ ವೃತ್ತಿ ಯಾವುದಾದರೇನು ? ಇದ್ದ ವೃತ್ತಿಯಲ್ಲಿಯೆ ಜನಪರ ಆಶಯಗಳನ್ನು ಪೂರೈಸಿದ ಸಮಾಜಮುಖಿ ವ್ಯಕ್ತಿತ್ವವುಳ್ಳವರು ಶ್ರೀ ಕುಮಾರಾರಾಧ್ಯರು.

ಬಾಲ್ಯದಿಂದಲೆ ರಾಷ್ಟ್ರೀಯತೆ ಮತ್ತು ಸಮಾಜದ ಸೇವೆಯನ್ನು ಮೈಗೂಡಿಸಿಕೊಂಡು ಬಂದವರು. ಇವರಿಗೆ ಭಾರತ-ಕರ್ನಾಟಕ ಬೇರೆ ಬೇರೆ ಅಲ್ಲ. ಬಿಂಗಡಿಸಲು ಬಾರದಂತೆ ಅವೆರಡು ಒಂದರೊಳಗೊಂದು ಸೇರಿಕೊಂಡಿವೆ ಎನ್ನುತ್ತಾರೆ. ರಾಷ್ಟ್ರಕವಿ ಕುವೆಂಪು ಹೇಳುವಂತೆ ಕರ್ನಾಟಕವು ಭಾರತ ಜನನಿಯ ತನುಜಾತೆ. ಕವಿಯ ಆಶಯಕ್ಕೆ ಅನುಗುಣವಾದ ಆರಾಧ್ಯರ ನಿಲುವು ಕೂಡ ಸ್ಪಷ್ಟವಾಗಿದೆ.

'ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ' ಎಂದು ಬಸವಣ್ಣನವರು ಭಗವಂತನನ್ನು ಸಾಕ್ಷಾತ್ಕರಿಸಿಕೊಂಡರು. ಶರಣರ, ಸಂತರ, ಹಿರಿಯರ, ಆದರ್ಶವನ್ನು ಕುಮಾರಾರಾಧ್ಯರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು, ಅಧ್ಯಾತ್ಮದಲ್ಲಿಯೇ ಎಲ್ಲವನ್ನು ಕಂಡು ತೃಪ್ತ ಜೀವನ ನಡೆಸಿದವರು. ತಾವು ಜನಿಸಿದ ಊರಿನಲ್ಲಿಯೇ ಭವ್ಯ ಭಾರತದ ಕನಸನ್ನು ಕಂಡವರು. ತಮ್ಮ ಸುತ್ತಮುತ್ತಲಿನ ಗ್ರಾಮದ ಜನತೆಯ ಸಮಸ್ಯೆಗಳನ್ನು ಬಗೆಹರಿಸುವುದರ ಮೂಲಕ, ಗಾಂಧೀಜಿಯವರ ಆದರ್ಶಗ್ರಾಮ ಪರಿಕಲ್ಪನೆಯನ್ನು ಜನಸಮುದಾಯಕ್ಕೆ ಪರಿಚಯಿಸಿದ ಮಾನವೀಯ ಮಹಾಮೇರು ಆರ್. ಕುಮಾರಾರಾಧ್ಯರು. ಒಳ್ಳೆಯ ವಾಗ್ಮಿಗಳು, ಲೇಖಕರು, ಸತ್ಯಪರನ್ಯಾಯವಾದಿಗಳು, ಜನಾನುರಾಗಿಗಳು ಹಾಗೂ ಅಧಿಕಾರದಾಹವಿಲ್ಲದ ವಿಧಾಯಕ ಕಾರ್ಯಕರ್ತರು.



**- ಡಾ. ಎಸ್. ಶಿವರಾಜಪ್ಪ**
ಪ್ರಾಧ್ಯಾಪಕ ಮತ್ತು
ಗೌರವ ನಿರ್ದೇಶಕರು
ಗಾಂಧಿ ಅಧ್ಯಯನ ಸಂಸ್ಥೆ
ಗಾಂಧಿ ಭವನ,
ಮಾನಸ ಗಂಗೋತ್ರಿ,
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು.

ತಮ್ಮ ಮನೆಯನ್ನು ವಿದ್ಯಾರ್ಥಿನಿಲಯವನ್ನಾಗಿ ಮಾಡಿ, ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದ ಕರುಣಾಮಯಿ ಇವರು. ಹಿಂದುಳಿದ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಗಲು ಸ್ಥಳದಾನ ಮಾಡುವುದು, ಶಿಥಿಲಗೊಂಡ ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡುವುದು ಮುಂತಾದ ಹತ್ತಾರು ಜನಪರ ಕಾರ್ಯಕ್ರಮಗಳಿಗೆ ಉದಾರವಾಗಿ ದಾನಗೈದ ಕೀರ್ತಿ ಶ್ರೀಯುತರದು.

ಆರ್. ಕುಮಾರಾರಾಧ್ಯರು ನಡೆ ನುಡಿಯಿಂದಲೇ ದೊಡ್ಡವರಾದುದರಿಂದ ಅವರ ಬಗ್ಗೆ ಹೆಚ್ಚು ಹೇಳಿ ದೊಡ್ಡವರನ್ನಾಗಿ ಮಾಡಬೇಕಾದ ಅವಶ್ಯಕತೆ ಇಲ್ಲ. ಸಮಾಜದ ನಿರ್ಲಕ್ಷ್ಯಕ್ಕೆ ಗುರಿಯಾಗಿ ಅಸಹಾಯಕರಾಗಿದ್ದವರನ್ನು ತಮ್ಮ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ಆರಾಧ್ಯರು ಈಗ ನಮ್ಮ ಕಣ್ಮುಂದೆ ಇಲ್ಲ. ನಿಜ, ಆದರೆ ಅವರ ಆದರ್ಶ ಬದುಕು, ತ್ಯಾಗ, ತೃಪ್ತ ಜೀವನ ನಮ್ಮಂತಹ ಸಹಸ್ರ ಸಹಸ್ರಾರು ಜನಮಾನಸದಲ್ಲಿ ಅಚ್ಚಳಿಯದೆ ಉಳಿದಿದೆ. ಕೃತಜ್ಞಜನರ ಮನಸ್ಸಿನಲ್ಲಿ ಅವರು ನಿಜವಾದ ಕರ್ನಾಟಕದ ರತ್ನರೇ ಆಗಿದ್ದಾರೆ.



## ಕೋಪ ಮತ್ತು ಅಸೂಯೆ

ಮನುಷ್ಯನಿಗೆ ಕೋಪ ಎಂಬುದು ದೊಡ್ಡ ದುರ್ಗುಣ. ಅತ್ಯಂತ ಅಪಾಯಕಾರಿಯಾದಂಥದ್ದು, ವಿನಾಶಕಾರಿಯಾದದ್ದು. ತಪಸ್ಸು, ಸಾಧನೆ ಹಾದಿಯಲ್ಲಿ ಕ್ರೋಧಕ್ಕಿಂತ ದೊಡ್ಡ ಅಡಚಣೆ ಮತ್ತೊಂದಿಲ್ಲ. ಇದನ್ನು ಮೊದಲು ಗೆಲ್ಲಬೇಕು. ಇದನ್ನು ಮೆಟ್ಟಿನಿಲ್ಲುವಂಥ ಸದ್ಗುಣವನ್ನು ಸಂಪಾದಿಸಬೇಕು. ಕೋಪ ನಿಯಂತ್ರಿಸುವುದು ಸುಲಭಸಾಧ್ಯವಲ್ಲ. ಮನುಷ್ಯನಾಗಿ ಹುಟ್ಟಿದವನಿಗೆ ಇಚ್ಛಾ ಶಕ್ತಿಯೊಂದಿದ್ದಲ್ಲಿ ಯಾವುದೂ ಅಸಾಧ್ಯವಲ್ಲ. ಈ ವಿದ್ಯೆ ಗಳಿಸಲು ಸಜ್ಜನರ ಸಹವಾಸ, ಧ್ಯಾನ, ಚಿಂತನ, ಮನನ, ಸತ್ಸಂಗ ಇತ್ಯಾದಿ ಸಾಧನಮಾರ್ಗಗಳುಂಟು. ಈ ಸಾಧನಗಳನ್ನು ಅವಲಂಬಿಸಿ ಕೋಪ ಗೆಲ್ಲುವುದು ಎಲ್ಲರಿಗೂ ಅನಿವಾರ್ಯ. ಕೋಪವನ್ನು ಗೆದ್ದವನು ಯೋಗಿಯಾಗಬಲ್ಲ, ಸಾಧಕನಾಗಬಲ್ಲ, ತಪಸ್ವಿಯಾಗಬಲ್ಲ, ಯಶಸ್ವಿಯಾಗಬಲ್ಲ. ಆತ ತನ್ನ ಜೀವಿತವನ್ನು ಸಾರ್ಥಕಪಡಿಸಿಕೊಳ್ಳಬಲ್ಲ.

ಮನುಷ್ಯನಲ್ಲಿ ಅಸೂಯೆ, ಮತ್ಸರ ಮತ್ತು ಹೊಟ್ಟೆಕಿಚ್ಚಿಗೆ ಆಸ್ಪದ ಕೊಡಬಾರದು. ಕೊಟ್ಟವನನ್ನು ಇವು ಆಕ್ರಮಿಸಿ ತುಳಿದು, ಬೆಳೆದು ಹೆಮ್ಮರವಾಗಿ ರಾಕ್ಷಸನನ್ನಾಗಿ ಮಾರ್ಪಡಿಸುತ್ತವೆ. ಅಂತಹವನನ್ನೇ ನಾವು ರಾಕ್ಷಸನೆಂದಿದ್ದೇವೆ.

# ಧರ್ಮಭೀರು

ಸನಾತನಧರ್ಮಾವಲಂಬಿಗಳಾದ "ಆರಾಧ್ಯ"-ವರ್ಗದವರು ಅಪ್ಪಟ ಶೈವಬ್ರಾಹ್ಮಣರು. ಯಜ್ಞೋಪವೀತ ಮತ್ತು ಇಷ್ಟಲಿಂಗಧಾರಿಗಳಾಗಿ, ವೈದಿಕಮಾರ್ಗಾವಲಂಬಿಗಳಾಗಿ ಬಾಳುತ್ತಿದ್ದಾರೆ. ಆರಾಧನೀಯರು. ಅಂದರೆ ಸಕಲ ವರ್ಗದವರಿಂದಲೂ ಗೌರವಾದರಗಳಿಗೆ ಪಾತ್ರರಾದವರು. ಭಗವಂತನನ್ನು ಆರಾಧಿಸುವುದರಲ್ಲಿ ಸಮರ್ಥರು. ಕಾಲದಲ್ಲಿ ಬಸವಣ್ಣನವರಿಗಿಂತಲೂ ಪ್ರಾಚೀನರು. ಆದಿಶಂಕರಾಚಾರ್ಯರ ಸಮಕಾಲದವರು. ಸಾತ್ತ್ವಿಕಗುಣಸಂಪನ್ನರು. ಶೈವಧರ್ಮಾಚರಣೆಯ ಶುದ್ಧಶಿವಾರಾಧಕರು ಈ ಆರಾಧ್ಯರು. ದೈವಸಂಪನ್ನರು. ಅಲ್ಪಸಂಖ್ಯಾತರು.

ಇಂತಹ ಶ್ರೇಷ್ಠಸತ್ಪರಂಪರೆಯ ಕುಲಗೌರವಕ್ಕೆ ಭಾಜನರಾದವರೇ ಕೈವಲ್ಯಶ್ರೀ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು. ಜಿನ್ನಹಳ್ಳಿ ಮೈಸೂರು ಜಿಲ್ಲೆಯ, ಹೆಗ್ಗಡದೇವನಕೋಟೆ ತಾಲ್ಲೂಕಿನ ಒಂದು ಕುಗ್ರಾಮ. ಅನಕ್ಷರಸ್ಥ ಮುಗ್ಧ ಜನರೇ ತುಂಬಿಹೋಗಿದ್ದ ಆ ಗ್ರಾಮದಲ್ಲಿ ಈ ಆರಾಧ್ಯರ ಕುಟುಂಬವೇ ಸಕಲ ಕಲ್ಯಾಣಕರಕಾರ್ಯಗಳಿಗೂ ಆಧಾರವಾಗಿತ್ತು. ಅದಕ್ಕೆ ತಕ್ಕಂತೆ ಈ ಕುಟುಂಬದ ಹಿರಿಯರಾದ ವೇ.ಬ್ರಂ. ಶ್ರೀ. ಆರ್. ಕುಮಾರಾರಾಧ್ಯರು "*ವಸುಧೈವ ಕುಟುಂಬಕಮ್*" ಎಂಬ ತತ್ತ್ವಕ್ಕೆ ಬದ್ಧರಾಗಿದ್ದರು. ಜಾತಿ ಮತ ಬೇಧ ಭಾವ ಇವರ ಹತ್ತಿರಕ್ಕೆ ಸುಳಿಯುತ್ತಿರಲಿಲ್ಲ. ಎಲ್ಲರನ್ನು ಸಮಭಾವದಿಂದ ಕಂಡು ಅವರ ನೋವುಗಳಿಗೆ, ದುಃಖಗಳಿಗೆ, ಸಂಕಷ್ಟಗಳಿಗೆ ಶೀಘ್ರವಾಗಿ ಸ್ಪಂದಿಸುತ್ತ ಸಕಲರಿಗೂ ಲೇಸನ್ನೆ ಬಯಸುತ್ತ ಬಾಳಿದ ಧರ್ಮಭೀರುಗಳು. ಸಮರಸಭಾವದ ಈ ಆರಾಧ್ಯರ ಕುಟುಂಬದ ಬಗ್ಗೆ ಇಡೀ ಗ್ರಾಮವಲ್ಲದೆ, ಸುತ್ತಮುತ್ತಲ ಗ್ರಾಮಗಳಲ್ಲೂ ತುಂಬುಹೃದಯದ ಗೌರವ ಭಾವ ಮನೆಮಾಡಿತ್ತು.

ದಿವಂಗತ ಶ್ರೀ ಕುಮಾರಾರಾಧ್ಯರ ಮನೆತನದವರು ಮೂಲತಃ ಆಂಧ್ರ ನೆಲೆಯವರು. ಬಹಳ ವರ್ಷಗಳ ಹಿಂದೆಯೇ



- ವಿದ್ವಾನ್
**ಶ್ರೀನಿವಾಸಮೂರ್ತಿ**
ಪ್ರಾಧ್ಯಾಪಕರು
ಮಹಾರಾಜ ಸಂಸ್ಕೃತ ಪಾಠಶಾಲೆ
ಮೈಸೂರು.
ದೂ. 9844424325

ವಲಸೆ ಬಂದು ಬುಡಕಟ್ಟು ಜನಾಂಗದವರೇ ಅಧಿಕವಾಗಿದ್ದ ಈ ಹೆಗ್ಗಡದೇವನಕೋಟೆ ಪ್ರಾಂತ್ಯದಲ್ಲಿ ನೆಲೆಸಿದರು. ಇದರಲ್ಲಿ ವಿಶೇಷ ಅರ್ಥವೂ ಅಡಗಿತ್ತು. ಸಾಂಸ್ಕೃತಿಕವಾಗಿ ಉತ್ತಮವಾಗಿದ್ದ ಈ ಕುಟುಂಬ ಯಾವುದಾದರೂ ಸಮೃದ್ಧವಾದ ನಗರದಲ್ಲಿ ನೆಲೆಸಬಹುದಿತ್ತು. ಆದರೆ ಅತ್ಯಂತ ಹಿಂದುಳಿದ ಪ್ರಾಂತ್ಯದಲ್ಲಿ ನೆಲೆಸಿದರೆ ಅಲ್ಲಿನ ಜನರಿಗೆ ಕಿಂಚಿತ್ತಾದರೂ ಸೇವೆ ಮಾಡಬಹುದೆಂಬ ಆಸೆಯೇ ಇವಕ್ಕೆ ಕಾರಣವಾಗಿತ್ತು. ಈ ಕುಟುಂಬ ಇಲ್ಲಿ ನೆಲೆಸಿದಲಾಗಾಯ್ತುಇಲ್ಲಿನ ಜನರ ಏಳಿಗೆಗೆ ಶ್ರಮಿಸತೊಡಗಿತು. ಜನರ ಧಾರ್ಮಿಕ ಪುರೋಭಿವೃದ್ಧಿಯಲ್ಲಿ ತಮ್ಮ ಸಮಯವನ್ನು ಮುಡಿಪಾಗಿಟ್ಟಿತು. ಇದರಿಂದ ಈ ಕುಟುಂಬಕ್ಕೆ ಅಪಾರ ಜನಮನ್ನಣೆ ದೊರಕಿತು.

ಇದೇ ಸತ್ಪರಂಪರೆಯನ್ನು ಶ್ರೀ ಕುಮಾರಾರಾಧ್ಯರು ಮುಂದುವರಿಸಿದರು. ತಮ್ಮ ಶ್ರೇಷ್ಠ ಆಚಾರ - ವಿಚಾರ - ನೇಮ - ನಿಷ್ಠೆ, ಸದಾಚಾರ - ಸಂಪನ್ನತೆಗಳಿಂದ ಈ ಪ್ರಾಂತ್ಯದ ಜನತೆಯ ಅಪೂರ್ವ ಗೌರವವನ್ನು ಸಂಪಾದಿಸಿಕೊಂಡರು. ತಮ್ಮ ನಿಷ್ಕಲ್ಮಶವಾದ ಸೇವಾ ಮನೋಭಾವದಿಂದ ಅಯಸ್ಕಾಂತದಂತೆ ಜನರ ಮನಸ್ಸನ್ನು ಆಕರ್ಷಿಸಿಕೊಂಡರು. ಶಿವಾದ್ವೈತಸಿದ್ಧಾಂತದ ಪರಮಾಚಾರ್ಯರೆಂಬ ಗೌರವಕ್ಕೆ ಪಾತ್ರರಾದರು. ಅಂದಿನ ಅರಸರ ವಂಶಕ್ಕೆ ಗುರುಗಳಾಗಿಯೂ ಸಮರ್ಥಮಾರ್ಗದರ್ಶನ ಮಾಡಿದ ಹೆಗ್ಗಳಿಕೆಯೂ ಇವರಿಗೆ ಲಭಿಸಿತ್ತು. ಪರಮವೈದಿಕರಾಗಿದ್ದ ಇವರು ಶ್ರೀ ಸೋಸಲೆ ಗುರುಮಠದ ವಂಶಸ್ಥರೂ ಆಗಿದ್ದುದು ಇವರ ಆತ್ಮಗೌರವಕ್ಕೆ ಇಂಬು ನೀಡಿತ್ತು.

ಪೂಜ್ಯಶ್ರೀ ಕುಮಾರಾರಾಧ್ಯರ ಪಿತೃಶ್ರೀಯವರು ವೇ. ಬ್ರಂ. ಶ್ರೀ. ರೇವಣಾರಾಧ್ಯರು ಸಹಜವಾದ ದೈವಭಕ್ತಿ, ಗುರುಶ್ರದ್ಧೆ, ಧರ್ಮಬುದ್ಧಿ, ಪರೋಪಕಾರಸ್ವಭಾವವುಳ್ಳವರಾಗಿದ್ದರು. ಮಾತೃಶ್ರೀಯವರು ಶ್ರೀಮತಿ ಬಸವಾಜಮ್ಮನವರು. ಈ ಆಚಾರ್ಯ ದಂಪತಿಗಳ ಮೂರನೆಯ ಸುಪುತ್ರರೇ ಶ್ರೀ ಕುಮಾರಾರಾಧ್ಯರು. ಬಾಲ್ಯದಿಂದಲೂ ಶಿವಾರಾಧನೆಯಲ್ಲಿ ನಿರತರು. ಸಂಸ್ಕೃತ, ವೇದ, ಜ್ಯೋತಿಷ್ಯ, ಆಯುರ್ವೇದ ಮುಂತಾದ ಸನಾತನವಿದ್ಯೆಗಳಲ್ಲಿ ಪಾರಂಗತರಾಗಿ ಅಪಾರ ಸಿದ್ಧಿಯನ್ನು ಸಂಪಾದಿಸಿಕೊಂಡಿದ್ದ ಪರಮಸಾಧಕರು. ನಿರಕ್ಷರಕುಕ್ಷಿಗಳಾಗಿದ್ದ ತಮ್ಮ ಗ್ರಾಮ ಹಾಗೂ ಸುತ್ತಮುತ್ತಲಿನ ಗ್ರಾಮಸ್ಥರಲ್ಲಿ *"ಅಕ್ಷರದಾಸೋಹ"* ವನ್ನು ಯಶಸ್ವಿಯಾಗಿ ಕೈಗೊಂಡವರು. ಭೂಮಿತಾಯಿಯ ಸೇವೆಯಲ್ಲಿ ಅಪಾರ ಕಾಳಜಿ ಹೊಂದಿದವರು.ಜನರ ಸಂಕಷ್ಟಗಳಿಗೆ ಶೀಘ್ರವಾಗಿ ಸ್ಪಂದಿಸುತ್ತಿದ್ದರು. ಪಂಚಾಯಿತಿ ನ್ಯಾಯಗಳನ್ನುಸಮರ್ಪಕವಾಗಿ ಒದಗಿಸುತ್ತಿದ್ದರು. ಯಾರ ಮನಸ್ಸಿಗೂ ನೋವನ್ನುಂಟುಮಾಡುತ್ತಿರಲಿಲ್ಲ. ಜೊತೆಗೆ ಉತ್ತಮ ಪತ್ರಬರಹಗಾರರೂ ಆಗಿದ್ದರು. ಪರಮ ಆಸ್ತಿಕರಾಗಿದ್ದರು. ದೈವಭಕ್ತರಾಗಿದ್ದರು. ವಿದ್ವಜ್ಜನರಲ್ಲಿ ಅಪಾರಪ್ರೀತಿ ಗೌರವಭಾವ ಹೊಂದಿದ್ದರು. ಸದಾ ಸ್ನೇಹಜೀವಿಗಳಾಗಿದ್ದರು. ಪ್ರಾಣಿದಯಾಪರರಾಗಿದ್ದರು. ತಾವು ಕಷ್ಟಪಟ್ಟು ಸಂಪಾದಿಸಿದ್ದರಲ್ಲಿ ಅರ್ಧದಷ್ಟನ್ನಾದರೂ ಆರ್ತರಿಗೆ ನೀಡಿ ಪುನೀತಭಾವರಾಗುತ್ತಿದ್ದರು. ಅವರಿಗೆ ತತ್ತ್ವ ಚಿಂತನೆಗಳಲ್ಲಿ ಅಪಾರ ಕಾಳಜಿ ಇತ್ತು. ತಾವು ಶಾಸ್ತ್ರಾರ್ಥದಲ್ಲಿ ಗಳಿಸಿದ ಜ್ಞಾನವನ್ನು ಪ್ರಯೋಗದಲ್ಲಿ ಅಳವಡಿಸುತ್ತಿದ್ದರು.

ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ |
ಯೋ ನ ದದಾತಿ ನ ಭುಂಕ್ತೆ ತಸ್ಯ ತೃತೀಯಾಗತಿರ್ಭವತಿ||

ಅಂದರೆ "ಯಾರೇ ಆಗಲಿ ತಾವು ಗಳಿಸಿದ ಸಂಪತ್ತಿಗೆ ದಾನ ಮಾಡುವಿಕೆ, ಸ್ವಯಂ ಅನುಭವಿಸುವಿಕೆ ಹಾಗೂ ನಾಶವಾಗುವಿಕೆ ಎಂಬ ಮೂರು ಅವಸ್ಥೆಗಳಿರುತ್ತವೆ. ಯಾರು ತನ್ನ ಸಂಪತ್ತನ್ನು ದಾನ ಮಾಡದೆ, ತಾನೂ ಅನುಭವಿಸದೇ ಕೂಡಿಡುತ್ತಾರೋ ಅಂತಹವರ ಸಂಪತ್ತು ಕಳ್ಳಕಾಕರ ಪಾಲಾಗುತ್ತದೆ" ಎಂಬ ನುಡಿಗಟ್ಟಿನ ಮರ್ಮವನ್ನು ಚೆನ್ನಾಗಿ ಅರಿತಿದ್ದ ಶ್ರೀ ಕುಮಾರಾರಾಧ್ಯರು ತಮ್ಮ ಬಳಿಗೆ 'ದೇಹಿ' ಎಂದು ಬಂದವರಿಗೆ ಎಂದೂ ಬರಿಗೈಯಲ್ಲಿ ಕಳುಹಿಸುತ್ತಿರಲಿಲ್ಲ. ಅವರ ಮನೆ ಸದಾ ಅನ್ನಸತ್ರವಾಗಿತ್ತು. ದಾನ - ದಾಸೋಹ ನಿರಂತರವಾಗಿ ನಡೆಯುತ್ತಿತ್ತು.

ಇದಕ್ಕೆ ಒಮ್ಮೆ ನಿದರ್ಶನವೆಂಬಂತೆ ಅವರ ಮನೆಯಲ್ಲಿ ಅವರ ಧರ್ಮಪತ್ನಿ ಅವರೆಕಾಯಿ ಸುಲಿಯುತ್ತ ಇದ್ದರು. ಅಷ್ಟರಲ್ಲಿ ಒಬ್ಬ ಭಿಕ್ಷುಕ ಬಂದ. ಆರಾಧ್ಯರು ಅವರೆ ಕಾಯಿಯಲ್ಲಿ ಅರ್ಧ ಕೊಡುವಂತೆ ಶ್ರೀಮತಿಯವರಿಗೆ ಆದೇಶವಿತ್ತರು. ಅಷ್ಟರಲ್ಲಿ ಶ್ರೀಮತಿಯವರು ಕೆಲಸ ಮುಗಿಸಿ ಅವರೆಕಾಯಿ ಅಡಿಗೆಗೆ ಬಳಸಿ ಬಿಟ್ಟಿದ್ದರು ಆಗ ಆರಾಧ್ಯರು ಆತನಿಗೆ ನೀನು ಇಂದು ಇಲ್ಲೇ ಊಟಮಾಡಿಕೊಂಡು ಹೋಗಬೇಕು ಎಂದು ಹೇಳಿ, ಆತನನ್ನು ತಮ್ಮ ಜಮೀನಿಗೆ ಕರೆದುಕೊಂಡು ಹೋಗಿ ಹಲಸಿನ ಹಣ್ಣನ್ನು ಕಿತ್ತುಕೊಟ್ಟು, ಅನಂತರ ಬಂದು ಊಟ ಹಾಕಿಸಿ ಕಳುಹಿಸಿದರು. ಹೀಗೆ ತಾವು ಗಳಿಸಿದ್ದರಲ್ಲಿಯೇ ದಾನ ಮಾಡುವ ಸ್ವಭಾವವುಳ್ಳವರಾಗಿದ್ದರು. ಪ್ರತಿನಿತ್ಯ ಒಬ್ಬರಿಗಾದರೂ ಭಿಕ್ಷೆ ನೀಡದೆ ತಾವು ಭೋಜನ ಸ್ವೀಕರಿಸುತ್ತಿರಲಿಲ್ಲ.

ಶ್ರೀ ಕುಮಾರಾರಾಧ್ಯರಲ್ಲಿ ಸಾಮಾಜಿಕ ಸೇವಾ ಕಳಕಳಿ ಸದಾ ತುಂಬಿತುಳುಕಿರುತ್ತಿತ್ತು. ಇವರ ವೈಯಕ್ತಿಕಪರಿಶ್ರಮದ ಫಲವಾಗಿ ಸ್ಥಳೀಯ ಹಂಪಾಪುರ ಹೋಬಳಿಯಲ್ಲಿ ಶಾಲೆಗಳು ಪ್ರಾರಂಭಗೊಂಡವು. ಕ್ರಮವಾಗಿ ಅಂಚೆಕಛೇರಿ, ಆಸ್ಪತ್ರೆ, ಸಂತೆಮಾಳ, ಪಶುವೈದ್ಯಶಾಲೆ, ಪೋಲೀಸ್‌ಠಾಣೆ ನವೀಕರಣ, ವಿಲೇಜ್ ಮುನ್ಸೀಫ್ ಕೋರ್ಟ್ ಮುಂತಾದವು ಸರಕಾರದಿಂದ ಮಂಜೂರಾದವು. ಜಿನ್ನಹಳ್ಳಿ, ಮಲಾರದಹುಂಡಿಗಳಿಗೆ ಪ್ರತ್ಯೇಕವಾಗಿ ಶಾಲೆಗಳನ್ನು ಮಂಜೂರ್ಮಾಡಿಸಿದರು. ಸಂಬಂಧಪಟ್ಟ ಮಂತ್ರಿಗಳನ್ನು, ಅಧಿಕಾರಿಗಳನ್ನು ಭೇಟಿ ಮಾಡಿ ಸ್ಥಳೀಯ ಜನತೆಯ ಅಗತ್ಯ ಸೇವಾಕಾರ್ಯಗಳನ್ನು ಮಂಜೂರ್ಮಾಡಿಸಿದರು. ಹಿಂದಿನ ಮೈಸೂರು ಮಹಾಸಂಸ್ಥಾನದ ಸುಪ್ರಸಿದ್ಧ ಅರಸರಾಗಿದ್ದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಅವರ ಅನುಗ್ರಹ ಪಡೆದು ಮಾದಾಪುರದಿಂದ ಪವಾಡಪುರುಷ ಕೆಂಡಗಣ್ಣಸ್ವಾಮಿ ಗದ್ದಿಗೆವರೆಗೆ ರಸ್ತೆ ನಿರ್ಮಾಣ ಮಾಡಿಸಿದರು.

ಹೀಗೆ ಶ್ರೀ ಕುಮಾರಾರಾಧ್ಯರ ಜನಪರ ಸೇವೆ ಅವಿರತವಾಗಿ ನಡೆಯಿತು. ಜನಮಾನಸದಲ್ಲಿ ಇಂದಿಗೂ ಅವರ ಬಗ್ಗೆ ಪೂಜ್ಯಭಾವನೆ ಇದೆ. ಶ್ರೇಷ್ಠ ಪರಿಸರಪ್ರೇಮಿಗಳಾಗಿ, ಉಪಕಾರಮನೋಭಾವದವರಾಗಿ, ದಾನವೇತ್ತರಾಗಿ, ಸಜ್ಜನರಾಗಿ, ಸಹೃದಯರಾಗಿ ಬಾಳಿದ ಶ್ರೀ ಕುಮಾರಾರಾಧ್ಯರ ನೆನಪು ಇಂದಿಗೂ ಹಸಿರಾಗಿಯೆ ಉಳಿದಿದೆ.

* * *

# ಪರಿಸರದ ಸಮತೋಲನ

*ಕಾರಂತ ಕಾಲದ ಕಾಡು ಗೂಢವಾಗಿತ್ತು*
*ಕುವೆಂಪು ಕಾಲದಲ್ಲಿ ಕಾಡಿನ ಬಗ್ಗೆ ಕುತೂಹಲವಿತ್ತು*
*ಆದರೆ ನಮ್ಮ ಕಾಲದಲ್ಲಿ ಕಾಡು ಅನಾಥವಾಗಿದೆ.......*
*ನಾವು ಅನಾಥರಾಗುವುದೊಂದೇ ಬಾಕಿ !................*
*ಮುಂದೊಂದು ದಿನ ಕಾಡು ಕೇವಲ ನೆನಪಾಗಿ ಕಾಡುತ್ತದೆ.*
*- (ಹಿರಿಯ ಸಾಹಿತಿ ಶ್ರೀ ಪೂರ್ಣಚಂದ್ರ ತೇಜಸ್ವಿಯವರ ಹೇಳಿಕೆ)*

ಮೇಲಿನ ಮಾತುಗಳನ್ನು ಗಮನಿಸಿದಾಗ ಕಾಡು ಬರೀ ಕಾಡಾಗದೇ ಕಾಡು ನಾಡಿನ ಸಮಸ್ತಪರಿಸರದ ಒಡೆಯನಾಗಿರುವುದು ಕಂಡು ಬರುತ್ತದೆ.

ಒಡೆಯನ ಮೇಲೆ ವಿನಾಕಾರಣ ದಂಡೆತ್ತಿ ಹೊರಟಿರುವ ನಾವು, ನಮ್ಮ ಕಾಯುವವರ್‍ಯಾರೆಂದು ಚಿಂತೆಯ ಜೊತೆಯಲ್ಲಿದ್ದೇವೆ. ಚಿತೆಯಿರಲಿ, ಚಿಂತೆಯಿರಲಿ ಈ ಪರಿಸರದ ರಕ್ಷಣೆಯಲ್ಲಿ "ನಾಗರಿಕರು" ಎಂದೆನಿಸಿಕೊಂಡ ನಮ್ಮ ನಿಮ್ಮ ಪಾತ್ರ ಏನಿರಬಹುದು ?.............

ಪರಿಸರವಿಜ್ಞಾನವನ್ನು ಇಂಗ್ಲೀಷಿನಲ್ಲಿ 'ಎಕಾಲಜಿ' ಎನ್ನುತ್ತಾರೆ. 'ಎಕಾಲಜಿ'ಯ ಮೂಲಪದ "ಐಕೋರ್‍ಸ್" ಎಂದರೆ ಮನೆ. ಒಟ್ಟಾರೆ ನಾವು ಸಮಸ್ತ ಭೂಮಿಯನ್ನೇ ಮನೆಯೆಂದು ಪರಿಭಾವಿಸಬಹುದಾದರೆ ಪರಿಸರವ್ಯಾಪ್ತಿಯ ಆಳದ ಅರಿವಾಗಬಹುದು. ಸರ್ವವಸ್ತುಗಳ ವ್ಯವಸ್ಥಿತ ಪ್ರಧಾನ ರಚನೆಯೇ ಪರಿಸರ. ಇಲ್ಲಿ ಪ್ರಾಣಿ - ಪಕ್ಷಿಗಳು, ಗೋಚರ - ಅಗೋಚರ ಜೀವಿಗಳು, ಕಂಡಿರುವ - ಕಾಣದಿರುವ ಸಾಗರ, ಸರೋವರ, ಪರ್ವತ, ಖನಿಜ, ಸಮಸ್ತಪ್ರಕೃತಿಯು ಅನೇಕ ಜೀವಸಂಕುಲಗಳಿಂದಾವೃತವಾಗಿದೆ.

ಪ್ರಾಣಿಯಿಂದ ವಿಕಾಸಗೊಂಡು ನಾಗರಿಕನೆನಿಸಿಕೊಂಡ ಮಾನವ ಪ್ರಾಣಿಯಾಗಿಯೇ ಉಳಿದಿದ್ದರೆ, ಬಹುಶಃ 'ಪರಿಸರರಕ್ಷಣೆ' ಎಂಬ ವಿಚಾರವೇ ಇರುತ್ತಿರಲಿಲ್ಲ. ಆದರಿಂದು ದಿನ - ವರುಷ - ಶತಮಾನಗಳುರುಳಿದಂತೆ



- ಯ. ಮ. ಹೇಮಂತಕುಮಾರ್
M.A.(psych) M.A.(kana)
D.I.J.,D.I.F.,C.T.C.
ಅಂಬಾ ಪ್ರಕಾಶನ, ಕೆ.ಕೆ. ರಸ್ತೆ,
ಯಳಂದೂರು - 571441
ಚಾಮರಾಜನಗರ ಜಿಲ್ಲೆ.
Ph : 08226 - 240196,
9448596343.

ನಾಗರಿಕತೆಯುವೆಟ್ಟಿಲುಗಳನ್ನೇರುವ ಮಾನವನಿಂದ ಪರಿಸರದ ಸಮತೋಲನದ ತಕ್ಕಡಿಯಲ್ಲಾಗುವ ಏರು-ಪೇರು ಕಾಣುತ್ತಿದ್ದೇವೆ. ಪರಿಸರದ ಸಮತೋಲನ ಆಯತಪ್ಪಿ ಸಮಸ್ತ ಪರಿಸರ ಪರ್ಯವಸಾನಗೊಳ್ಳುತ್ತಿರುವುದಕ್ಕೆ "ವಿನಾಶಕಾಲಕ್ಕೆ ವಿಪರೀತಬುದ್ಧಿ" ಎಂದು ಹೇಳಬಹುದು.

ಒಂದು ಕಾಲದಲ್ಲಿ ಮಾನವನ ಸಂರಕ್ಷಕಿಯಾಗಿದ್ದ ಪ್ರಕೃತಿದೇವತೆ ಇಂದು ದೀನತೆಯಿಂದ "ನನ್ನನ್ನು ಕಾಪಾಡುವಿರ" ಎಂದು ಕೇಳುವಂತಾಗಿದೆ.

ನಾಗರಿಕ ಎಂದೆನ್ನಿಸಿಕೊಂಡ ಮಾನವ ಬುದ್ಧಿಯಿದೆ ಎಂದು ಭಾವಿಸಿರುವ ಪ್ರಾಣಿ. "ಯದ್‌ಯದ್ಭವತಿ ಬೀಜಂ ಹಿ ಲಭತೇ ಸೋಽಪಿ ತತ್ಫಲಮ್" ಎಂಬ ಸಂಸ್ಕೃತ ನುಡಿಯಂತೆ ಮಾನವ ಇಂದು ಪರಿಸರ ಸಂರಕ್ಷಣೆಯಲ್ಲಿ ಒಳ್ಳೆಯ ಮನಸ್ಸಿನಲ್ಲಿ ತೊಡಗದೆ ಮಲಿನ ಮನಸ್ಸಿನಲ್ಲಿ ಪರಿಸರ ಸಂರಕ್ಷಣೆಯಾಗಬೇಕಿದೆ ಎಂದು ಅರಚಾಡಿ-ಕಿರುಚಾಡುತ್ತಿರುವುದು ಪರಿಸರ ಮಾಲಿನ್ಯವಲ್ಲವೇ?

ಆದದ್ದೆಲ್ಲ ಆಗಲಿ. ಕಳೆದು ಹೋದದ್ದೆಲ್ಲ ಕಳೆದು ಹೋಗಲಿ. ಇನ್ನಾದರೂ ನಿನ್ನೆಯದೆಲ್ಲ ನಿನ್ನೆಗಿರಲಿ. ನಾಳೆಯದೆಲ್ಲ ನಾಳೆಗಿರಲಿ. ಇಂದಷ್ಟೇ ಸಾಕು ನನಗೆ ಎಂಬ ಸ್ವಾರ್ಥಮನೋಭಾವ ಬಿಟ್ಟು ನಾಗರಿಕರಾದ ನಾವು ನಮ್ಮ ಪರಿಸರಸಂರಕ್ಷಣೆಯಲ್ಲಿ ನಮ್ಮ ಪಾತ್ರ ಏನು ಎನ್ನುವುದಕ್ಕಿಂತಲೂ ಕರ್ತವ್ಯ, ಮಹತ್ವವೇನೆಂದು ಅರಿತು ಕಾರ್ಯೋನ್ಮುಖರಾದರೆ ಈ ಜೀವದಾತೆಗೆ ಸಾವು ಬದುಕಿನ ಹೋರಾಟದಿಂದ ಮುಕ್ತಿ ಸಿಗಬಹುದು. ನಾಗರಿಕರೆಂದರೆ ಯಾರು? ನಗರದಲ್ಲಿರುವವರು ಮಾತ್ರ ನಾಗರಿಕರೆ ? ಗಾಳಿಯ ವೇಗವನ್ನು ಮೀರಿಸಬಲ್ಲೆವೆಂಬ ಹುಂಬತನದ ಚಟುವಟಿಕೆಯುಳ್ಳ ನಗರದಲ್ಲಿರುವವರೇ? ಅಕ್ಷರ ಕಲಿತವರೆ,.......... ಕಲಿಯದವರೆ.........? ಇವರ್ಯಾರು ಅಲ್ಲ. ನಾಗರಿಕರಾರೆಂದು ನಮ್ಮನ್ನು ನಾವೇ ಪ್ರಶ್ನಿಸಿಕೊಂಡಾಗ ಪ್ರಕೃತಿಮಾತೆಯ ಒಡಲಿನಲ್ಲಿ ಮಾತು ಬಲ್ಲ ಏಕೈಕ ಪ್ರಾಣಿಯೇ ನಾಗರಿಕ ಎಂದು ತಿಳಿದು ಬರುತ್ತದೆ.

**ಸಂರಕ್ಷಣೆಯಲ್ಲಿ ನಾಗರಿಕ...........**

**ತನ್ನ ಮನೆ**

ನಗರ ಜೀವನದ ವೇಗದ ಬದುಕು, ಸಮಯದ ಅಭಾವ, ಆರೋಗ್ಯದ ಏರು ಪೇರು ಇದರಿಂದ ಮನೆಯ ಸ್ವಚ್ಛತೆ ಎಷ್ಟರ ಮಟ್ಟಿಗೆ ನಡೆಯುತ್ತಿದೆ ಎಂದೊಮ್ಮೆ ಅವಲೋಕಿಸ ಹೊರಟರೆ....... ಮನೆಯ ಚಾವಣಿಯ ಮೇಲೆಲ್ಲ ಹೆಣೆದಿರುವ ಬಲೆ, ಎಂದೋ ಮನೆ ಸೇರಿದಾಗ ಸಂದಿಯಲ್ಲಿ ತೂರಿದ ಬೀರುವಿನ ಕೆಳಗಿನ ಧೂಳಿನ ಕಣಗಳು, ಕೆಲಸದ ನಿಮಿತ್ತ ವಾರಗಟ್ಟಲೆ, ತಿಂಗಳುಗಟ್ಟಲೆ, ಊರು ಬಿಟ್ಟಾಗ ಸತ್ತು ಕೊಳೆತು ವಾಸನೆ ಕಟ್ಟಿಕೊಂಡ ಇಲಿ, ಇತರೆ ರೋಗ ಹರಡಬಹುದಾದ ಪ್ರಾಣಿಗಳು ಬಿಸಿಲಿರಲಿ, ಮಳೆಯಿರಲಿ, ಛಳಿಯಿರಲಿ ಫ್ಯಾನಿಗೆ ಅಂಟಿಕೊಂಡು ದೇಹ ದಣಿಸಿಕೊಳ್ಳುತ್ತಿರುವಾಗಲೇ ಮನೆಯ ಒಳಗಿನ ಅನಾರೋಗ್ಯ ಪರಿಸರದಿಂದ ಶೀತ, ನೆಗಡಿ, ಕೆಮ್ಮು, ಜ್ವರದಿಂದ ನಮ್ಮನ್ನು ನಾವೇ ಹಿಂಸಿಸಿಕೊಳ್ಳುವುದು ಸರ್ವ ಸಾಮಾನ್ಯವಾಗಿದೆ. ಕೊಳೆತ

ತರಕಾರಿ, ಎಂಜಲುಪದಾರ್ಥ, ಕಿಟಕಿಯಿಂದ ತೂರಲ್ಪಟ್ಟು ಒಂದಕ್ಕೊಂದು ಅಂಟಿ ಕೊಂಡಿರುವಂತಹ ಮನೆಗಳ ನಡುವಿನ ಚಿಕ್ಕ ಚರಂಡಿಯಲ್ಲಿ ಸಿಕ್ಕ ವಿವಿಧ ರೀತಿಯ ಕೀಟಾಣು, ಸೊಳ್ಳೆಗಳನ್ನು ನಮ್ಮ ಸುತ್ತ ಮುತ್ತ ಸೃಷ್ಟಿಸಿಕೊಳ್ಳುತ್ತಿರುವ ನಾವು ನಮ್ಮ ಅನಾರೋಗ್ಯವಲ್ಲದೆ ಪಕ್ಕದ ಮನೆಯವರ ಅನಾರೋಗ್ಯಕ್ಕೂ ಕಾರಣರಾಗುತ್ತಿದ್ದೇವೆ. ಇದು ನಗರಜೀವನದಲ್ಲಾದರೆ, ಹಳ್ಳಿಯಜೀವನದಲ್ಲಿ ಸೂರ್ಯ ಮರೆಯಾಗುತ್ತಿದ್ದಂತೆ ನಿತ್ಯಕರ್ಮ ಕಳೆಯಲು ದಾರಿಯುದ್ದಕ್ಕೂ ಮಲಮೂತ್ರವಿಸರ್ಜನೆಯ ಪರಿಣಾಮದಿಂದ ಪರಿಸರಮಾಲಿನ್ಯದಲ್ಲಿ ಆರೋಗ್ಯದಿಂದ ಬದುಕುವ ಯೋಗ್ಯತೆಯನ್ನೇ ಕಳೆದುಕೊಳ್ಳುತ್ತಿರುವುದು ವಿಪರ್ಯಾಸ. ಬೆಳೆದ ಆಹಾರವನ್ನೇ ಸಂರಕ್ಷಿಸಲಾಗದೆ ಒದ್ದಾಡುತ್ತಿರುವ ರೈತರು, ಅಲ್ಪ ಸ್ವಲ್ಪ ಕಲಿತು ಮಹಾಪಂಡಿತರೆಂದು ಅಲ್ಪಮತಿಗಳಿಂದ ಉಂಟಾಗುತ್ತಿರುವ ಪರಿಸರಮಾಲಿನ್ಯ ಒಂದೆಡೆಯಾದರೆ, ಆಶ್ವಾಸನೆಗಳನ್ನು ಬಿತ್ತುತ್ತ, ಅವಿಶ್ವಾಸಗಳನ್ನು ಬೆಳೆಸುತ್ತಿರುವ ರಾಜಕಾರಣಿಗಳು, ಮಧ್ಯವರ್ತಿಗಳು ಸಕ್ರಿಯವಾಗಿ ಪರಿಸರರಕ್ಷಣೆಯಲ್ಲಿ ಪ್ರಾಮಾಣಿಕವಾಗಿ ತೊಡಗದಂತೆ ಅಡ್ಡಿಯುಂಟುಮಾಡುತ್ತಿರುವುದು ತೀರ ಅಸಹ್ಯಕರ ಅಂಶವಾಗಿದೆ.

ಪರಿಸರದ ಪರಮಶತ್ರು ಮಾನವ. ಸದ್ಯ ಪ್ರಚಲಿತದಲ್ಲಿರುವ ಮಾಲಿನ್ಯಗಳ ನಡುವೆ ಮಾನಸಿಕಮಾಲಿನ್ಯಕ್ಕೆ ಬಲಿಯಾಗಿರುವ ಪ್ರತಿಯೊಬ್ಬರೂ ಪರಿಸರಸಂರಕ್ಷಣೆಯ ವಿಚಾರದಲ್ಲಿ "ನನ್ನೊಬ್ಬನಿಂದ ಪರಿಸರ ಹಾಳಾಗುವುದೆ?" "ನನ್ನೊಬ್ಬನಿಂದ ಪರಿಸರ ಸಂರಕ್ಷಣೆ ಸಾಧ್ಯವೆ"? ಎಂಬ ಉಡಾಫೆ ಪ್ರಶ್ನೆಗಳನ್ನು ತಮಗೆ ತಾವೆ ಕೇಳಿ ಸುಮ್ಮನಿದ್ದರೆ ಪರಿಸರವನ್ನು ರಕ್ಷಿಸುವವರು ಯಾರು?

ಹಸಿರೆ - ಉಸಿರು, ಪರಿಸರ-ಬೆಳೆಸಿ, ವೃಕ್ಷಗಳನ್ನು ಸಂರಕ್ಷಿಸಿ. ಕ್ಷಾಮ, ಅರಣ್ಯನಾಶ, ವನ್ಯಮೃಗಗಳ ಅವಸಾನ, ಶಿಶುಹತ್ಯೆ, ಆಹಾರಸಮಸ್ಯೆ, ಓಜೋನ್ ಪದರದಲ್ಲಿ ರಂಧ್ರ, ಅಂತರ್ಜಲಕುಸಿತ ಇಂತಹ ಎಣಿಸಲಾರದ ಸಮಸ್ಯೆಗಳು ಒಂದೆಡೆ. W.W.T., W.R.I., W.C.M.C., E.E.R.C., E.V.C ಮುಂತಾದ ಅಂತಾರಾಷ್ಟ್ರೀಯ ಸಂಸ್ಥೆಗಳಲ್ಲದೆ ಕೇಂದ್ರ ಪರಿಸರ ಅರಣ್ಯಸಚಿವಾಲಯ, ಪರಿಸರಾಸಕ್ತ ಕೊಂಡಿಗಳಲ್ಲದೆ ಲೆಕ್ಕವಿಲ್ಲದಷ್ಟು ಸಂಘಟನೆಗಳು ಪರಿಸರರಕ್ಷಣೆ ಸಂಘಟನೆಯಲ್ಲಿ ತೊಡಗಿವೆ. ಇನ್ನು ಕೆಲವು ನಿಯಂತ್ರಣ, ನಿಗಮ, ಮಂಡಲಿಗಳು ಅಲ್ಲದೆ ಸಾವಿರಾರು ಲಕ್ಷಗಟ್ಟಲೆಯ ಸಂಘಟನೆಗಳು ಪರಿಸರಸಂರಕ್ಷಣೆಯ ಸೋಗಲಾಡಿತನ ಮುಖವಾಡ ಧರಿಸಿವೆ. ಕೆಲವೇ ಕೆಲವು ಸಂಘಟನೆಗಳು ಪ್ರಾಮಾಣಿಕವಾಗಿ ಪರಿಸರ ಸಂರಕ್ಷಣೆಯಲ್ಲಿ ತೊಡಗಿರುವುದು ಅನುಕರಣೀಯ.

ಇಷ್ಟೆಲ್ಲ ಸಾಲದೆಂದು ವಿಶ್ವಭೂಮಿದಿನ, ವಿಶ್ವಪರಿಸರದಿನ, ವಿಶ್ವಜಲದಿನ, ಅಂತರ್ಜಲದಿನ, ಮಹೋತ್ಸವ, ಉತ್ಸವ ಇಷ್ಟೆಲ್ಲ ದಿನಾಚರಣೆಗಳಿಂದ ಪರಿಸರಸಂರಕ್ಷಣೆ ಸಾಧ್ಯವೆಂದು ಆಚರಿಸುವ ನಾಗರಿಕರ ಮನಸ್ಸಾಗೆ ಬೆಲೆಯಿದೆಯೇ? ಇದು ಪರಿಸರ ರಕ್ಷಣೆಯ ಮಾರ್ಗವೇ?!

ಹಾಗೆಂದು ಪರಿಸರಸಂರಕ್ಷಣೆಯಲ್ಲಿ ಮೇಲಿನ ಅಂಶಗಳು, ಉತ್ಸವಗಳು ಬೇಡವೆಂದಲ್ಲ. ನಿಜವಾಗಿಯೂ ನಾವಿಂದು ನಾಗರಿಕರೆಂದೆನಿಸಿಕೊಂಡವರು ಪರಿಸರಸಂರಕ್ಷಣೆಯಲ್ಲಿ ನಮ್ಮ ಮಹತ್ವದ ಕರ್ತವ್ಯದ ಹೊಣೆಯನ್ನು ಹೊರಬಹುದು.

- ವೈಯಕ್ತಿಕಸ್ವಚ್ಛತೆ, ಶುಭ್ರಮಾನಸಿಕತೆ ಕಾಪಾಡಿಕೊಳ್ಳುವುದು.
- ರಾಸಾಯನಿಕರಹಿತ ವಸ್ತುಗಳ ಬಳಕೆಗೆ ಆದ್ಯತೆ ನೀಡುವುದು.
- ಅಗತ್ಯಕ್ಕೆ ತಕ್ಕಂತೆ ವಾಹನಗಳ ಬಳಕೆ, ಸದೃಢದೇಹದ ಸದ್ಬಳಕೆ.
- ಯಾಂತ್ರಿಕಜೀವನಕ್ಕೆ ತಿಲಾಂಜಲಿ, ವಾಸ್ತವಬದುಕಿಗೆ ಮಣೆ.
- ಬಳಸಬಹುದಾದ ಪ್ಲಾಸ್ಟಿಕ್ ಬಳಸಿ, ಅಪಾಯಕಾರಿ ಪ್ಲಾಸ್ಟಿಕ್ ಪದಾರ್ಥದಿಂದ ದೂರವಿರುವುದು.
- "*ಯದೃಚ್ಛಾಲಾಭಸಂತುಷ್ಟ*" ಎಂಬಂತೆ ಪ್ರಕೃತಿಯಿಂದ ನಮಗೆಷ್ಟು ದೊರೆಯುತ್ತದೆ ಅಷ್ಟರಲ್ಲಿ ಸಂತೃಪ್ತಿಜೀವನ ನಡೆಸುವುದು.
- ಮನರಂಜನೆಯ ಹೆಸರಿನಲ್ಲಾಗುವ ಮಾನಸಿಕ ಹಾಗೂ ಸಾಮಾಜಿಕ ಶಬ್ದಮಾಲಿನ್ಯಕ್ಕೆ ಕಡಿವಾಣ ಹಾಕುವುದು.
- "*ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ*" ಎಂಬಂತೆ ನಮ್ಮ ಶಕ್ತಿ ಮೀರಿ ಮರ-ಗಿಡ ಸಂರಕ್ಷಣೆಯಲ್ಲಿ ತೊಡಗುವುದು.
- ಅಭಿವೃದ್ಧಿಯ ಹೆಸರಿನಲ್ಲಾಗುವ ಮಾಲಿನ್ಯಗಳಿಗೆಲ್ಲ ಕಡಿವಾಣ ಹಾಕುವುದು.
- ಮಾಲಿನ್ಯದಿಂದಾಗುವ ಪರಿಣಾಮದ ಬಗ್ಗೆ ತಿಳಿದವರು ಇತರರಿಗೆ ಪರಿಸರಸಂರಕ್ಷಣೆಯ ಅರಿವು ಮೂಡಿಸುವುದು.
- ವನೌಷಧಗಳ ಉಪಚಾರಗಳ ಸಮಗ್ರ ಬಳಕೆ.
- ವ್ಯಕ್ತಿ ಪ್ರತಿಷ್ಠೆ ಮರೆತು ಐನ್‌ಸ್ಟೀನ್ ಹೇಳುವಂತೆ "*ಸರಳವಾಗಿ ಬದುಕಲು ಕಲಿತುಕೊಳ್ಳಿ. ಇದರಿಂದ ಲೆಕ್ಕವಿಲ್ಲದಷ್ಟು ಒಳಿತು ಉಂಟಾಗುತ್ತವೆ*" ಎಂಬ ಮಹತ್ತರ ನುಡಿಯಂತೆ ಸರಳಜೀವನಕ್ಕೆ ಶರಣಾಗುವುದು.
- ಇಂದು ತೀರ ಸಹಜವೆನಿಸಿರುವ ಮೊಬೈಲು ಸಂಸ್ಕೃತಿ, E-ಸಂಸ್ಕೃತಿ ಮುಂತಾದ ಸಂವಹನಗಳಿಂದಾಗುತ್ತಿರುವ ಪರಿಸರಮಾಲಿನ್ಯದ ಬಗ್ಗೆ ಯೋಚಿಸುವುದರೊಡನೆ ಶಬ್ದ ಮಾಲಿನ್ಯ ತಡೆಯುವುದು.
- ಸಭೆ ಸಮಾರಂಭಗಳಲ್ಲಿ, ಶುಭಕಾರ್ಯಗಳಲ್ಲಿ ನೈಸರ್ಗಿಕತೆಗೆ ಒತ್ತು ಕೊಡುವುದು, ಪ್ಲಾಸ್ಟಿಕ್ ಸಂಸ್ಕೃತಿ ತಡೆಯುವುದು.
- ಜಗತ್ತಿನಪರವಾಗಿ ಯೋಚಿಸಿ, ಚಿಂತಿಸಿ. ಸ್ಥಳೀಯನಾಗಿ ಒಳಿತಾಗುವಂತೆ ಕಾರ್ಯೋನ್ಮುಖನಾಗುವುದು.

❀ ಹೀಗೆ ಇಂದು ನಾವೆಲ್ಲ ಕಾಣುತ್ತಿರುವ, ಅನುಭವಿಸುತ್ತಿರುವ ಮಾಲಿನ್ಯವನ್ನು ತಡೆಗಟ್ಟುವುದರೊಂದಿಗೆ.

ನಾಗರೀಕತೆಯ ಭವಿಷ್ಯತ್ತನ್ನು ಕಾಡುವ ಪ್ರಮುಖ ಅಂಶಗಳಾದ ಅಂತರ್ಜಲಕುಸಿತ, ಜನಸಂಖ್ಯಾಬೆಳವಣಿಗೆ, ಹೆಚ್ಚಾಗುತ್ತಿರುವ ಉಷ್ಣತೆ, ಇಳಿಮುಖವಾಗುತ್ತಿರುವ ಜೀವವೈವಿಧ್ಯ, ವ್ಯಕ್ತಿಗತ ಕಡಿಮೆಯಾಗುತ್ತಿರುವ ಇಳುವರಿ ಕೃಷಿ ಭೂಮಿ, ಕಾಣದಂತಾಗುತ್ತಿರುವ ಜಲಚರಗಳು, ಕಡಮೆಯಾಗುತ್ತಿರುವ ಕಾಡುಗಳು ಇಂಥ ಅನೇಕ ಅಂಶಗಳ ಹಿನ್ನಲೆಯಲ್ಲಿ ನಾವಿಂದು ನಮ್ಮ ಸ್ವಾರ್ಥಬುದ್ಧಿಗೆ ಅಮೂಲ್ಯ ಪರಿಸರ ನಾಶವಾಗುವುದರೊಂದಿಗೆ, ನಾವು ನಿರ್ನಾಮವಾಗದೆ - ನಮ್ಮಂತರಂಗವನ್ನು ಶುದ್ಧೀಕರಿಸಿಕೊಂಡು ದಿನನಿತ್ಯ ನಮ್ಮ ಪರಿಸರವೈವಿಧ್ಯದಸೊಬಗನ್ನು ಕಾಪಾಡಿಕೊಳ್ಳಲು ಮನಸ್ಸು ಮಾಡಿ ಕಾರ್ಯೋನ್ಮುಖರಾದರೆ....... ನಾವು ನಿಜವಾದ ನಾಗರಿಕರು.



## ವಿವಿಧ ಧ್ಯಾನ

ನಮ್ಮ ಉಚ್ಛ್ವಾಸ, ನಿಃಶ್ವಾಸ ಕ್ರಿಯೆಯನ್ನು ನಿಧಾನವಾಗಿ ಹಾಗೂ ದೀರ್ಘವಾಗಿ ಏಕಾಗ್ರತೆಯಿಂದ ಶಿಸ್ತಿಗೊಳಪಡಿಸುವ ಕ್ರಿಯೆಯನ್ನು ಧ್ಯಾನವೆನ್ನುತ್ತಾರೆ. ಇದು ಸತತ ಸಾಧನೆಯಲ್ಲಿ ಮಾತ್ರ ಸಾಧ್ಯ. ಇದರಲ್ಲಿ ಮೂರು ವಿಧಗಳು,

1] ಶ್ರವಣಧ್ಯಾನ 2] ಮಂತ್ರಧ್ಯಾನ 3] ಮೌನಧ್ಯಾನ

**1] ಶ್ರವಣಧ್ಯಾನ :-** ಜಗತ್‌ಚೈತನ್ಯವನ್ನು ನಾಮರೂಪದಲ್ಲಿ ಕಿವಿಯ ಮೂಲಕ ಕೇಳಿಸಿಕೊಳ್ಳುವುದೆ ಶ್ರವಣಧ್ಯಾನ.

**2] ಮಂತ್ರಧ್ಯಾನ :-** ಒಂದು ವಿಷಯವನ್ನು ಪುನಃ ಪುನಃ ಮನನ ಮಾಡಿದಾಗ ಆ ವಿಷಯ ಮಂತ್ರವೆನಿಸಿಕೊಳ್ಳುತ್ತದೆ. ಮಂತ್ರದಿಂದ ಕೂಡಿದ ಧ್ಯಾನದಲ್ಲಿ ವಿಶ್ವಚೈತನ್ಯವನ್ನು ನಾಮರೂಪದಲ್ಲಿ ಮನನ ಮಾಡಿದಾಗ ಅದು ವಿಶ್ವಚೈತನ್ಯ ಮಂತ್ರವಾಗುತ್ತದೆ. ಇಂತಹ ಧ್ಯಾನ ಮಂತ್ರಧ್ಯಾನವಾಗುತ್ತದೆ.

**3] ಮೌನಧ್ಯಾನ :-** ದೀರ್ಘವಾದ ಉಸಿರಾಟ ಕ್ರಿಯೆಯನ್ನು ಮಾಡಿ ನಂತರ ಮೌನವಾಗಿ ಕಣ್ಣುಮುಚ್ಚಿ ಅಥವಾ ಕಣ್ಣುಬಿಟ್ಟು ಮನಸ್ಸಿನಿಂದ ಶರೀರದ ಯಾವುದಾದರೂ ಒಂದು ಕ್ರಿಯೆಯನ್ನು ಮೌನವಾಗಿ ಮನಸ್ಸಿನಲ್ಲಿ ಗ್ರಹಿಸುವುದೇ ಮೌನಧ್ಯಾನ.

ಇದು ಸತತ ಸಾಧನೆಯಲ್ಲಿ ನಿಷ್ಠೆಯಿಟ್ಟು ಕ್ರಿಯೆಯನ್ನು ನಿರರ್ಗಳವಾಗಿ ಮಾಡಿದಾಗ ಸಹಜ ಉಚ್ಛ್ವಾಸ - ನಿಃಶ್ವಾಸ ಕ್ರಿಯೆ ಸಾಗುತ್ತದೆ. ಅದೇ ಮೌನಧ್ಯಾನವಾಗುತ್ತದೆ.

ಇದು ಗುರುವಿನಿಂದ ಬಂದರೆ ಸುಲಭಸಾಧ್ಯ. ಇದರಿಂದ ಜೀವನದ ಎಲ್ಲ ಸ್ತರಗಳಿಗೂ ಸಹಕಾರಿಯಾಗುತ್ತದೆ.

ಧ್ಯಾನವು ಮೆದುಳಿನ ಶಕ್ತಿಯನ್ನು ಹೆಚ್ಚಿಸುತ್ತದೆ. ದೈಹಿಕ -ಮಾನಸಿಕ ಜಂಜಡಗಳನ್ನು ದೂರವಿಡುತ್ತದೆ.

ನಮ್ಮ ಕ್ರಿಯಾತ್ಮಕಶಕ್ತಿಯನ್ನು ಧ್ಯಾನದಿಂದ ವೃದ್ಧಿಗೊಳಿಸಿಕೊಳ್ಳಬಹುದು.

**- ಎನ್. ಕಾಂಚನ**

# ಶಿವಪೂಜಾಧುರಂಧರ

*ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ |*
*ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ||*

- ಗೀತೆ.

ಗೆಲವು-ಸೋಲಿನಲ್ಲಿ ಯಾವುದೇ ಆಸಕ್ತಿಯನ್ನು ಇಟ್ಟುಕೊಳ್ಳದೆ ಸಮಚಿತ್ತದಿಂದ ನಿನ್ನ ಕರ್ತವ್ಯವನ್ನು ಮಾಡು. ಆಗ ಕರ್ತವ್ಯವೇ ದೇವರು, ಕರ್ತವ್ಯವೇ ಪೂಜೆ, ಕರ್ತವ್ಯವೇ ಯೋಗ, ಕರ್ತವ್ಯವೇ ಬದುಕು, ಕರ್ತವ್ಯವೇ ಹುಟ್ಟು, ಕರ್ತವ್ಯವೇ ಸಾವು, ಕರ್ತವ್ಯಕ್ಕಿಂತ ಮಿಗಿಲಾದದ್ದು ಮಾನವನಿಗೆ ಮತ್ತೊಂದಿಲ್ಲ. ಯಾರು ತಮ್ಮ ಕರ್ತವ್ಯವನ್ನು ನಿರ್ಲಕ್ಷಿಸುತ್ತಾರೋ, ಕರ್ತವ್ಯದಲ್ಲಿ ಅಲಸಿಗಳಾಗುತ್ತಾರೋ, ಕರ್ತವ್ಯದಲ್ಲಿ ಎಡವುತ್ತಾರೋ, ಕರ್ತವ್ಯವನ್ನು ಹಿಂಜರಿಯುತ್ತಾರೋ, ಕರ್ತವ್ಯದಲ್ಲಿ ಲೋಪವೆಸಗುತ್ತಾರೋ, ಅಂಥವರ ಬದುಕು ಸಾರ್ಥಕವಾಗಲಾರದೆಂದು ಹಲವು ಬಾರಿ ಸೂಚಿಸುತ್ತಲಿದ್ದರು. ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಮೊದಲಿಗರಾಗಿದ್ದವರು. ಹೇಳಿದಂತೆ ಮಾಡಿ ತೋರಿಸಿದವರು, ಮಾಡಿ ತೋರಿಸಿದಂತೆ ಹೇಳಿದವರು. ಕಾಯಕವೇ ಕೈಲಾಸವೆಂಬುದು ಅವರ ಉಸಿರಾಗಿತ್ತು.



ಡಿ.ಎಸ್.ಎಲ್. ಆರಾಧ್ಯರು,
ಜ್ಯೋತಿಷ್ಯರು ಮತ್ತು
ನಿ. ರೆವಿನ್ಯೂ ನೌಕರರು
ಪಂಚಾಕ್ಷರಿ ಗುರುಮಠ
ಕೆ. ಹೆಚ್. ನಗರ, ಮದ್ದೂರು,
ಮಂಡ್ಯ ಜಿಲ್ಲೆ.
ದೂ. : 08232-236354.

ಇವರು ಶೈವಾಗಮದಲ್ಲಿ ಅಪಾರ ನಂಬಿಕೆ ಇಟ್ಟಿದ್ದು, ಶಿವಪೂಜಾಧುರಂಧರರಾಗಿ ಅಪಾರವಾಗಿ ಶಿಷ್ಯಕೋಟಿಯ ಯಶಸ್ಸನ್ನು ಹಾರೈಸುತ್ತಿದ್ದ ಅಪರೂಪದ ವ್ಯಕ್ತಿಯಾಗಿದ್ದರು. ಅಸ್ಥಿರಬದುಕಿನಲ್ಲಿ ಅಗ್ರಮಾನ್ಯರಾಗಿ ಬಾಳಿ ಬದುಕು ನಡೆಸಿದವರಲ್ಲಿ ಮೊದಲಿಗರಾಗಿದ್ದರು ಎಂಬುದು ಸೂರ್ಯಪ್ರಕಾಶದಷ್ಟು ಸತ್ಯವೆಂದು ಹೇಳಿದರೆ ತಪ್ಪಾಗಲಾರದು. ಕಾಯೇನ,ವಾಚಾ, ಮನಸಾ ನಿಃಸ್ಪೃಹತೆಯಿಂದ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ದುಡಿಯುವುದನ್ನು ಅವರು ಮೈಗೂಡಿಸಿಕೊಂಡವರಾಗಿದ್ದರು.

*ಕರ್ತವ್ಯೋ ಭ್ರಾತರಿ ಸ್ನೇಹೋ ವಿಸ್ಮರ್ತವ್ಯಾಃ ಗುಣೇತರಾಃ |*
*ಸಂಬಂಧೋ ಬಂಧುಭಿಃ ಶ್ರೇಯಾನ್ ಲೋಕಯೋರುಭಯೋರಪಿ* || - ಸು.

ಒಡಹುಟ್ಟಿದ ಅಣ್ಣ-ತಮ್ಮಂದಿರಲ್ಲಿ ಪ್ರೀತಿ, ವಿಶ್ವಾಸ ತೋರಬೇಕು. ಸಹೋದರರ ತಪ್ಪು-ತಡೆ ದೋಷಗಳನ್ನು ಮರೆಯಬೇಕು. ಕ್ಷಮಿಸಿಬಿಡಬೇಕು. ಬಂಧುಬಾಂಧವರೊಡನೆ ಒಳ್ಳೆಯ ಸಂಬಂಧ ಇಟ್ಟುಕೊಂಡಲ್ಲಿ ಇಹ-ಪರಗಳೆರಡಕ್ಕೂ ಒಳ್ಳೆಯದು ಎಂದು ಹೇಳಿದ ಹಾಗೆ ನಡೆದುಕೊಂಡು ಸಂಸಾರದ ಭಾರದಿಂದ ಪುನಃಶ್ಚೇತರಿಸಿದ ಮಹಾನ್ ವ್ಯಕ್ತಿಯಾಗಿದ್ದವರು ಜಿನ್ನಹಳ್ಳಿ ಆರಾಧ್ಯರು. ಅವರು ತಮ್ಮ ಕುಟುಂಬದಲ್ಲಿನ ಯಾವ ವಿಷಯವನ್ನೂ, ಯಾರಲ್ಲಿಯೂ ತಿಳಿಸಿದವರಲ್ಲ. ವಿಚಾರಗಳನ್ನು ತಮ್ಮಲ್ಲಿಯೇ ನುಂಗಿದವರು. ಚಿಂತಿಸಿ ತಮ್ಮ ಮಾರ್ಗ ತಾವೇ ಕಂಡುಕೊಂಡವರು. ಯಾರು ಕ್ರೋಧವಶನಾಗುವನೋ ಅವನು ಪವಿತ್ರನಲ್ಲ, ತಪಸ್ವಿಯಲ್ಲ. ಅಂತಹವನಿಗೆ ಇಹಪರಗಳಾವುವೂ ಸಿದ್ಧಿಸದು ಎಂದು ತಿಳಿವಳಿಕೆಯನ್ನು ವ್ಯಕ್ತಪಡಿಸುತ್ತಿದ್ದವರು. ಜೀವನದಲ್ಲಿ ಎಂತಹ ಸಂದಿಗ್ಧಪರಿಸ್ಥಿತಿ ಬಂದರೂ, ಶಾಂತಿ, ಸಂಯಮ, ಶಿಸ್ತು ಬಿಟ್ಟವರಲ್ಲ. ಸದಾ ಯೋಚಿಸಿ, ಸೂಕ್ತ ನಿರ್ಧಾರ ವ್ಯಕ್ತಪಡಿಸುತ್ತಿದ್ದರು. ಇದರಿಂದ ಯಾರಿಗೂ ಯಾವ ರೀತಿಯ ಅನಾನುಕೂಲವಾಗದ ಹಾಗೆ ಸದಾ ಜಾಗರೂಕರಾಗಿ ವರ್ತಿಸುತ್ತಿದ್ದರು. *"ಪಡೆನು ವಿಸ್ಮಯ ದುಃಖವದರಿಂ, ದೈವವಾದರು ಕೆಡಿಸಲಾರದು, ತನತು ಯಾವುದೆ ಅನ್ಯಗಲ್ಲವದು"* ಎಂಬ ನೀತಿಸಾರದಂತೆ ಮನುಷ್ಯ ಪಡೆಯಬೇಕಾದ್ದನ್ನು ಪಡೆದೇ ತೀರುತ್ತಾನೆ. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ನಾನು ಇಂತಹ ಕಾರಣಗಳಿಗೆ ಖಂಡಿತ ದುಃಖಿಸುವುದಿಲ್ಲ. ಆಶ್ಚರ್ಯಪಡುವುದಿಲ್ಲ. ಯಾವುದು ನಮ್ಮದೋ ಅದು ಎಂದಿಗೂ ಇತರರದಾಗದು ಎಂಬುದು ಅವರ ಮನದಾಳದಲ್ಲಿ ನೆಲೆಯೂರಿತ್ತು. ಸಂದರ್ಭ ಬಂದಲ್ಲಿ ವ್ಯಕ್ತಪಡಿಸುತ್ತಿದ್ದರು. ಇಂತಹ ಮನಃಸ್ಥೈರ್ಯ ಬೆಳೆಸಿಕೊಂಡವರು ಶ್ರೀಮಾನ್ ಜಿನ್ನಹಳ್ಳಿ ಗುರುಗಳು.

*ಸುಜನೋ ನ ಯಾತಿ ವೈರಂ ಪರಹಿತನಿರತೋ ವಿನಾಶಕಾಲೇಽಪಿ |*
*ಛೇದೇಽಪಿ ಚಂದನತರುಃ ಸುರಭಯತಿ ಮುಖಂ ಕುಠಾರಸ್ಯ* || - ಸು.

ಇತರರಿಗೆ ಯಾವಾಗಲೂ ಒಳ್ಳೆಯದಾಗಲೆಂದೇ ಬಯಸುವಂಥ ಸಜ್ಜನರು ತಾವು ನಾಶವಾಗುವ ಸಮಯದಲ್ಲೂ, ತಮ್ಮ ನಾಶಕ್ಕೆ ಕಾರಣರಾದವರನ್ನು ದ್ವೇಷಿಸುವುದಿಲ್ಲ. ಹೇಗೆಂದರೆ ಶ್ರೀಗಂಧದಮರವನ್ನು ಕತ್ತರಿಸಿದಾಗಲೂ ಕೊಡಲಿ / ಗರಗಸದ ಬಾಯಿಯನ್ನು ಶ್ರೀಗಂಧದ ಮರ ಸುವಾಸನೆಯುಳ್ಳದನ್ನಾಗಿ ಮಾಡುತ್ತದೆ. ಹಾಗೆಯೇ ಜಿನ್ನಹಳ್ಳಿ ಗುರುಗಳೂ ಸಹ ಇಂತಹ ಮನೋಭಾವ ಉಳ್ಳಂತಹ ಒಬ್ಬ ಪುರುಷೋತ್ತಮರಾಗಿದ್ದರು. ಅಂತಹವರ ಸಹಬಾಳ್ವೆಯನ್ನು ಯಾರೂ ಅಪೇಕ್ಷಿಸುವುದಿಲ್ಲ. ನಮ್ಮ ಸುಖ-ದುಃಖಗಳಿಗೆ, ಸಿರಿತನ-ಬಡತನಗಳಿಗೆ, ಜೀವನದ ಆಗು-ಹೋಗುಗಳಿಗೆ, ಆರೋಗ್ಯ - ರೋಗಗಳಿಗೆ ನಾವೇ ಶಿಲ್ಪಿಗಳು ಎಂಬಂತೆ ಭಗವದ್ದತ್ತವಾದ ವಿವೇಕವನ್ನು ಸರಿಯಾಗಿ ಬಳಸಿಕೊಂಡರೆ ನಾವು ಉತ್ತಮ ಶಿಲ್ಪಿಗಳಾಗಿ, ಸುಖಿಗಳಾಗಿ, ಇತರರನ್ನು ಆನಂದಗೊಳಿಸಿ ಸಹಬಾಳ್ವೆ ನಡೆಸುವವರಾಗುತ್ತೇವೆಂದು ಖಂಡಿತ ಹೇಳುತ್ತಲಿದ್ದ ಮಹಾ

ಜ್ಞಾನಿಯಾಗಿದ್ದವರು ನನ್ನ ಬಾಂಧವರು. ಭಗವಂತನ ವರಪ್ರಸಾದದಿಂದ ನಮ್ಮಗಳೆಲ್ಲರ ಬದುಕು ಹಸನಾಗಲಿ ಎಂದು ಹಾರೈಸಿದವರು. ಇದಲ್ಲವೆ ಅವರ ಮಾನವೀಯತೆಯ ಸದ್ಗುಣಗಳು.

"ಆಪತ್ತು ಬಂದಾಗ ಬುದ್ಧಿಗೆಡದಿರಬೇಕು. ಬುದ್ಧಿ ಇರಲು ಆಪತ್ತು ನೀಗಿಕೊಳ್ಳಬಹುದು", ಆಪತ್ತು-ಸಂಪತ್ತು ಏಕರೂಪ ಎಂಬರೆ ಉದಯಾಸ್ತಕಾಲದಲ್ಲಿ ರವಿಯು ಕೆಂಪಗೆ ಇಹನು, ಎಂಬ ನೀತಿವಾಕ್ಯದಂತೆ ಇದ್ದಂತಹ ಮಹಾನುಭಾವರಾದ ಜಿನ್ನಹಳ್ಳಿ ಕುಮಾರಾರಾಧ್ಯ ಸ್ವಾಮಿಗಳು ಎಲ್ಲ ಮನೆಯವರಿಗೂ, ಆ ಪ್ರಾಂತ್ಯದ ರೈತಾಪಿವರ್ಗದವರಿಗೂ ದೊಡ್ಡ ಗುರುಗಳೆಂದೇ ಪ್ರತೀತಿಯಾಗಿದ್ದರು. ಇಂತಹ ಮಹಾನುಭಾವರನ್ನು ನೆನೆಸುವುದು, ನಮ್ಮ ಸಮಾಜದಲ್ಲಿ ಬಾಳಿ ನಮ್ಮಗಳಿಗೆ ಮಾರ್ಗತೋರಿಸಿದವರನ್ನು ಸ್ಮರಿಸಿ ಅವರ ಬಗ್ಗೆ ನೆನಪು ಗ್ರಂಥ ತರುವುದು ಒಂದು ಭಾಗ್ಯವೇ ಸರಿ. ಈ ಕೆಲಸ ಮೈಸೂರು ಆರಾಧ್ಯಧರ್ಮಸಭಾ ಮಾಡುತ್ತಿರುವುದು ಹೆಮ್ಮೆಯ ಕೆಲಸವಾಗಿದೆ. ಅದು ಹೇಗೆಂದರೆ ಈ ಸುಭಾಷಿತ ವ್ಯಕ್ತಪಡಿಸುವಂತೆ.

*ಭದ್ರಂ ಭದ್ರಮಿತಿ ಬ್ರೂಯಾತ್ ಭದ್ರಮಿತ್ಯೇವ ವಾ ವದೇತ್|*
*ಶುಷ್ಕವೈರಂ ವಿವಾದಂ ಚ ನ ಕುರ್ಯಾತ್ ಕೇನಚಿತ್ ಸಹ||* - ಸು.

ಎಂದರೆ ನಿಮಗೆ ಒಳ್ಳೆಯದಾಗಲಿ, ನಿಮಗೆ ಶುಭವಾಗಲಿ ಎಂದೇ ನಾವು ಎಲ್ಲೆಡೆ. ಯಾವಾಗಲೂ, ಎಲ್ಲರಿಗೂ, ಎಲ್ಲ ಸಂದರ್ಭದಲ್ಲೂ ಹಾರೈಸಬೇಕು. ವಿನಾಕಾರಣ ಹಗೆತನವನ್ನು, ಕೆಲಸಕ್ಕೆ ಬಾರದ ಚರ್ಚೆಯನ್ನು ಯಾರೊಂದಿಗೂ, ಎಲ್ಲೂ ಮಾಡಬಾರದು ಎಂಬ ಮನೋಭಾವ ಬೆಳೆಸಿಕೊಂಡಂತಹ ಮಹಾಪುರುಷರಾಗಿದ್ದವರು ಜಿನ್ನಹಳ್ಳಿ ಗುರುಗಳು ಎಂಬುದು ನಿತ್ಯಸತ್ಯ ಸಂಗತಿಯಾಗಿತ್ತು.

ಎಲ್ಲ ರೀತಿಯ ಧಾರ್ಮಿಕಕಾರ್ಯ ಹಾಗೂ ಸಾರ್ವಜನಿಕಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ನಿಷ್ಕಾಮಕರ್ಮಯೋಗಿಯಾಗಿದ್ದರು. ಅಂತೆಯೇ ದಾನದಾನಗಳಲ್ಲಿ ಅತ್ಯುತ್ತಮವಾದದ್ದು ಅನ್ನದಾನ. ಮನುಷ್ಯನ ಜೀವನದಲ್ಲಿ ಅನೇಕ ಏರುಪೇರುಗಳು ಬರುತ್ತವೆ. ಅದನ್ನು ಸರಿದೂಗಿಸಿ ಶಾಶ್ವತವಾದ ಪುಣ್ಯಕೆಲಸವನ್ನು ಮಾಡಿ ಚಿರಸ್ಥಾಯಿಯಾಗಿ ಉಳಿಯಲೆಂಬ ಮನೋಭಾವನೆಯಿಂದ ಎಲ್ಲ ಜನಾಂಗದ ವಿದ್ಯಾರ್ಥಿಗಳಿಗೆ ಶಾಶ್ವತವಾಗಿ ಅನ್ನದಾನ ನಡೆಯಲೆಂಬ ಉದ್ದೇಶದಿಂದ ತಮ್ಮ ಸ್ವಯಾರ್ಜಿತಜಮೀನಿನಲ್ಲಿ ತಾವು ಒಂದು ಎಕರೆ ಇಟ್ಟುಕೊಂಡು ಎಂಬತ್ತನ್ನು ದಾನವಾಗಿ ನೀಡಿರುತ್ತಾರೆ. ಇಂತಹ ತ್ಯಾಗಮನೋಭಾವ ಹೊಂದಿದವರು ನಮ್ಮ ಜನಾಂಗದಲ್ಲಿ ಇತಿಹಾಸ ಸೃಷ್ಟಿಸಿ ಶಾಶ್ವತವಾಗಿ ಉಪಯುಕ್ತ ಕಾರ್ಯ ನಡೆಸಿರುವುದು ಸ್ತುತ್ಯರ್ಹವಾದ್ದೇ ಸರಿ. ಜನಾಂಗದ ಪರವಾಗಿ ಅವರ ಆತ್ಮಕ್ಕೆ ನಮನಗಳನ್ನು ಸಲ್ಲಿಸುವೆ. ಎಲ್ಲ ರೀತಿಯ ಧಾರ್ಮಿಕಕಾರ್ಯಗಳೆಂದರೆ ಅವರು ಉಲ್ಲಾಸಭರಿತವಾಗಿ ಸ್ಪಂದಿಸುತ್ತಲಿದ್ದವರು.

*ದಾತೃತ್ವಂ ಪ್ರಿಯ ವಕ್ತೃತ್ವಂ ಧೀರತ್ವಮ್ ಉಚಿತಜ್ಞತಾ |*
*ಅಭ್ಯಾಸೇನ ತು ಲಭ್ಯಂತೇ ಚತ್ವಾರೋ ಸಹಜಾ ಗುಣಾಃ* || - ಸು.

ಎಂದರೆ ದಾನ ಮಾಡುವ ಗುಣ, ಯಾವಾಗಲೂ ಎಲ್ಲರೊಂದಿಗೂ ಪ್ರಿಯವಾದಂಥ ಒಳ್ಳೆಯ ಮಾತುಗಳನ್ನಾಡುವುದು, ಧೈರ್ಯಶಾಲಿ ಮನೋಭಾವ ಹಾಗೂ ಉಚಿತಾನುಚಿತವಿವೇಕ ಪೂರ್ಣನಡಾವಳಿ ಈ ನಾಲ್ಕು ಗುಣಗಳು ಅಭ್ಯಾಸದಿಂದ ಬರುವಂಥವುಗಳಲ್ಲ. ಇವೆಲ್ಲ ಸಹಜವಾಗಿಯೇ, ಅಂದರೆ ತಮ್ಮ ಹುಟ್ಟಿನೊಂದಿಗೆ ತಮ್ಮ ಮಾತಾಪಿತೃಗಳ ಬಳುವಳಿಯಂಥ ಗುಣಗಳು, ಅಂತಹ ಗುಣದೊಂದಿಗೆ ಹುಟ್ಟಿದವರು ಜಿನ್ನಹಳ್ಳಿ ಕುಮಾರಾರಾಧ್ಯಸ್ವಾಮಿಗಳು. ಅಂಥವರನ್ನು, ಅಂತಹ ಗುಣ ಹೊಂದಿದ ಯಾರನ್ನಾದರೂ ನಾವು ಮುಂದಿನ ಪೀಳಿಗೆಗೆ ನಮ್ಮಲ್ಲಿ ಇಂತಹವರಿದ್ದರೆಂದು ಪರಿಚಯಿಸುವುದು ನಮ್ಮ ಕರ್ತವ್ಯವೂ ಅಹುದು ಹಾಗೂ ಹೆಮ್ಮೆಯೂ ಅಹುದು. ಇಂತಹ ಕೆಲಸವನ್ನು ಮಾಡಲು ನನ್ನ ಮನಸ್ಸು ಸೂಚಿಸಿದ್ದರಿಂದಲೇ ನಾನು ಆರಾಧ್ಯರ ಬಗ್ಗೆ ಈ ಲೇಖನ ಬರೆದುಕೊಟ್ಟಿರುವುದು. ಇಂತಹ ಮಹನೀಯರ ಬಗ್ಗೆ ನಾನು ಸರಿಕ್ರಮ ಮಾರ್ಗದಲ್ಲಿ ನಡೆದಿರುವೆ.

* * *

## ಬಳಸದ ಜ್ಞಾನ

ಉಪಯೋಗಿಸದ ಜ್ಞಾನ ವ್ಯರ್ಥ. ಜ್ಞಾನವಿಲ್ಲದ ಮನುಷ್ಯನ ಜೀವನ ವ್ಯರ್ಥ, ಜ್ಞಾನವನ್ನು ಸಂಪಾದಿಸಿದಂಥ ವ್ಯಕ್ತಿ ತನ್ನ ಜ್ಞಾನಸಂಪತ್ತನ್ನು ಅಗತ್ಯವಿರುವಂಥವರಿಗೆ ನೀಡಬೇಕು. ಹೀಗೆ ತನ್ನ ಜ್ಞಾನಸಂಪತ್ತನ್ನು ಹೆಚ್ಚು ಹೆಚ್ಚು ಬಳಸುತ್ತ ಹೋದಂತೆಲ್ಲ ಆ ಜ್ಞಾನಿಯ ಜ್ಞಾನಭಂಡಾರವು ಬೆಳೆಯುತ್ತಲೇ ಹೋಗುತ್ತದೆಯೇ ಹೊರತು ಖಾಲಿಯಾಗುವುದಿಲ್ಲ. ಖರ್ಚು ಮಾಡಿದಷ್ಟೂ ಜ್ಞಾನಸಂಪತ್ತು ಹೆಚ್ಚುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳದೆ, ತನ್ನಲ್ಲಿನ ಜ್ಞಾನಸಂಪತ್ತನ್ನು ತನ್ನಲ್ಲೇ ಬಚ್ಚಿಟ್ಟುಕೊಂಡರೆ, ಅಂಥ ಜ್ಞಾನ ಇದ್ದು ಇಲ್ಲದಂತೆ. ಜ್ಞಾನ ಎಂಬುದು ಮನುಷ್ಯನ ಪಾಲಿಗೆ ಅನಿವಾರ್ಯ. ಜ್ಞಾನವಿಲ್ಲದೇ ಹೋದರೆ ಆತ ಮನುಷ್ಯರೂಪದ ಪ್ರಾಣಿ. ಆದ್ದರಿಂದ ಜ್ಞಾನವಿಲ್ಲದ ಮನುಷ್ಯಜೀವಿತವೇ ವ್ಯರ್ಥ. ಆತ ಮನುಷ್ಯನಾಗಿ ಹುಟ್ಟಿದ್ದೂ ವ್ಯರ್ಥ.

ಜ್ಞಾನವಿದ್ದವ ಶಿಸ್ತಿನಿಂದ ಬೆಳೆಯುತ್ತಾನೆ. ಬದುಕನ್ನು ಶಿಸ್ತಿನಿಂದ ರೂಪಿಸಿಕೊಳ್ಳುತ್ತಾನೆ. ಆತ ಮಾರ್ಗದರ್ಶಕನಾಗುತ್ತಾನೆ. ಅವನು ಸಂಘಸಂಸ್ಥೆಗೆ, ಸಮಾಜಕ್ಕೆ, ರಾಷ್ಟ್ರಕ್ಕೆ ಹಾಗೂ ತನ್ನ ಕುಟುಂಬಕ್ಕೆ ಮಾರ್ಗದರ್ಶಕನಾಗಿ ಸಮರ್ಥನಾಯಕನಾಗಿ ರೂಪುಗೊಳ್ಳುತ್ತಾನೆ.

# ಸ್ಮೃತಿಶ್ರೀ

"ಯುಗಕ್ಕೊಮ್ಮೆ ಸಿಡಿಯುವ ಮಹಾ ಚೇತನವೆಂದು ಹೇಳುವ ದಾರ್ಶನಿಕರ ಮಾತಿಗೆ ಪುಷ್ಟಿಕೊಡುವಂತೆ ಅವತರಿಸಿದವರು ಶ್ರೀಕುಮಾರಾರಾಧ್ಯರು. *"ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ"* ಎಂಬ ಬಸವಣ್ಣನವರ ವಚನಕ್ಕೆ ಸಾಕ್ಷಿಯಾಗಿ ಬಾಳಿ, ಬದುಕಿಗೆ ಮಾದರಿಯಾದವರು ಇವರು.

"ಸಾವಿರಮೈಲಿ ಪ್ರಯಾಣವಾದರೂ ಒಂದು ಹೆಜ್ಜೆಯಿಂದಲೇ ಆರಂಭವಾಗುತ್ತದೆ". ಆದುದರಿಂದ ಮೊದಲಿನಿಂದ ಪ್ರಾರಂಭಿಸೋಣವೇ?

ನನ್ನ ತಾತನವರು ಮೈಸೂರು ಜಿಲ್ಲೆಯ ಹೆಚ್. ಡಿ. ಕೋಟೆ ತಾಲ್ಲೂಕು ಹಂಪಾಪುರದ ಹೋಬಳಿಗೆ ಸೇರಿದ ಜಿನ್ನಹಳ್ಳಿ ಗ್ರಾಮದವರು. ಇವರು ಶ್ರೀರೇವಣಾರಾಧ್ಯ ಮತ್ತು ಶ್ರೀಮತಿ ಬಸವಾಜಮ್ಮನವರ ಜ್ಯೇಷ್ಠಪುತ್ರರಾಗಿ 1885ನೇ ಜೂನ್ 21ರಲ್ಲಿ ಜನಿಸಿದರು. ಇವರ ಬಾಲ್ಯದ ಬಗ್ಗೆ ತಿಳಿದುಕೊಳ್ಳಲು ಇವರ ಸಮಕಾಲೀನರು ನನಗೆ ದೊರಕದಿದ್ದುದರಿಂದ ಬಾಲ್ಯದ ಬಗ್ಗೆ ಬರೆಯಲು ಶಕ್ತಳಲ್ಲ.

ಇನ್ನು ಅವರ ಬೆಳವಣಿಗೆಯ ಎರಡನೆಯ ಹಂತ ಹಾಗೂ ಅವರ ಪಾಲಿನ ಚಿನ್ನದಯುಗವೆಂದೇ(golden age) ಹೇಳಬಹುದಾದ ಹಾಗೆ ಅವರು ಕೂಡ ತಮ್ಮ ಈ ಅಮೂಲ್ಯವಾದ ಕಾಲವನ್ನು ಚೆನ್ನಾಗಿ ಅಂದರೆ ಸ್ವಲ್ಪವೂ ಅಲಸಿಯಾಗದೆ, ಕಾಲವನ್ನು ವ್ಯರ್ಥಮಾಡದೆ ತಮ್ಮ ಸುತ್ತಮುತ್ತಲ ಪರಿಸರಕ್ಕೆ, ಗ್ರಾಮಕ್ಕೆ, ಹಳ್ಳಿಗರಿಗಾಗಿ ಮೀಸಲಿಟ್ಟು ತುಂಬು ಜೀವನ ನಡೆಸಿದ್ದಾರೆ. ಅವರು *"ಮನೆಯೊಳಗೆ ಹುಟ್ಟಿದರೂ ಮಂದಿಯೊಳಗೆ ಬೆಳೆಯಿರಿ"* ಎಂಬ ಮಾತಿನ ಹಾಗೆ ಬಾಳಿದವರು.



**- ಎನ್. ಕವಿತಾ**
ಕೆ.ಇ.ಬಿ.ನಗರ
ಸೆಂಟ್‌ಜಾನ್ ಕಾನ್ವೆಂಟ್ ಎದುರು
ಮಂಡ್ಯ ಟೌನ್.

"ನಿಮಗೆ ಓದಲು ಸಾಧ್ಯವಾದರೆ ಪ್ರತಿಯೊಬ್ಬ ವ್ಯಕ್ತಿಯೂ ಒಂದು ಸಂಪುಟ"ಅಲ್ಲವೇ? ನಮ್ಮ ತಾತನವರ ತಂದೆ ರೇವಣಾರಾಧ್ಯರೂ ಸಹ ಧರ್ಮರಕ್ಷಕರು, ಗ್ರಾಮದ ಹಿತರಕ್ಷಣೆ ಬಗ್ಗೆ ಕಾಳಜಿ ಇದ್ದವರು. ಅವರು ಹಲವು ದೇವಾಲಯಗಳ ಜೀರ್ಣೋದ್ಧಾರ ಮಾಡಿಸಿದ್ದಾರೆ. ಊರಿನ ಧರ್ಮ ಕಾರ್ಯಗಳಲ್ಲಿ ಭಾಗವಹಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಜಿನ್ನಹಳ್ಳಿ ಗ್ರಾಮದ ಮಹದೇಶ್ವರ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯದಲ್ಲಿ ಹಿರಿಯ ಗ್ರಾಮಸ್ಥರ ಒಡಗೂಡಿ ದೇವಸ್ಥಾನದ ಕಟ್ಟಡದ ಪುನರ್‌ನಿರ್ಮಾಣಕಾರ್ಯದಲ್ಲಿ ಭಾಗವಹಿಸಿ 8 ಅಂಕಣ ಕಲ್ಲುಕಟ್ಟಡದ ದೇವರ ಗುಡಿಯ ನಿರ್ಮಾಣ ಮಾಡಿಸಿದವರು . ಆಗಿನಿಂದಲೂ ಪ್ರತಿವರ್ಷ ಚೈತ್ರಶುದ್ಧಪಾಡ್ಯಮಿ ದಿವಸ ಕಪಿಲಾನದಿದಡದಲ್ಲಿ ಶ್ರೀ ಮಹದೇಶ್ವರದೇವರ ಜಾತ್ರೆಯು, ತೆಪ್ಪೋತ್ಸವ, ಬಾಯಿಬೀಗ, ಹುಲಿವಾಹನಸೇವೆ ನಡೆಸಲ್ಪಡುತ್ತದೆ. ಆ ಕಾಲಕ್ಕೆ ಸರಿಯಾಗಿ ಕೋರಿಕೆಯಂತೆ ಸುತ್ತಮುತ್ತಣ ಗ್ರಾಮಗಳ ದೇವಸ್ಥಾನದ ಉತ್ಸವ ಮೂರ್ತಿಗಳು ದಯಮಾಡಿ ಜಾತ್ರೆಯಲ್ಲಿ ಪಾಲ್ಗೊಂಡು, ಪೂಜೆಯು ನಡೆದು ಮಹದೇಶ್ವರದೇವಸ್ಥಾನಕ್ಕೆ ಬಿಜಯಂಗೈದು ಪ್ರದಕ್ಷಿಣೆ ನಡೆಸಿ ತಮ್ಮ ಗ್ರಾಮಗಳಿಗೆ ತೆರಳುತ್ತವೆ.

ಪ್ರತಿವರ್ಷವೂ ಆಶ್ವಯುಜಶುದ್ಧ ಪಾಡ್ಯಮೀ ದಿನ ಮಹದೇಶ್ವರದೇವರ ವಿಗ್ರಹಮೂರ್ತಿಯು ಪಟ್ಟಕ್ಕೆ ಕೂತು ವಿಜಯದಶಮಿ ದಿವಸ ಬನ್ನಿಮಂಟಪಕ್ಕೆ ತೆರಳುತ್ತದೆ. ಪ್ರತಿವರ್ಷವೂ ದೀಪಾವಳಿ ಹಬ್ಬದ ಅಮಾವಾಸ್ಯೆದಿನ ಜಿನ್ನಹಳ್ಳಿ, ಮಲ್ಲಾರದ ಹುಂಡಿ ಗ್ರಾಮಸ್ಥರು ಸೇರಿ ಹಂಪಾಪುರದ ಶೆಟ್ಟರಗಾಣದಿಂದ ನಿಷ್ಠೆಯಿಂದ ಪೂಜಿಸಿ ತೆಗೆದ ಎಣ್ಣೆಯನ್ನು ಮತ್ತು ಹಿಂಡಿಯನ್ನು ಮಡಿಯಲ್ಲಿ ಜಿನ್ನಹಳ್ಳಿ ಆರಾಧ್ಯರ ಗುರುಮಠಕ್ಕೆ ತರುತ್ತಾರೇ. ತಮ್ಮಡಿ ವಂಶಿಕರು ಆರಾಧ್ಯಗುರುಗಳ ಪಾದಪೂಜೆ ನಡೆಸಿ ಛತ್ರಿಚಾಮರ, ಕೊಂಬು, ತಮ್ಮಟೆ, ವಾದ್ಯ, ನಡೆಮುಡಿಯಲ್ಲಿ ಗದ್ದಿಗೆ ಇಂದ ಗ್ರಾಮದ ಬೀದಿಯಲ್ಲಿ ಭಕ್ತರುಗಳಿಂದ ಪಾದಪೂಜೆಯಾಗುತ್ತ ದೇವಸ್ಥಾನಕ್ಕೆ ಬಿಜಯಂಗೈದು ದೇವರಿಗೆ ಬೆಳಗಿನ ಜಾವದ ತನಕ ಎಣ್ಣೆ-ಮಜ್ಜನವು, ರುದ್ರಾಭಿಷೇಕ. ಮಹಾಮಂಗಳಾರತಿ, ಪ್ರಸಾದ ವಿನಿಯೋಗವಾಗುತ್ತದೆ. ಈ ಪದ್ಧತಿ ಅನಾದಿಯಿಂದಲೂ ನಡೆದುಕೊಂಡು ಬಂದು ಈಗಲೂ ಚಾಲ್ತಿಯಲ್ಲಿದೆ. ಪ್ರತಿ ವರ್ಷವೂ ಕಾರ್ತಿಕಮಾಸದಲ್ಲಿ ದೀಪಾರಾಧನೆಯೂ, ಪೂಜೆಯೂ ನಡೆಯುತ್ತದೆ. ಈ ದೇವಸ್ಥಾನಕ್ಕೆ ಆಗಮಿಕರು ಜಿನ್ನಹಳ್ಳಿ ಗುರುಮಠದ ಶ್ರೀಆರಾಧ್ಯರಾಗಿರುತ್ತಾರೆ. 3 ಮತ್ತು 4 ವರ್ಷಕ್ಕೊಮ್ಮೆ ಮಹದೇಶ್ವರಜಾತ್ರೆ, ಆರಾಧನೆ, ಕೊಂಡ, ರುದ್ರಾಭಿಷೇಕವೂ ಸಹ ನಡೆಯುವ ಪದ್ಧತಿ ಇರುತ್ತೆ. ಈ ಗುಡಿಯ ಪಶ್ಚಿಮ ದಿಕ್ಕಿಗೆ ಕೊಂಡದ ಗುಳಿ ಮಾಡಿದೆ. ಅದರ ಬಳಿ ಒಂದು ಅಂಕಣ ಕಲ್ಲು ಮಂಟಪದ ಮೇಲ್ಭಾಗದಲ್ಲಿ ದೊಡ್ಡದಾದ ಬಸವ ವಿಗ್ರಹಮೂರ್ತಿ ಇದೆ. ಜಿನ್ನಹಳ್ಳಿ ಗ್ರಾಮದಲ್ಲಿ ಮಾರಮ್ಮ ದೇವಸ್ಥಾನವಿದೆ. ಈ ದೇವಸ್ಥಾನದ ಸರಹದ್ದು ಜಿನ್ನಹಳ್ಳಿ ಗ್ರಾಮಕ್ಕೂ, ಮಲ್ಲಾರದಹುಂಡಿ ಗ್ರಾಮಕ್ಕೂ, ಹಂಪಾಪುರ ಗ್ರಾಮಕ್ಕೂ ಸಹ ಸೇರಿರುತ್ತೆ. ಪ್ರತಿ ವರ್ಷ ಫಾಲ್ಗುಣ ಮಾಸದ ಬಹುಳದಲ್ಲಿ ಮಾರಮ್ಮದೇವತೆ ಹಬ್ಬ ಸಹ ಜಿನ್ನಹಳ್ಳಿ ಮಠದ ಆರಾಧ್ಯರ ಮುಂದಾಳತ್ವದಲ್ಲಿ ನಡೆಸಲ್ಪಡುತ್ತದೆ. ಹೊದೆ ಆಟ, ಮಾರಿ ಕುಣಿತ, ಆಚಾರಿಮುಖವಾಡಕುಣಿತ ಸಹ ನಡೆಸಲ್ಪಡುತ್ತದೆ.

ಜಿನ್ನಹಳ್ಳಿ ಗ್ರಾಮದಲ್ಲಿ ಹಂಪಾಪುರಕ್ಕೆ ಹೋಗುವ ರಸ್ತೆ ಬಾಜು ಪಶ್ಚಿಮ ದಿಕ್ಕಿನಲ್ಲಿ ಬೇವಿನ ಮರದ ಸಮೀಪ ಕಲ್ಲು ಕಟ್ಟಡದಲ್ಲಿ ಮುರುಡ ಬಸವೇಶ್ವರ ದೇವರು ಸ್ಥಾಪಿತವಾಗಿದ್ದು. ಈ ದೇವರು ಜಿನ್ನಹಳ್ಳಿ, ಮಲಾರದ ಹುಂಡಿ, ಕಾರೆಹುಂಡಿ ಗ್ರಾಮಕ್ಕೂ ಸಹ ಸೇರಿದ್ದಾಗಿದೆ. ಮಳೆ ಬಾರದೆ ಸಿಧಾನಿಸಿದಲ್ಲಿ ಫಸಲು ಬಾಡುತ್ತ ಬಂದಾಗ ಮೇಲ್ಕಂಡ ಮುರುಡಬಸವೇಶ್ವರ ದೇವರನ್ನು ಕಪಿಲಾನದಿಯಲ್ಲಿ ಸ್ನಾನಕ್ಕಾಗಿ ಕೂರಿಸಿ ಅಲ್ಲೇ ಬಿಟ್ಟಲ್ಲಿ ಮಳೆಯು ಶುರುವಾಗಿ ಸಮೃದ್ಧಿಯಾಗಿ ಬರುತ್ತದೆ. ಈ ಪದ್ಧತಿ ಪೂರ್ವದಿಂದಲೂ ನಡೆದು ಬಂದಿದೆ. ಅನಂತರ ಮುರುಡ ಬಸವೇಶ್ವರದೇವರಿಗೆ ಪುಣ್ಯಾಹ , ಹೋಮ, ಹವನ ಮತ್ತು ರುದ್ರಾಭಿಷೇಕ ನಡೆಸಿ ಅದರ ಮೂಲಸ್ಥಾನಪಥದಲ್ಲಿ ಕೂರಿಸಲ್ಪಡುತ್ತೆ. ಗ್ರಾಮದಲ್ಲಿ ಗೋವುಗಳು ತಪ್ಪಿಸಿಕೊಂಡಾಗ ಈ ದೇವರಲ್ಲಿ ಹರಕೆ ಹೊತ್ತಲ್ಲಿ ಗೋವುಗಳು ಅವರವರ ಮನೆಗೆ ವಾಪಸ್ಸು ಬರುತ್ತವೆ ಎಂಬ ನಂಬಿಕೆ ಇದೆ. ವರ್ಷಪೂರ್ತಿ ಆರಾಧನೆ ಗ್ರಾಮಸ್ಥರು ನಡೆಸುತ್ತಿದ್ದಾರೆ. ಈ ದೇವರ ಆಗಮಿಕರು ಆರಾಧ್ಯರ ಮನೆತನದವರೇ. ಇಂತಹ ಒಳ್ಳೆಯ ಮನೆತನದಲ್ಲಿ ಜನಿಸದವರೇ ನನ್ನ ತಾತನವರು.

*"ಒಳ್ಳೆಯ ನೆಲದಲ್ಲಿ ಒಳ್ಳೆಯ ಮಗನಲ್ಲಿ ಇಟ್ಟದ್ದು ಕೊಟ್ಟಿದ್ದು ಎಂದೂ ಹಾಳಾಗುವುದಿಲ್ಲ"* ಎನ್ನುವ ಮಾತಿನ ಹಾಗೆ ಆರ್. ಕುಮಾರಾರಾಧ್ಯರು ಅವರ ತಂದೆಯ ನಂಬಿಕೆ, ವಿಶ್ವಾಸಕ್ಕಿಂತ ಮಿಗಿಲಾಗಿ ತಾವು ಬೆಳೆದರು. ತಂದೆಗೆ ಕೀರ್ತಿಯನ್ನು ತಂದರು ಅವರು ಒಂದು ವ್ಯಕ್ತಿಯಾಗದೇ ಶಕ್ತಿಯಾಗಿ ಬೆಳೆದರು.

ತಂದೆಯಂತೆ ಮಗ ಧರ್ಮದ ಕೆಲಸದಲ್ಲಿ, ಊರಿಗೆ ಉಪಯೋಗಿ. "ಜನರಲ್ಲಿ ಸದ್ಗುಣವಿದ್ದರೆ ಅವು ತಾವಾಗಿಯೇ ಪ್ರಕಾಶಕ್ಕೆ ಬರುತ್ತವೆ. ಕಸ್ತೂರಿಯ ಸುಗಂಧವನ್ನು ಮುಚ್ಚಿಡಲು ಸಾಧ್ಯವೇ"? ತಾತ ಪ್ರತಿಯೊಂದು ಪ್ರಗತಿಪರ ಕಾರ್ಯದಲ್ಲಿ ಭಾಗಿಯಾಗಿದ್ದಾರೆ. ಈ ಊರಿನ ದೇವಸ್ಥಾನಗಳ ಜೀರ್ಣೋದ್ಧಾರದಲ್ಲಿ ಇವರ ಪಾತ್ರವಿದೆ. ವೈದಿಕಮನೆತನದಿಂದ ಬಂದವರಾದರೂ ಸಂಪ್ರದಾಯದ ಕಟ್ಟುಪಾಡುಗಳ ಮಧ್ಯೆಯೂ ಮೇಲುಕೀಳೆಂಬ ತಾರತಮ್ಯವಿಲ್ಲದೆ. ಬಡವ, ಬಲ್ಲಿದನೆಂಬ ಭಿನ್ನಭಾವವಿಲ್ಲದೆ ಸರಳ ಜೀವಿಯಾಗಿದ್ದರು. ಅದಕ್ಕೆ ಸಾಕ್ಷಿಗಳು ಹಲವಾರು

ಈ ಗ್ರಾಮದಲ್ಲಿ ಎಲ್ಲ ಜನಾಂಗದವರಿದ್ದಾರೆ. ಪರಿವಾರದ ಕೋಮಿನ ಜನಾಂಗದವರು ಆರ್. ಕುಮಾರಾರಾಧ್ಯರು ಜಿ. ಎಸ್. ಕೃಷ್ಣಮೂರ್ತಿಯವರ ಪ್ರೋತ್ಸಾಹದಿಂದ ಹಪ್ಪಿನ ಚಾವಡಿ ಬಾಜು ಶ್ರೀರಾಮ ಮಂದಿರದ ಒಂದು ಅಂಕಣ ಕಟ್ಟಿಸಿದ್ದಾರೆ. ಬೆಂಗಳೂರು ಚಿಕ್ಕನಾಯ್ಕರಿಂದ ಇಲ್ಲಿನ ಪರಿವಾರದ ಬಾಲಕರಿಗೆ ಭಜನೆ, ಕೀರ್ತನೆ, ಹಾರ್ಮೋನಿಯಂ, ಮದ್ದಲೆ ಬಾರಿಸತಕ್ಕ ಪದ್ಧತಿ ಕಲಿಸಿದ್ದಾರೆ. ಪ್ರತಿ ನಿತ್ಯವೂ ದೀಪಾರಾಧನೆಯು ನಡೆಸಲ್ಪಡುತ್ತದೆ. ವಾರಕ್ಕೊಮ್ಮೆ ಭಜನೆ, ಸಂಗೀತ, ಉತ್ಸವ ಪ್ರತಿ ವರ್ಷ ರಾಮಪಟ್ಟಾಭಿಷೇಕ, ಅನ್ನದಾನ ನಡೆಯುತ್ತದೆ. ಊರ ಪೂರ್ವ ದಿಕ್ಕಿನ ಜಾಗ ಅಕ್ವೈರ್ ಮಾಡ್ಸಿಕೊಂಡಿರುವ ನಿವೇಶನದಲ್ಲಿ ನಮ್ಮ ತಾತನವರು ಪರಿವಾರದ ಕೋಮಿನವರುಗಳಿಗೆ ಶ್ರೀರಾಮಮಂದಿರಕ್ಕೆ ಜಾಗ ಬಿಡ್ಸಿಕೊಟ್ಟಿರುತ್ತಾರೆ. *"ವ್ಯಕ್ತಿಗೆ ವ್ಯಕ್ತಿತ್ವ ಹೂವಿಗೆ ಸುಗಂಧವಿದ್ದಂತೆ"* ಇದರಿಂದ ತಿಳಿಯುತ್ತದೆ.

ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರ ಗ್ರಾಮದಲ್ಲಿ ಶ್ರೀ ಬಸವೇಶ್ವರ ದೇವರು, ಆಂಜನೇಯಸ್ವಾಮಿ ದೇವರುಗಳಿಗೆ ಒಂದೇ ಕಟ್ಟಡದಲ್ಲಿ ಮಧ್ಯೆ ಗೋಡೆಹಾಕಿ, ಒಂದೇ ಸೂರಿನಡಿ ಬಸವೇಶ್ವರನನ್ನು ಶೈವರು, ಆಂಜನೇಯ ಸ್ವಾಮಿಯನ್ನು ವೈಷ್ಣವರು ಪೂಜಿಸುತ್ತಾರೆ. ಇದು ಇಂದಿನ ಸಮಾಜದಲ್ಲಿ ಜಾತಿಯ ಹೆಸರಲ್ಲಿ, ದೇವರ ಹೆಸರಲ್ಲಿ, ಕೋಮು ಗಲಭೆ ಮಾಡುವ ಸಮಾಜ ಘಾತುಕರು ಇದನ್ನು ನೋಡಿ ತಲೆ ತಗ್ಗಿಸುವಂತಲ್ಲವೇ ?

*"ಗುಡ್ಡದಂತೆ ಎತ್ತರವಾಗುವುದರಲ್ಲಿ ನನಗೆ ಆನಂದವಿಲ್ಲ, ನನ್ನ ಮಣ್ಣು ಸುತ್ತಮುತ್ತಲಿನ ನೆಲದ ಮೇಲೆ ಹರಡಿ ಹೋಗುವುದರಲ್ಲಿಯೇ ನನಗೆ ಆನಂದ."*ಎನ್ನುವ ವಿನೋಬಾರವರ ಮಾತನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡವರು ನಮ್ಮ ತಾತ. ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರದಲ್ಲಿ 1920ನೇ ಜನವರಿಯಲ್ಲಿ ಪೋಸ್ಟ್ ಆಫೀಸ್ ಸ್ಥಾಪನೆಯಾಗಲು ಕಾರಣೀಭೂತರಾದರು.

1944 ರಿಂದ 1954ನೇ ಸಾಲಿನವರೆಗೆ ಹಂಪಾಪುರ ಗ್ರಾಮದ ವಿಲೇಜ್ ಮುನ್ಸೀಫ್‌ರಾಗಿ ಕುಮಾರಾರಾಧ್ಯರು ಕಾರ್ಯ ನಿರ್ವಹಿಸಿ ಸುತ್ತಮುತ್ತಲ ಎಷ್ಟೋ ತಕರಾರುಗಳಿಗೆ ನ್ಯಾಯ ಸಲ್ಲಿಸಿ ಸುತ್ತಮುತ್ತಲ ಹಳ್ಳಿಯಲ್ಲಿ " *ದೊಡ್ಡ ಅಯ್ಯನವರ ನ್ಯಾಯವೇ ನ್ಯಾಯ* " ಎನ್ನುವಷ್ಟರ ಮಟ್ಟಿಗೆ ನ್ಯಾಯದೇವತೆಯ ಸೇವೆ ಮಾಡಿದ್ದಾರೆ. 1916ಫೆಬ್ರವರಿ 17ರಿಂದ 1958ನೇ ಸಾಲಿನವರೆಗೆ ಜನರಲ್‌ಸ್ಟಾಂಪ್‌ವೆಂಡರ್ ಆಗಿಯೂ ಕಾರ್ಯ ನಿರ್ವಹಿಸಿರುತ್ತಾರೆ.

" ಶರತ್ಕಾಲದಲ್ಲಿ ಮೋಡ ಗರ್ಜಿಸುತ್ತದೆ, ಮಳೆ ಸುರಿಸುವುದಿಲ್ಲ, ವರ್ಷಾಕಾಲದಲ್ಲಿ ಶಬ್ದಮಾಡುವುದಿಲ್ಲ, ಮಳೆ ಸುರಿಸುತ್ತದೆ. ನೀಚನಾದವನು ಆಡುತ್ತಾನೆ ಮಾಡುವುದಿಲ್ಲ, ಒಳ್ಳೆಯವನು ಆಡುವುದಿಲ್ಲ ಮಾಡುತ್ತಾನೆ." ಹಾಗೆ ಇವರು ಕೂಡ. ನನ್ನ ತಾತ ಹಾಗೂ ಹಂಪಾಪುರದ ಛೇರ್‌ಮನ್‌ರಾಗಿದ್ದ ಮುತ್ತಣ್ಣನವರು ಸೇರಿ ಮೈಸೂರು ಸಂಸ್ಥಾನದ ಸೀನಿಯರ್ ಸರ್ಜನ್ ಡಾಕ್ಟರ್ ಉಸ್‌ಮಾನ್ ಸಾಹೇಬರು ಅವರ ಪೂರ್ಣ ಸಹಕಾರದಿಂದ ಸರ್ಕಾರಿ ಆಸ್ಪತ್ರೆ ತೆರೆಯಲು ಅನುಮತಿ ದೊರಕಿಸಿ ಆಗ್ಗೆ ಮೈಸೂರು ಡಿಸ್ಟ್ರಿಕ್ ಕಲೆಕ್ಟರ್ (ಡೆಪ್ಯೂಟಿ ಕಮಿಷನರ್) ಅನಂತರಾಮನ್‌ರವರ ಅಧ್ಯಕ್ಷತೆಯಲ್ಲಿ ಸರಕಾರಿ ಆಸ್ಪತ್ರೆ ಸ್ಥಾಪನೆ 1928ನೇ ಇಸ್ವಿಯಲ್ಲಿ ನಡೆದು ಅದರ ಪ್ರಯೋಜನ ಇಂದಿಗೂ ಲಭಿಸುತ್ತಿದೆ.

ಆರಾಧ್ಯರವರ ಅರ್ಜಿಯ ಮೇರೆಗೆ ಡೆಪ್ಯೂಟಿ ಕಮಿಷನರ್ ಅನಂತರಾಮನ್ ಅವರ ಆದೇಶದಂತೆ ಅವರ ಅಧ್ಯಕ್ಷತೆಯಲ್ಲಿ ಹಂಪಾಪುರ ಗ್ರಾಮದಲ್ಲಿ ಸಂತೆ ಪ್ರಾರಂಭವಾಯಿತು. ಈಗಲೂ ಆ ಪ್ರದೇಶದ ಜನ ಪ್ರಯೋಜನ ಪಡೆಯುತ್ತಿದ್ದಾರೆ.

"ದೇವರು ಭೂಮಿ ಎಂಬ ರತ್ನಗಂಬಳಿಯನ್ನು ಹಾಸಿದ್ದಾನೆ. ಅದರ ವಿಸ್ತಾರವಾದ ವಿವಿಧ ದಾರಿಗಳಲ್ಲಿ ಅನೇಕ ಉತ್ತಮ ದಾರಿಗಳಿವೆ." ಈ ದಾರಿಯಲ್ಲಿ ನಡೆದು ಜನೋಪಕಾರಿಕೆಲಸ ಮಾಡಿದ ಶ್ರೀಯುತರು 1927ರಲ್ಲಿ ತಾವು ಹಾಗೂ ತಮ್ಮ ಜೊತೆಯ ಮುಸ್ಲಿಂ ಗೆಳೆಯರಾದ ಮಸ್ತಾನ್ ಸಾಹೇಬ್, ಮಾರ್ಚಹಳ್ಳಿ ಪಟೇಲ್ ಅಬ್ದುಲ್ ಲತೀಫ್ ಸಾಹೇಬ್‌ರವರೊಡಗೂಡಿ

ತಮ್ಮ ಸ್ವಂತ ಖರ್ಚಿನಲ್ಲಿ ಕಮಿಷನರ್‌ರವರ ಸಮ್ಮುಖದಲ್ಲಿ ಬಡಜನರ ಪಂಚಕಲ್ಯಾಣವನ್ನು (ಐದು ಮದುವೆ) ಮಾಡಿಸಿರುತ್ತಾರೆ.

1928ನೇ ಸಾಲಿನಲ್ಲಿ ಮೈಸೂರು ಸಂಸ್ಥಾನದ "ಮಿರ್ಜಾ ಮಹಮ್ಮದ್ ಇಸ್ಮಾಯಿಲ ಸಾಹೇಬರು ಆರಾಧ್ಯರ ಮೂಲಕ ಬಂದ ಗ್ರಾಮದವರ ಬೇಡಿಕೆಯಂತೆ ಹಂಪಾಪುರದ ಪ್ರವಾಸಿ ಮಂದಿರಕಟ್ಟಡಕ್ಕೆ ಪಶುವೈದ್ಯ ಆಸ್ಪತ್ರೆಯನ್ನು ವರ್ಗಾಯಿಸಿದ್ದಾರೆ. ಆ ದಿನವೇ ಮೈಸೂರ ಅಡ್ವೋಕೇಟ್ ಸಿ. ನರಸಿಂಹಯ್ಯನವರು, ಸೇರಿದ ಮಹಾಜನರುಗಳ ಸಮ್ಮುಖದಲ್ಲೇ ಸ್ವ ತಾತನವರು ಹಂಪಾಪುರದ ಆಸ್ಪತ್ರೆಗೆ ಬರತಕ್ಕ ಖಾಯಿಲೆ ಜನಗಳ ಗಂಜಿ, ಹಾಲಿನ ವ್ಯವಸ್ಥೆಗಾ ತಮ್ಮ ಬಾಬ್ತು ಜೊಂಪ್ನಹಳ್ಳಿ ಗ್ರಾಮದಲ್ಲಿ ನಾಲಾ ಕೆಳಭಾಗದಲ್ಲಿರುವ ಜಮೀನಿನಲ್ಲಿ 15ಎಕ ಜಮೀನನ್ನು ದಾನವಾಗಿ ಬಿಟ್ಟುಕೊಟ್ಟರು. ಸದರಿ ಜಮೀನನ್ನು ಹರಾಜುಮಾಡಿ ಬಂದ ಹಣವನ್ನು ಹೆಗ್ಗಡದೇವನಕೋಟೆ ತಾಲ್ಲೂಕು ಟ್ರಜರಿಯಲ್ಲಿ ಡಿಪಾಸಿಟ್ ಇಟ್ಟು ಬಂದ ಬಡ್ಡಿ ಹಣದಿಂದ ರೋಗಿಗಳಿಗೂ, ಮಕ್ಕಳಿಗೂ ಹಾಲುಹಣ್ಣಿನ ವಿತರಣೆಯ ಸತ್ಕಾರ್ಯಕ್ಕೆ ನೆರವಾಗಿದ್ದಾರೆ.

ಆರಾಧ್ಯರ ಅರ್ಜಿಯ ಮೇರೆಗೆ ಡಿಸ್ಟ್ರಿಕ್ ಸೂಪರಿಟೆಂಡೆಂಟ್ ಸಾಹೇಬರು ಮರಿಯಪ್ಪನವರ ಕಾಲದಲ್ಲಿ ಹಂಪಾಪುರದಲ್ಲಿ ಮಂಗಳೂರುಹೆಂಚಿನ ಇಟ್ಟಿಗೆಕಟ್ಟಡವನ್ನು ಪೋಲಿಸ್‌ಸ್ಟೇಷನ್‌ಗಾಗಿ ಕಟ್ಟಲ್ಪಟ್ಟಿತು.

ಮೊದಲಿಗೆ ಹಂಪಾಪುರದಲ್ಲಿ ಧರ್ಮಛತ್ರವೊಂದಿತ್ತು. ಅದು ತುಂಬ ಶಿಥಿಲಾವಸ್ಥೆಯಲ್ಲಿತ್ತು. ಆರಾಧ್ಯರು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ ಇದನ್ನು ಸರಿಪಡಿಸಲು ಕೇಳಿಕೊಳ್ಳಲಾಗಿ ಮೈಸೂರು, ಡಿಸ್ಟ್ರಿಕ್ ಬೋರ್ಡ್ ಚೆನ್ನಬಸಪ್ಪನವರು ಹಳೇ ಕಟ್ಟಡದ ರಿಪೇರಿಗೆ ತುಂಬ ಹಣ ವ್ಯಯವಾಗುತ್ತದೆ. ಅದರ ಬದಲು ಬೇರೆ ಪ್ರವಾಸಿ ಬಂಗಲೆ ಕಟ್ಟಿಸಲು ಅಪ್ಪಣೆ ಮಾಡಿ ಹಳೇ ಛತ್ರದಲ್ಲಿದ್ದ ಚಪ್ಪಡಿ ಕಲ್ಲುಗಳು, ಜಿಂಗ್ಶೀಟ್, ಹಳೆ ಕಾಲದ ತೊಲೆಗಳು, ಸರಪಟ್ಟಿ, ಬಾಗಿಲುಗಳು ವಗೈರೆ ಸಾಮಾನುಗಳನ್ನು ಹರಾಜು ಮಾಡಿಸಿ ಹಾಲಿ ಇರತಕ್ಕ ಪ್ರವಾಸಿ ಮಂದಿರವನ್ನು ಇಟ್ಟಿಗೆ ಕಟ್ಟಡ ಕಟ್ಟಿಸಿದರು.

*"ಪುಸ್ತಕಗಳನ್ನಷ್ಟೇ ಅಲ್ಲದೇ ಜೀವನವನ್ನೂ ಓದಲು ಬಲ್ಲವನು ಬುದ್ಧಿವಂತ"*

ಹಂಪಾಪುರದಲ್ಲಿ ಪ್ರೈಮರಿ ಶಾಲೆ ಹಾಗೂ ವೆಟರ್‌ನರಿ ಆಸ್ಪತ್ರೆಯೂ ಸಹ ಪ್ರಾರಂಭವಾಯಿತು ಇವರ ನೇತೃತ್ವದಲ್ಲಿ

ಹಂಪಾಪುರದ ಸ್ಟೇಷನ್ ಪೂರ್ವದಿಕ್ಕಿನ ಭಾಗದಲ್ಲಿ ಒಂದು ಬಸ್‌ಸ್ಟ್ಯಾಂಡ್ ಕೂಡ ಕಟ್ಟಿಸಿದ್ದಾರೆ. ಪಶ್ಚಿಮದಿಕ್ಕಿನಲ್ಲಿ ಉಳಿದ ಜಾಗದಲ್ಲಿ ದಫೇದಾರ್ ಶ್ರೀ ನಾಗಪ್ಪನವರು ಹಾಗೂ ಗ್ರಾಮಸ್ಥರುಗಳ ಸಹಕಾರದಿಂದ ದಿಂಡಿನಲ್ಲಿ ಗಾರೆ ಕಟ್ಟಡದ ಅರಳಿಕಟ್ಟೆ ಕಟ್ಟಿಸಿ. ಅರಳಿಗಿಡ, ಬೇವಿನ ಸಸಿ ಹಾಕಿಸಿ ವಿವಾಹಮಹೋತ್ಸವ ಮಾಡಿಸಿ ವಿಜೃಂಭಣೆಯಿಂದ ಸಂತರ್ಪಣೆ ನಡೆಸಿದರು. ಇಂದು ಪ್ರಯಾಣಿಕರು ಅವರ ನೆರಳಿನಲ್ಲಿ ಆಶ್ರಯ ಪಡೆಯುತ್ತಾರೆ.

ಹಂಪಾಪುರದ ಹೊಸ ಬೀದಿಯಲ್ಲಿ ಮೈಸೂರು ಕೆಂಪಣ್ಣನವರು ಹೊಸ ಕಟ್ಟಡ ಕಟ್ಟಿಸಿ ರಾಮಮಂದಿರದ ಕೆಲಸವಾಗುವುದರೊಳಗೆ ಅವರು ಮೃತರಾದರು. ಈ ಗ್ರಾಮದ ಮರಿಮುತ್ತೇಗೌಡರ ಮಗ ಮರಿಮುತ್ತೇಗೌಡರು ಆರಾಧ್ಯರ ಪ್ರೇರಣೆಯಿಂದ ರಾಮಮಂದಿರದ ಕೆಲಸವನ್ನೆಲ್ಲ ಪೂರೈಸಿದರು. ಸ್ವಂತ ಹಣದಿಂದ ಕರಿಗಳದ ನಾಲಾಬೈಲಿನಲ್ಲಿ ಒಂದೂ ಚಿಲ್ಲರೆ ಎಕರೆ ಜಮೀನ್ ತೆಗೆದು ಪೂಜೆ ಏರ್ಪಾಡುಮಾಡಿದರು. ವರ್ಷ ವರ್ಷ ರಾಮಪಟ್ಟಾಭಿಷೇಕದ ದಿನ ಅನ್ನದಾನ ನಡೆಸುತ್ತಿರುತ್ತಾರೆ. ಇದನ್ನು ನೋಡಿದರೆ ಆರಾಧ್ಯರ ಸುತ್ತಮುತ್ತ ಇದ್ದ ಇವರ ಸ್ನೇಹಿತರು ಕೂಡ ಇವರಷ್ಟೇ ಉದಾರಿಗಳು ಊರಿನ ಉಪಕಾರಿಗಳು ಎನ್ನುವುದು ಎಳ್ಳಷ್ಟು ಸುಳ್ಳಲ್ಲ. *"ಗಂಧದ ಸ್ನೇಹ ಸುವಾಸನೆಗೆ ದಾರಿ".*

ಕರಿಗಳಗ್ರಾಮದಲ್ಲಿ ಮೈಸೂರು ಮಾನಂದವಾಡಿ ಹೆದ್ದಾರಿಯ ಹನುಮಂತರಾಯನ ಕೆರೆಬಳಿ ಬಸವೇಶ್ವರ, ಆಂಜನೇಯಸ್ವಾಮಿ ದೇವಸ್ಥಾನಗಳು ಇವೆ. ಈ ಗ್ರಾಮವು ದೊಡ್ಡಕೆರೆ ನಾಲೆಗಳು ಬಂದಾಗ ಬೇಚರಾಕ್ ಆಯಿತು. ಅನಂತರ ಈ ಗುಡಿಗಳನ್ನು ಗಮನಿಸುವವರೇ ಇಲ್ಲವಾಗಿ ಕೊನೆಗೆ ಆಂಜನೇಯಸ್ವಾಮಿ ದೇವಸ್ಥಾನವನ್ನು ಜಂಗ್ಲಿಟ್ ಛಾವಣಿ ಮಾಡಿಸಿ, ಪಟೇಲ ಕೆಂಗೇಗೌಡರು ಅರ್ಚಕರಿಗೆ ವಹಿಸಿದರು. ಆದರೆ ಬಸವೇಶ್ವರ ದೇವರ ಪೂಜೆ ಮಾಡದೆ ಕಟ್ಟಡವು ನಾಶವಾಗಿ ಹೋಗಿ, ಅತಿದೀರ್ಘ ಅಂದರೆ ಸುಮಾರು 24ವರ್ಷಗಳ ಕಾಲ ಹಾಗೆ ಇತ್ತು. 1937ರಲ್ಲಿ ಮಾನಂದವಾಡಿ ಮೈಸೂರು ಹೈವೇ ರೋಡ್ ನಾಲಾ ಪಕ್ಕದಲ್ಲಿ ಕರಿಗಳದ ಪಟೇಲ ಕೆಂಗೇಗೌಡರಿಂದ ದೇವಸ್ಥಾನ ಕಟ್ಟಲು ಅವರ ಸ್ವಂತ ಜಮೀನಿನಲ್ಲಿ ಜಾಗ ಪಡೆದುಕೊಂಡು ದೇವಸ್ಥಾನವನ್ನು ಕುಮಾರಾರಾಧ್ಯರು ಕಟ್ಟಿಸಿ ದೇವರನ್ನು ತಂದು ಮತ್ತೊಮ್ಮೆ ಪ್ರತಿಷ್ಠಾಪಿಸಿ ನವಗ್ರಹ ಹೋಮ, ರುದ್ರಾಭಿಷೇಕ, ಅನ್ನಸಂತರ್ಪಣೆಯಿಂದ ಪ್ರತಿ ಸೋಮವಾರವೂ ಪೂಜೆ ಮಾಡಲು ಇವರು ಸ್ವಂತ ಜವಾಬ್ದಾರಿಯನ್ನು ತೆಗೆದುಕೊಂಡರು. ಅದು ಈಗಲೂ ಅವರ ಮಕ್ಕಳು, ಮೊಮ್ಮಕ್ಕಳು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. "ನೀತಿಯೆಂಬುದು ಮನುಷ್ಯನ ಸ್ವಭಾವದ ಮಿತಿಯನ್ನರಿತು ಅವನು ಭಾಗಿಯಾಗಿರುವ ಸಮಾಜಕ್ಕೆ ಹೊಂದಿಕೊಳ್ಳಬೇಕಾದ ನಿಯಮ".

ನಂಜನಗೂಡು ತಾಲ್ಲೂಕು ಹರದನಹಳ್ಳಿ ಗ್ರಾಮದಲ್ಲಿರುವ ಚೋಳರಿಂದ ಸ್ಥಾಪಿಸಿರುವ ಶ್ರೀ ಬಸವೇಶ್ವರ ದೇವಸ್ಥಾನವೂ 2ಅಂಕಣ ಕಲ್ಲು ಕಟ್ಟಡವಾಗಿತ್ತು. ಶಿಥಿಲವಾಗಿದ್ದ ಈ ದೇವಸ್ಥಾನವನ್ನು ಜಿನ್ನಹಳ್ಳಿ ಮಠದ ಇವರ ತಮ್ಮ ರೇವಣಾರಾಧ್ಯರು ಹರದನಹಳ್ಳಿ ಗ್ರಾಮದ ಕೆಂಚಪ್ಪನವರು, ದೇವೇಗೌಡರು, ಮರಿಯಪ್ಪನವರು ಇನ್ನೂ ಮುಂತಾದ ಗ್ರಾಮದ ನಿವಾಸಿಗಳ ಸಹಕಾರದಿಂದ ಮತ್ತೆ ಆರು ಅಂಕಣ ಕಲ್ಲುಕಟ್ಟಡ ಕಟ್ಟಿಸಿ ಮೂರು ವರ್ಷಕ್ಕೊಮ್ಮೆ ಜಾತ್ರೆ ನಡೆಯುವ ಹಾಗೆ ಮಾಡಿದರು.

ನಂಜನಗೂಡಿಗೆ 30 ಕಿ. ಮೀ. ದೂರದಲ್ಲಿರುವ ಕೊಂಗಹಳ್ಳಿ ಗ್ರಾಮದಲ್ಲಿಯೂ ಒಂದು ಬಸವೇಶ್ವರ ದೇವಸ್ಥಾನ ಜೀರ್ಣೋದ್ಧಾರ ಮಾಡಿ ಮತ್ತೆ ಪೂಜೆ ನಡೆಯುವಂತೆ ಕುಮಾರಾರಾಧ್ಯರು ಮಾಡಿದ್ದಾರೆ.

ನಂಜನಗೂಡಿನ ತಾಲ್ಲೂಕಿನ ಸಂಗಮದಲ್ಲಿ ಶ್ರೀ ರಾಮಲಿಂಗೇಶ್ವರ ದೇವಸ್ಥಾನವಿದೆ. ಇಲ್ಲಿ ಕಾಶಿಯಿಂದ ತರಿಸಿದ ಲಿಂಗ ಪ್ರತಿಷ್ಠಾಪಿತವಾಗಿದೆ. ಈ ದೇವಸ್ಥಾನವು ಕಪಿಲಾನದಿ ಮತ್ತು ಭೃಗುನದಿ ಕೂಡಿರುವ ದಡದ ಮೇಲ್ಭಾಗದಲ್ಲಿ 8ಅಂಕಣ ಕಲ್ಲುಕಟ್ಟಡದಲ್ಲಿ ಇದೆ. ಈ ಪುರಾತನ ಕಟ್ಟಡದ ಮೇಲ್ಭಾಗ ಶಿಥಿಲವಾಗಿ ಮಳೆ ನೀರು ಸೋರುತ್ತಿರಲು ನನ್ನ ತಾತನವರು, ಮಾದನಹಳ್ಳಿ, ಮಠದ ನಂಜುಂಡಾರಾಧ್ಯರವರು, ಹರದನಹಳ್ಳಿ ಗ್ರಾಮದ ಜನರುಗಳ ಸಹಾಯ ಪಡೆದು ದೇವಸ್ಥಾನದ ಜೀರ್ಣೋದ್ಧಾರಮಾಡಿರುತ್ತಾರೆ. 1928 ರಲ್ಲಿ ಮೈಸೂರು ಸಂಸ್ಥಾನದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರು ಮಹಾಸ್ವಾಮಿಗಳು ಚಂದ್ರವಾಡಿ, ದೊಡ್ಡ ಆಲದಮರ, ಸಂಗಮ ನೋಡಲು ತಮ್ಮ ಪರಿವಾರದೊಂದಿಗೆ ಬಂದಾಗ ನಮ್ಮ ತಾತನವರು ಮಹಾರಾಜರಲ್ಲಿ ಅರಿಕೆ ಮಾಡಿಕೊಂಡು ಹುಲ್ಲಹಳ್ಳಿ ಗ್ರಾಮದಿಂದ ಮಾದ್ನಹಳ್ಳಿ ಗ್ರಾಮದ ಮಾರ್ಗವಾಗಿ ಸಂಗಮಕ್ಕೆ ರಸ್ತೆ ಮಾಡಿಸಿಕೊಡಬೇಕಂತಲೂ, ಭೃಗುನದಿಗೆ ಸೇತುವೆ ಹಾಕಿಸಲು ಪ್ರಾರ್ಥಿಸಲಾಗಿ ರಸ್ತೆ ನಿರ್ಮಾಣವಾಗಿರುತ್ತದೆ.

ಹುಣಸೂರು ತಾಲ್ಲೂಕು ಕರಿಮುದ್ದನಹಳ್ಳಿ ಬಳಿ ಗಂಗಾಭವಾನಿ ನದಿಯ ದಡದಲ್ಲಿ ಮಹದೇಶ್ವರದೇವರ ಮೂರ್ತಿಯೂ ಸ್ಥಾಪಿತವಾಗಿರುತ್ತದೆ. ಈ ದೇವಸ್ಥಾನದ ಪಕ್ಕದಲ್ಲೇ ಉತ್ತರ ಭಾರತದ ಆರಾಧ್ಯರ ವಂಶಜರಾದ ಕೆಂಡಗಣ್ಣ ಮಹಾಸ್ವಾಮಿಯವರ ಗದ್ದುಗೆ ಇರುತ್ತದೆ. ಇಲ್ಲಿಗೆ ಹೋಗಿ ಬರಲು ರಸ್ತೆ ಇಲ್ಲದೆ ತೊಂದರೆಯಾಗುತ್ತಿರಲು 1927ನೇ ಸಾಲಿನಲ್ಲಿ ಶ್ರೀಮಾನ್ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರು ಮಹಾಸ್ವಾಮಿಯವರು ಮೇಲ್ಕಂಡ ದೇವಾಲಯಕ್ಕೆ ದಯಮಾಡಿಸಿದಾಗ ಆರಾಧ್ಯರವರು ಮಹಾರಾಜರಿಗೆ ಅರ್ಜಿಸಲ್ಲಿಸಿ ಮೈಸೂರಿನಿಂದ ಮಾನಂದವಾಡಿ ಹೈವೆ ರೋಡು ಹಾಗೂ ಮೇಟುಕಲ್ಲು ಗುಡ್ಡದ ಉತ್ತರ ದಿಕ್ಕಿನಲ್ಲಿ ಕಾಡಿನಲ್ಲಿದ್ದ ಈ ಗದ್ದುಗೆಗೆ ಕೂಡ ರಸ್ತೆ ಮಾಡಿಸಿರುತ್ತಾರೆ.

ಇಷ್ಟಲ್ಲದೆ ಆರಾಧ್ಯರು ತಮ್ಮ ಬಾಬ್ತು ತರಿಕಲ್ಲು ನಾಲಾ ಕೆಳಭಾಗದಲ್ಲಿರುವ ಒಂದು ಎಕರೆ ಜಮೀನನ್ನು ಶ್ರೀ ಕೆಂಡಗಣ್ಣ ಮಹಾಸ್ವಾಮಿಯವರ ದೇವಾಲಯಕ್ಕೆ ಪಡಿತರ ದೀಪಾರಾಧನೆ ಖರ್ಚಿಗಾಗಿ ದಾನಪತ್ರಬರೆದು ಹುಣಸೂರು ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲಿ ರಿಜಿಸ್ಟರ್ ಮಾಡಿಸಿಕೊಟ್ಟು, ಗ್ರಾಮದಲ್ಲಿರುವ ಮಠದ ಅರ್ಚಕರಿಗೆ ಸದರಿ ಪತ್ರವನ್ನು ಸಹ ಕೊಟ್ಟಿರುತ್ತಾರೆ. ಆಗಾಗ ಪೂಜೆ, ಮಂಗಳಾರತಿ ಪ್ರಸಾದವಿನಿಯೋಗ ತಾವಿರುವವರೆಗೂ ಮಾಡಿಸುತ್ತಿದ್ದರು. ಇವರು ಈ ರೀತಿ ದೇವಾಲಯಗಳ ರಕ್ಷಣೆಯಲ್ಲದೆ ತಮ್ಮ ಕೈಲಾದಷ್ಟು ಧರ್ಮಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.

ಆರಾಧ್ಯಬ್ರಾಹ್ಮಣಮಹಾಸಭಾಕ್ಕೆ ಪೂರ್ವಭಾವಿಯಾಗಿ 1915ನೇ ಜುಲೈ 5ರಂದು "ಆರಾಧ್ಯಬ್ರಾಹ್ಮಣತಾಂತ್ರಿಕಸಭಾ" ಎಂಬ ಸಂಸ್ಥೆ ಹುಟ್ಟಿತು. ಈ ಸಂಸ್ಥೆಗೆ ಜಿನ್ನಹಳ್ಳಿ ಮಠದ ಆರಾಧ್ಯರು ಅವಿರೋಧವಾಗಿ ಅಧ್ಯಕ್ಷರಾಗಿಯೂ, ಗೆಜ್ಜೆಯ್ಯನವಡ್ಡರಗುಡಿ ಮೇಗೃಮಠದ ಎ. ಬಸವಾರಾಧ್ಯರು ಸೆಕ್ರೆಟರಿಯಾಗಿಯೂ, ವಡ್ರಹಳ್ಳಿ ಮಠದ ರಾಮಾರಾಧ್ಯಶಾಸ್ತ್ರಿಗಳು

ಖಜಾಂಚಿಗಳಾಗಿಯೂ, ಹೆಬ್ಬಲಗುಪ್ಪೆಯ ಮಲ್ಲಾರಾಧ್ಯರು ಮತ್ತು ಇಬ್‌ಜ್ಜಾಲುಮಠದ ಕೆ. ಎನ್. ಶ್ರೀಕಂಠಾರಾಧ್ಯರು ಕಾರ್ಯದರ್ಶಿಗಳಾಗಿಯೂ ದಳ್ಳಾಳಿನ ಮಲ್ಲಿಕಾರ್ಜುನಾರಾಧ್ಯರು, ಗೊರೂರಿನ ಬಸವಾರಾಧ್ಯರು, ವಡ್ರಹಳ್ಳಿಯ ಸಿದ್ದಲಿಂಗಾರಾಧ್ಯರು. ಹಿನಕಲ್ಲಿನ ರಾಮಾರಾಧ್ಯರು ಮೇಲ್ಕಂಡ ಸಭೆಗೆ ಸದಸ್ಯರುಗಳಾಗಿದ್ದರು. ಈ ಮೇಲ್ಕಂಡ ಸಂಸ್ಥೆಯು ಅನೇಕ ಒಳ್ಳೆಯ ಕೆಲಸಗಳನ್ನು ಮಾಡಿತ್ತು.

1919ರಲ್ಲಿ ಮೈಸೂರಿನ ಸಿಟಿಮ್ಯಾಜಿಸ್ಟ್ರೇಟರಾದ ಬಸವಾರಾಧ್ಯರು ಪ್ರೆಸಿಡೆಂಟರಾಗಿ ಆರಾಧ್ಯಬ್ರಾಹ್ಮಣಮಹಾಸಭೆ ಆರಂಭವಾಯಿತು. 2-3-1927ರಲ್ಲಿ ಈ ಮಹಾಸಭೆಗೆ ಶ್ರೀಜಿನ್ನಹಳ್ಳಿಆರಾಧ್ಯರು ಆಡಿಟರ್ ಆಗಿ ತಮ್ಮ ಕಾರ್ಯ ನಿರ್ವಹಿಸಿರುತ್ತಾರೆ. ಇಷ್ಟಲ್ಲದೇ ಈ ಸಂಸ್ಥೆಯ ಮಕ್ಕಳ ಊಟಕ್ಕಾಗಿ ಎಂದು ತಮ್ಮ ಸ್ವಂತ 25ಎಕರೆ ಜಮೀನನ್ನು ದಾನವಾಗಿ ನೀಡಿದ್ದಾರೆ. ಇದಲ್ಲದೆ ಹೆಚ್.ಡಿ. ಕೋಟೆ ತಾಲ್ಲೂಕು ಜಂಪನಹಳ್ಳಿ ಗ್ರಾಮದಲ್ಲಿದ್ದ ಒಟ್ಟು 81ಎಕರೆ ಜಮೀನನ್ನು ಇನ್ನೂ ಅನೇಕ ಸಂಘ ಸಂಸ್ಥೆಗಳ ಹೆಸರಿಗೆ ದಾನವಾಗಿ ಕೊಟ್ಟಿರುತ್ತಾರೆ. "ದಾನದಿಂದಲೇ ಗೌರವ, ಹಣ ಸಂಗ್ರಹದಿಂದಲ್ಲ, ನೀರನ್ನು ಕೊಡುವ ಮೋಡ ಆಕಾಶಕ್ಕೇರಿ ನಿಂತಿದೆ. ನೀರನ್ನು ಸಂಗ್ರಹಿಸುವ ಸಮುದ್ರ ಕೆಳಗಿದೆ" ಎನ್ನುವ ಸುಭಾಷಿತದ ನುಡಿಯಂತೆ ಬಾಳಿದವರು.

ಇವರು ತಮ್ಮ ಮನೆಯಲ್ಲಿ ಹತ್ತಾರು ವಿದ್ಯಾರ್ಥಿಗಳಿಗೆ ಉಚಿತವಾಗಿ ವಿದ್ಯಾಭ್ಯಾಸ, ಊಟ, ವಸತಿಯ ಸೌಕರ್ಯ ಏರ್ಪಡಿಸಿದ್ದರು. ಬಡ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿದ್ದರು. ಅಲ್ಲದೆ ಇವರು ಸ್ವತಹ ಪಿಟೀಲು, ಹಾರ್ಮೋನಿಯಂ ವಾದಕರಾಗಿದ್ದು ಸಂಗೀತ, ಸಾಹಿತ್ಯಗಳಲ್ಲಿ ಆಸಕ್ತಿ ಇತ್ತು. ಊರಿನ ಹಬ್ಬಗಳಲ್ಲಿ ಹೊರಗಿನ ಸಂಗೀತಗಾರರು, ಹರಿಕಥಾಕಾರರುಗಳನ್ನು ಕರೆಸಿ ಸಂಗೀತೋತ್ಸವ ಹರಿಕಥೆಗಳನ್ನು ಮಾಡಿಸಿ ಇಲ್ಲಿನ ಯುವಕರಿಗೆ ಸ್ಫೂರ್ತಿಯಾಗಿದ್ದರು. ಬಂದ ಅತಿಥಿಗಳಿಗೆ ಇವರ ಮನೆಯಲ್ಲಿ ಅತಿಥಿ ಸತ್ಕಾರ ನಡೆಯುತ್ತಿತ್ತು. ಯಾವುದೆ ಸರ್ಕಾರಿ ಅಧಿಕಾರಿಗಳು ಬಂದರೂ ಇವರಲ್ಲಿ ಅತಿಥಿ ಸತ್ಕಾರ ಪಡೆದು ಮುಂದೆ ತೆರಳುತ್ತಿದ್ದರು. ಪ್ರತಿ ದಿನವೂ ತಮ್ಮ ಪಾಲಿನ ಆಹಾರದಲ್ಲಿ ಬೇರೆ ಯಾರಿಗಾದರೂ ಹಂಚಿ ಊಟ ಮಾಡುವ ಪದ್ಧತಿ ನನ್ನ ತಾತನವರದು.

ಬೆಳಿಗ್ಗೆ ಎದ್ದು ಕಪಿಲಾ ನದಿಗೆ ಹೋಗಿ ನಿತ್ಯಕರ್ಮಗಳನ್ನು ಮುಗಿಸಿ ಸ್ನಾನ ಮಾಡಿ ಬರುತ್ತಲೆ ದಾರಿಯಲ್ಲಿರುವ ಮಹದೇಶ್ವರ ದೇವಸ್ಥಾನಕ್ಕೆ ಭೇಟಿ ಕೊಟ್ಟು, ದಾರಿಯಲ್ಲಿರುವ ಇವರ ಹೊಲಕ್ಕೆ ಹೋಗಿ, ಅಲ್ಲಿರುವ ಬೇಲದ ಹಲಸಿನ ಹಣ್ಣುಗಳನ್ನು ತರುತ್ತ, ದಾರಿಯಲ್ಲಿ ಸಿಕ್ಕ ಮಕ್ಕಳಿಗೆ ಹಂಚಿ ಮನೆಗೆ ಬಂದು ದೇವರಪೂಜೆ ಮಾಡಿ, ಆಹಾರ ಸೇವಿಸಿ ಕೋಟು, ಪೇಟ, ಕಚ್ಚೆ ಧರಿಸಿ ಕುದುರೆ ಏರಿ ಹೊರಡುತ್ತಿದ್ದರಂತೆ. ಇವರು ಪ್ರಾಣಿಪ್ರಿಯರು ಕೂಡ. ತಾವೇ ಸ್ವತಹ ಕುದುರೆ, ಹಸು, ಕರುಗಳು, ನಾಯಿ, ಬೆಕ್ಕುಗಳನ್ನು ಸಾಕಿದ್ದರು. ಹೀಗೆ ಬರೀ ಮನುಷ್ಯರಲ್ಲ, ಪ್ರಾಣಿಗಳಿಂದಲೂ ಇವರ ಮನೆ ಮತ್ತು ಮನ ತುಂಬಿರುತಿತ್ತು. ಇವರ ಖಾಸಗಿಜೀವನವನ್ನು ಅವಲೋಕಿಸಿದಾಗ ಇಷ್ಟೆಲ್ಲ ದಾನ ಧರ್ಮಗಳನ್ನು, ಸಾರ್ವಜನಿಕಸೇವೆಯನ್ನು ಮಾಡಿದಂತಹವರು

ಸಾಕಷ್ಟು ಧನಿಕರೆಂದು ಭಾವಿಸುವುದು ಸಹಜಸ್ವಭಾವ, ಆದರೇ ನಿಜವಾಗಿಯು ತಾತನವರು ಆರ್ಥಿಕವಾಗಿ ಬಹಳಷ್ಟು ಕಷ್ಟವನ್ನು ಅನುಭವಿಸಿದವರಾಗಿದ್ದು, ತಮ್ಮ ಜೀವನದ ಕೊನೆಗಳಿಗೆಯವರೆವಿಗೂ ತಮ್ಮಲ್ಲಿ ನೀಡಲು ಶಕ್ತಿ ಇಲ್ಲದಿದ್ದರೂ, ತೊಂದರೆ ಎಂದು ಇವರಲ್ಲಿ ಯಾಚಿಸಿದವರಿಗೆ ಸಹಾಯ ಮಾಡದೆ ಬಿಡುತ್ತಿರಲಿಲ್ಲ. ಮತ್ತೊಬ್ಬರಿಗೆ ಸಹಾಯ ಮಾಡುವ ಆತುರದಲ್ಲಿ ತಮ್ಮ ಕಾಲನ್ನೇ ಬಲಿಕೊಟ್ಟವರು "ಸುಖ ಅಪರೂಪಕ್ಕೆ ಬರುವ ನೆಂಟ, ಕಷ್ಟ ನಿತ್ಯ ಸಂಗಾತಿ"ಎನ್ನುವುದನ್ನು ಅವರು ತಿಳಿದಿದ್ದರು.

ಇಂತಹ ಮಹಾನುಭಾವರ ಧರ್ಮಪತ್ನಿ ಪಾರ್ವತಮ್ಮನವರು ಕೂಡ ಎಷ್ಟೇ ಕಷ್ಟವಿದ್ದರೂ ಲೆಕ್ಕಿಸದೆ ಎಷ್ಟೇ ಹೊತ್ತಿನಲ್ಲಿ, ಅತಿಥಿಗಳು ಮನೆಗೆ ಬಂದಲ್ಲಿ ಅನ್ನಸಂತರ್ಪಣೆ ಮಾಡುತ್ತಿದ್ದಂತಹ ಅನ್ನಪೂರ್ಣೆ. ಇವರೂ ಕೂಡ ದಾನ, ಧರ್ಮ ಎಂದು ಬಂದವರಿಗೆ ತಮ್ಮ ಕೈಲಾದ ಸಹಾಯ ಮಾಡುತ್ತಿದ್ದರು. ಇವರು ತಮ್ಮ ಪತಿಯ ಪ್ರತಿಯೊಂದು ಕೆಲಸದಲ್ಲಿಯೂ ಸಹಭಾಗಿಯಾಗಿದ್ದು ಅವರ ಎಲ್ಲ ಕೆಲಸಗಳಿಗೂ ಬೆನ್ನೆಲುಬಾಗಿದ್ದರು. ಹೆಚ್ಚೇನು ವಿದ್ಯಾವಂತರಲ್ಲದ ನಮ್ಮ ಅಜ್ಜಿ ಒಬ್ಬ ಆದರ್ಶಮಹಿಳೆ. ಏಕೆಂದರೆ "ಕೊಟ್ಟು ತೆಗೆದುಕೋ" ಎನ್ನುವ ಈಗಿನ ಲೆಕ್ಕಾಚಾರದ ಮಹಿಳೆಯಂತಲ್ಲ. "ಒಂದು ಹಿಡಿ ಪ್ರೀತಿ, ಇನ್ನೊಂದು ಹಿಡಿ ಹೊಂದಾಣಿಕೆ, ಒಂದಷ್ಟು ತಾಳ್ಮೆಯೇ ತಮ್ಮ ಧ್ಯೇಯವೆಂದು" ಪಾಲಿಸಿದಾಕೆ. ಈ ದಂಪತಿಗಳಿಗೆ 1ಹೆಣ್ಣು, 1ಗಂಡು ಮಕ್ಕಳು. ಮಗಳು ಅಂಬುಜಾಕ್ಷಮ್ಮ. ಇವರ ಅಳಿಯಂದಿರು ಶ್ರೀ ಸಾಗರೆ ಜೆ. ಸಿ. ಚಂದ್ರಶೇಖರಾರಾಧ್ಯರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಹಾಗೂ ಉಪಧ್ಯಾಯವೃತ್ತಿಯಲ್ಲಿದ್ದು ನಿವೃತ್ತರಾದರು. "ಮುನಿಸಂದೇಶ" ಮಾಸ ಪತ್ರಿಕೆಯ ಸಂಪಾದಕರಾದ ಶ್ರೀ ಜಿನ್ನಹಳ್ಳಿ ನಾಗಭೂಷಣಾರಾಧ್ಯರವರು ಕುಮಾರಾರಾಧ್ಯರ ಏಕೈಕ ಪುತ್ರರಾಗಿದ್ದು ಇವರಲ್ಲಿ ಕೂಡ ತಂದೆ, ತಾಯಿಯ ಗುಣ ಮೈಗೂಡಿದೆ. ಇವರು ಸರ್ಕಾರಿ ವೃತ್ತಿಯಲ್ಲಿದ್ದು ಅಲ್ಲಿಯೂ ಒಳ್ಳೆಯ ಹೆಸರನ್ನು ಗಳಿಸಿ 'ರಾಜ್ಯ ಪ್ರಶಸ್ತಿ'ಯನ್ನು ಪಡೆದುಕೊಂಡಿದ್ದಾರೆ. "ಕಷ್ಟ ಮನುಷ್ಯರನ್ನು ರೂಪಿಸಿದರೆ, ಸುಖ ರಾಕ್ಷಸರನ್ನು ರೂಪಿಸುತ್ತದೆ'. ಎನ್ನುವ ಫ್ರೆಂಚ್ ಗಾದೆಯಂತೆ ಎಷ್ಟೇ ಕಷ್ಟ ಬಂದರೂ ಈ ಕುಟುಂಬದವರು ಧರ್ಮದ ದಾರಿ ಬಿಟ್ಟು ಹೋಗಲಿಲ್ಲ. ನಮ್ಮ ತಾತನವರು ಹೇಳುತ್ತಿದ್ದರಂತೆ.

ತನಗೆ ಸಾಕಷ್ಟಿದೇ ಎಂಬ ತೃಪ್ತಿ ಇರುವವನೇ ಶ್ರೀಮಂತ. ನಾವು ಬಂದದ್ದನ್ನೆಲ್ಲ ಕೊಡಬೇಕು. ಆಗ ದೇವರು ಮತ್ತೆ ಮತ್ತೆ ಕೊಡುತ್ತಾನೆ ಎಂದು. ಅಷ್ಟಲ್ಲದೆ "ಸಣ್ಣ ತೊಂದರೆಗಳನ್ನು ಸಹಿಸಿಕೊಳ್ಳದಾತ ದೊಡ್ಡದೇನನ್ನೂ ಸಾಧಿಸಲಾರ" ಎನ್ನುತ್ತಿದ್ದರು. "ಸುಖವೆನ್ನುವುದು ಬಿಸಿಲಿನಂತೆ, ಸ್ವಲ್ಪ ಮೋಡದ ತಡೆಯೊದಗಿದರೂ ನೆರಳು ಇದ್ದೇ ಇದೆ" ಎನ್ನುವ ಕಟುಸತ್ಯವನ್ನು ತಿಳಿದವರಾಗಿದ್ದರು.

ಇವರಿಗೆ ಎಲ್ಲರು ಮಿತ್ರರೇ. ಯಾರೂ ಶತ್ರುಗಳಿರಲಿಲ್ಲ. ಅಷ್ಟಲ್ಲದೆ ಮನೆಗೆ ಬಂದ ಶತ್ರುವಿಗೂ ಸಹ ಆತಿಥ್ಯ ಮಾಡುವುದು ಒಳ್ಳೆಯ ಸ್ವಭಾವ. ಪಕ್ಕದಲ್ಲಿ ನಿಂತಿರುವ ಮರ-ಕಡಿಯುವವರಿಗೂ ಮರ ನೆರಳನ್ನು ನೀಡುತ್ತದೆ. ಹೀಗೆ ಅನೇಕ ಉತ್ತಮವಿಚಾರಗಳನ್ನು

ವೈಗೂಡಿಸಿ ಕೊಂಡಿದ್ದರು. ಈ ಗ್ರಾಮದ ಜ್ಞಾನರ್ಜನೆಯ ಮೂಲ ಪತ್ರಿಕೆ. ಆಗ ಬಿಡುಗಡೆಯಾಗುತ್ತಿದ್ದ 'ಸಾಧ್ವಿ'ಎಂಬ ಪತ್ರಿಕೆಗೆ ಈ ಊರಿನ ಏಕೈಕ ಚಂದಾದಾರರು ನನ್ನ ತಾತನವರು. ಇನ್ನೂ ಹಲವು ಪುಸ್ತಕಗಳನ್ನು ಓದುತ್ತಿದ್ದರು. "ಅನುಭವ ಆಲೋಚನೆಯ ಕೂಸು, ಆಲೋಚನೆ ಕ್ರಿಯೆಯ ಕೂಸು" ಬರಿಯ ಪುಸ್ತಕಗಳಿಂದಲೇ ನಾವೂ ಕಲಿಯಲು ಸಾಧ್ಯವಿಲ್ಲ ಕಾರ್ಯದಲ್ಲಿ ಅದನ್ನು ತೋರಿಸಬೇಕು ಎನ್ನುವುದು ಇವರ ಗುರಿಯಾಗಿತ್ತು.

ತಮ್ಮ ಗ್ರಾಮ, ಹೋಬಳಿ, ತಾಲ್ಲೂಕು ಇವುಗಳ ಅಭಿವೃದ್ಧಿಗೆ ತಮ್ಮ ಕೈಮೀರಿ ದುಡಿದು ತಮ್ಮ ಇಡೀ ಜೀವನವನ್ನು ಸಮಾಜಸೇವೆಯಲ್ಲಿ ತೊಡಗಿಸಿ "ಮಾನವಜೀವನ ದೊಡ್ಡದು ಅದನ್ನು ಹಾಳು ಮಾಡಬೇಡಿರೋ ಹುಚ್ಚಪ್ಪಗಳಿರ" ಎಂಬ ದಾಸರ ವಾಣಿಯಹಾಗೆ ಬಾಳಿದರು. "ಕೆರೆಯ ನೀರನು ಕೆರೆಗೆ ಚೆಲ್ಲಿ" ತಮ್ಮ ಇಡೀ ಜೀವಿತ ಕಾಲದಲ್ಲಿ ತಮಗಾಗಿ ಏನನ್ನು ಮಾಡಿಕೊಳ್ಳದೆ ನಿಸ್ವಾರ್ಥ ಬದುಕನ್ನು ಬದುಕಿದರು. ಹೆತ್ತವರಿಗೆ, ಮಾತೃಭೂಮಿಗೆ ತಮ್ಮ ಜೀವಿತ ಕಾಲ ಭಾರವೆನಿಸದೆ ಎಲ್ಲರೂ ಮೆಚ್ಚುವಂತಿದ್ದರು. ಈಗಲೂ ಹಳ್ಳಿಯ ಹಿರಿಯರು ದೊಡ್ಡಬುದ್ಧಿಯವರು ದೇವರು ಎಂದು ನೆನಸಿ ಕಣ್ಣೀರಿಡುತ್ತಾರೆ. ಇಂಥ ಸಾರ್ಥಕ ಜೀವನ ನಡೆಸಿ 17-2-61ರಲ್ಲಿ ಮೈಸೂರಿನಲ್ಲಿ ದೈವಾಧೀನರಾದರು. ಇವರ ವಿಷಯ ತಿಳಿದು ಬರೆಯುವ ನನಗೆ ಹೆಮ್ಮೆಯ ವಿಷಯವೆಂದರೆ ನಾನು ಈ ಕುಟುಂಬಕ್ಕೆ ಸೇರಿದ ಒಂದು ಎಳೆ ಎನ್ನುವುದು. ನನ್ನ ಜನ್ಮ ಸಾರ್ಥಕವಾಯಿತು. ದೊಡ್ಡವರು ಲೋಕ ಬಿಟ್ಟರೂ ಕಾಲದ ಮರುಭೂಮಿಯಲ್ಲಿ ಹೆಜ್ಜೆಯ ಗುರುತನ್ನು ಉಳಿಸಿರುತ್ತಾರೆ. ನಾವೂ ಸಹ ಅವರ ಹಾಗಲ್ಲದಿದ್ದರು ಕೊನೆಯ ಪಕ್ಷ ಅವರು ನಡೆದು ಹೋದ ದಾರಿಯಲ್ಲಿ ನಡೆದರೆ ಸಾಕು, ಈ ಭೂಮಿಯ ಋಣ ತೀರಿಸುವ ಪ್ರಯತ್ನವಾಗುವುದೇನೋ ಅಲ್ಲವೇ?

* * *

## ನನ್ನ ಮುತ್ತಜ್ಜ

| | | | | |
|---|---|---|---|---|
| G | - | Great | = | ವಿಶೇಷದ |
| R | - | Reputation | = | ಗೌರವಯುತ |
| A | - | Abbot | = | ಮಠಾಧಿಪತಿ |
| N | - | Noble | = | ಕೀರ್ತಿವಂತ |
| D | - | Disciplined | = | ಶಿಸ್ತುಗಾರ |
| F | - | Faithful | = | ನಂಬಿಕೆಯುಳ್ಳ |
| A | - | Abdieant | = | ತ್ಯಾಗಮಾಡುವ |
| T | - | Tenacious | = | ದೃಢಸಂಕಲ್ಪದ |
| H | - | Honest | = | ಪ್ರಾಮಾಣಿಕತೆಯ |
| E | - | Eminent | = | ಶ್ರೇಷ್ಠ |
| R | - | Remarkable | = | ಗಮನಾರ್ಹವಾದವರು |

*- ಎಂ. ಪರೀಕ್ಷಿತ್, ಮೂರನೇ ತರಗತಿ, ಬಾಲೋದ್ಯಾನ ಇಂಗ್ಲೀಷ್ ಶಾಲೆ, ಜಯನಗರ, ಮೈಸೂರು*

# “ನವರತ್ನ ಮಾಲಿಕೆ”



ಹೆಗ್ಗಡದೇವನಕೋಟೆ ತಾಲ್ಲೂಕಿನ ಜಿನ್ನಹಳ್ಳಿಯ ನಿವಾಸಿ
ಹಳ್ಳಿಗರೊಡನೆ ಬೆರೆತು ಅವರ ಕಷ್ಟಗಳ ಅರಿತು
ತೊಂದರೆ ತೊಡಕಿನ ಬಗ್ಗೆ ಚಿಂತನ ಮಂಥನ ಮಾಡಿ
ಪರಿಹಾರದ ಮಾರ್ಗವ ತೋರೊ ಔದಾರ್ಯ ಅವರಲ್ಲಿತ್ತು ||1||

ಗ್ರಾಮದ ಕೆಲಸ ಹಿರಿದೋ ಕಿರಿದೋ ಯಾವುದೇ ಇರಲಿ
ಉತ್ಸಾಹದಿಂದ ಹೆಗಲನೆಕೊಟ್ಟು ಮಾಡಿಯೇ ತೀರುತ್ತಿದ್ದರು
ಊರಿನ ಜನರೆಲ್ಲ ನನ್ನವರೆಂಬ ಅಭಿಮಾನ ತುಂಬಿತ್ತು
ಅವರ ಮಾತಿಗೆ ಅವರ ಪ್ರೀತಿಗೆ ಅಪಾರ ಗೌರವವಿತ್ತು ||2||

ಯಾರಿಗೂ ಕೇಡನೆ ಬಯಸದೆ ಎಲ್ಲಿಯೂ ಕೈಯ ಚಾಚದೆ
ದೈವವೆ ಸಕಲವು ಅವನಿಂದಲೇ ಎಲ್ಲವೂ ಎಂದರಿತಿದ್ದರು
ಮನುಜನ ಉಳಿವು ಅಳಿವುಗಳೆಲ್ಲವು ದೇವರ ಲೀಲೆ
ಎಂಬುದು ಸತ್ಯ ಸಹಜ ಎನ್ನುತ ಹಸನ್ಮುಖಿಯಾಗಿದ್ದರು ||3||

ಆಚಾರ ವಿಚಾರಗಳಲಿ ಆರಾಧ್ಯರೆಂದರೆ ಶಿಸ್ತಿಗರು
ನೇರ ನಡೆಗೆ ನೇರ ನುಡಿಗೆ ಅವರೆಂದಿಗೂ ಬದ್ಧರು
ಕಷ್ಟವೋ ನಷ್ಟವೋ ಏನೇ ಬಂದರು ನಲುಗದೆ ನರಳದೆ
ಧೈರ್ಯದಿಂದ ದೃಢತೆಯಿಂದ ಎದುರಿಸುತಲಿದ್ದರು || 4 ||

ಸಾಹಿತಿ:
- ಎಂ. ಪಂಡಿತಾರಾಧ್ಯ
ನಿವೃತ್ತ ಸರ್ಕಾರಿಶಿಕ್ಷಕರು
ಮೈಸೂರು.

ಸಮಾಜಸೇವೆಗೆ ತಮ್ಮನೆ ತಾವು ತೊಡಗಿಸಿಕೊಂಡರು
ಮಾಡಿದ ಕಾರ್ಯಗಳೆಷ್ಟೋ ನೀಡಿದ ಕೊಡುಗೆಗಳೆಷ್ಟೋ
ಗುಡಿಗಳ ಶಾಲೆಗಳ ಜೀರ್ಣೋದ್ಧಾರಕೆ ತಮ್ಮ ಭೂಮಿಯಲಿ
ಕೊಡುಗೆಯ ಕೊಟ್ಟು, ಉನ್ನತಿಯಾಗಲೆಂದು ಹಾರೈಸಿದರು ||5||

ಮೈಸೂರು ನಗರದ ಆರಾಧ್ಯರವಿದ್ಯಾರ್ಥಿನಿಲಯಕೆ
ಇಪ್ಪತ್ತೈದು ಎಕರೆ ಭೂಮಿಯನು ದಾನವಾಗಿ ಕೊಟ್ಟರು
ಅಲ್ಲೇ ನೆಲಸಿ ಅಲ್ಲೇ ಓದೋ ಆರಾಧ್ಯಮತದಮಕ್ಕಳಿಗೆ
ಅನ್ನದಾಸೋಹ ತಪ್ಪದೆ ನಿತ್ಯವು ನಡೆಯಲೆಂದಾಶಿಸಿದರು ||6||

ದೇವರೆ ಸತ್ಯ ಸತ್ಯವೆ ದೇವರು ಎಂಬ ನಂಬಿಕೆಯಿಂದ
ಬಡವರ ಕಲ್ಯಾಣಕ್ಕಾಗಿ ನೆರವಿಗಾಗಿ ಮುಂದಾದರು
ಧನವಾಗಲಿ ದವಸವಾಗಲಿ ನೀಡಿ ಶಿವನ ನೆನೆದು
ಎಲ್ಲರಿಗೂ ಸುಖನೆಮ್ಮದಿ ಕೊಡಲಿ ತಂದೆ ಎನ್ನುತಲಿದ್ದರು ||7||

ಅಧ್ಯಕ್ಷರಾಗಿ ಆಗಮಿಕರಾಗಿ ಗ್ರಾಮದ ಮುನ್ಸೀಫರಾಗಿ
ಆರಾಧ್ಯಮತದ ಏಳಿಗೆಗಾಗಿ ಹತ್ತಾರುಹಳ್ಳಿಗಳಲ್ಲಿ ಸಭೆಗಳ
ನಡೆಸಿ ವಿಚಾರ ಮಂಡಿಸಿ ಜನ ಜಾಗೃತಗೊಳಿಸಿ
ಉತ್ತಮ ಭಾವನೆ ಹೊಂದಿದ್ದ ಮತಿವಂತರು ಆರಾಧ್ಯರು ||8||

ಕಾಲನ ಕರೆಯೋ ವಿಧಿಲಿಖಿತವೋ ಏನೋ ಅಂತು ಅವರು
ಹಾಸಿಗೆ ಹಿಡಿದು ಚಿಂತೆಯ ಚಿತೆಯಲಿ ಉರುಳಿದರು
ಎಪ್ಪತ್ತಾರರ ಇಳಿವಯಸಲಿ ಅಂದರೆ ಹತ್ತೊಂಬತ್ತನೂರ
ಅರವತ್ತೊಂದರಲಿ ಈ ಲೋಕ ಬಿಟ್ಟು ಕೈಲಾಸವಾಸಿ ಆದರು ||9||

* * *

**ಜೀವನ**

ಜೀವನದ ಸ್ಫೂರ್ತಿ
ಸಾಹಸಿಯ ಆಸ್ತಿ
ಸದಾ ಸನ್ನದ್ಧಸ್ಥಿತಿ
ಸ್ವಾಭಿಮಾನದ ಪರಿಸ್ಥಿತಿ
ಅಂತರಂಗದ ಸಂಕಲ್ಪ ಸ್ತುತಿ.

**- ಆರಾಧಕ,** ಮೈಸೂರು

# ಮಾರ್ಗದರ್ಶಿ

ಶ್ರದ್ಧೆ, ನಿಷ್ಠೆ, ಸರಳತೆ, ಸಜ್ಜನಿಕೆ ಮತ್ತು ಸದ್ಗುಣಗಳ ಸಂಗಮವಾಗಿದ್ದರು ಶ್ರೀ ಜಿನ್ನಹಳ್ಳಿ ಕುಮಾರಾರಾಧ್ಯರು. ಇವರನ್ನು ಸಾಪು ಬುದ್ಧಿಯುವರೆಂದೇ ಕರೆಯುವ ವಾಡಿಕೆಯಾಗಿತ್ತು. ಇವರ ಅಂತರಂಗ, ಬಹಿರಂಗ ಶುದ್ಧಿ. ಮತ್ತಿವರ ಹೃದಯ ತೆರೆದ ಪುಸ್ತಕದಂತೆ. ಸಚ್ಚಾರಿತ್ರ, ಪ್ರಾಮಾಣಿಕತೆ ಮತ್ತು ನಿರಾಡಂಬರಜೀವನ ನಡೆಸಿದವರು. ಹಾಲು ಜೇನಿನಂತಹ ದಾಂಪತ್ಯಜೀವನ ನಡೆಸಿ ನಮಗೆ ದಾರಿದೀಪವಾದವರು. ನಿಜಕ್ಕೂ ಬುದ್ಧಿಯುವರು ಒಬ್ಬ ವ್ಯಕ್ತಿಯಲ್ಲ;ಅವರೊಂದು ಶಕ್ತಿಯಾಗಿದ್ದರು. ಸಹಜಸ್ಥಿತಿಯನ್ನು ಸ್ವೀಕರಿಸುವ ಯೋಗಿಯಂತಹ ಮನಃಸ್ಥಿತಿ ಇವರದು. ಸುಖದಲ್ಲಿ ಹಿಗ್ಗಿದವರಲ್ಲ;ದುಃಖದಲ್ಲಿ ಕುಗ್ಗಿದವರಲ್ಲ. ಹಸನ್ಮುಖಿಗಳು. ಯಾವತ್ತೂ ಸ್ವಾರ್ಥಮಯಜೀವನ ನಡೆಸಿದವರಲ್ಲ. ಸಾತ್ವಿಕ ಸಸ್ಯಾಹಾರಿಗಳು ಇವರು. ಭಾವನಾಜೀವಿ, ಪರೋಪಕಾರಿ ಮನೋಭಾವ ಜನ್ಮದತ್ತವಾಗಿದ್ದವರು. ಉನ್ನತ ಆದರ್ಶಜೀವಿ, ಪ್ರಚಾರಪ್ರಿಯರಲ್ಲ. ನಿಗರ್ವಿಯಾಗಿದ್ದರು. ಉದಾರ ಮನಸ್ಸಿನ ಜನಾನುರಾಗಿಗಳು. ಬಹುಮುಖವ್ಯಕ್ತಿತ್ವ ಉಳ್ಳವರು. ನಮ್ಮಗಳಿಗೆ ಇವರ ಬರವಣಿಗೆ, ಜ್ಯೋತಿಷ್ಯ ಮತ್ತು ಪೌರೋಹಿತ್ಯ ಬಹಳ ಹಿಡಿಸಿತ್ತು. ಜನರಿಂದ ಕಿತ್ತು ತಿನ್ನುವ ಮನೋಭಾವ ಇವರಲ್ಲಿ ಇರಲಿಲ್ಲವಾದ್ದರಿಂದ ಎಲ್ಲರ ಆಶಯ ಇವರದಾಗಿತ್ತು ಎನ್ನಬಹುದು. ಇವರು ಧರ್ಮಜಾಗೃತಿ ಯುಳ್ಳವರು. ಕೃಷಿಪಾಲನೆಯು ಇವರ ಮನೆತನದಲ್ಲಿ ರೂಢಿಯಾಗಿ ಬಂದಿತ್ತು. ಸಮಾಜದ ಧಾರ್ಮಿಕ ಸೇವೆಯನ್ನು ಮೈಗೂಡಿಸಿಕೊಂಡವರು. ಪತಿ-ಪತ್ನಿಯರಿಬ್ಬರೂ ಸತ್ಯ, ಶುದ್ಧ ಜೀವನಮಾರ್ಗ ಅರಿತವರಾಗಿ ಬಾಳಿದವರು. ಇವರುಗಳಲ್ಲಿ ತಮ್ಮ ಮಿತಿಗಳನ್ನು ಒಪ್ಪಿಕೊಳ್ಳುವ, ತಮ್ಮನ್ನು ತಾವು ತಿದ್ದಿಕೊಳ್ಳುವ ತಿಳಿವಿನ ಅರಿವಿತ್ತು. ನಿಸ್ಪೃಹಸೇವಾ ಕೈಂಕರ್ಯ ಇವರದಾಗಿತ್ತು. ಇವರ ಉಡುಗೆ-ತೊಡುಗೆ ಬಹಳ ಸರಳ. ಆಚಾರ-ವಿಚಾರ ಮತ್ತು ಧರ್ಮನಿಷ್ಠೆಯುಳ್ಳವರಾಗಿದ್ದರು.



- ದಿ|| ಮರಿಮುತ್ತೇಗೌಡ
ಉ. ಕೆಂಚೇಗೌಡರು
ಹಂಪಾಪುರ ಅಂಚೆ,
ಹೆಚ್. ಡಿ. ಕೋಟೆ ತಾಲ್ಲೂಕು
ಮೈಸೂರು ಜಿಲ್ಲೆ
ದೂ. 267841

15614

ಈ ಎಲ್ಲ ವಿಚಾರಗಳನ್ನು ಸಂಕಲ್ಪಿಸಿ ದೃಢಚಿತ್ತ ಮನಸ್ಸಿಗರಾಗಿ ಬಾಳಿದವರು, ಈ ತೆರನಾದ ಜೀವನ ರೂಪಿಸಿಕೊಂಡು ಹೋದವರು ಬುದ್ಧಿಯವರು ಎಂದರೆ ಅತಿಶಯೋಕ್ತಿಯಾಗಲಾರದು. ಅಂತಹವರನ್ನು ವ್ಯಕ್ತಿಯಲ್ಲ ಶಕ್ತಿ ಎಂದಿರುವುದು ಸತ್ಯಕ್ಕೆ ಸಮೀಪವಾಗಿರುವುದಲ್ಲವೆ?

ಜಿನ್ನಹಳ್ಳಿ ಗುರುಮಠದ ಪರಂಪರೆಯಲ್ಲಿ ಬಂದಂತಹ ಶ್ರೀಮಾನ್ ರೇವಣಾರಾಧ್ಯರು ಮತ್ತವರ ಧರ್ಮಪತ್ನಿ ಶ್ರೀಮತಿ ಚನ್ನಾಜಮ್ಮ ಇವರುಗಳ ಮೂರನೆಯ ಗಂಡು ಮಗನಾಗಿ ದೊಡ್ಡಬುದ್ಧಿಯವರು 1885ರಲ್ಲಿ ಜನಿಸಿದರು. ಇವರಿಗೆ ಒಬ್ಬ ತಮ್ಮ ಹಾಗೂ ಇಬ್ಬರು ಅಕ್ಕಂದಿರು ಇದ್ದರು. ತಮ್ಮ ಶ್ರೀ ರೇವಣಾರಾಧ್ಯರೆಂಬುವರು. ಇವರನ್ನು ನಾವು ಚಿಕ್ಕಬುದ್ಧಿಯವರೆಂದು ಕರೆಯುತ್ತಿದ್ದೆವು. ಈ ಇಬ್ಬರೂ ಸಹ ಮನೆಯ ಕಣ್ಣಾಗಿ ಬೆಳಗಿದರು.

ದೊಡ್ಡಬುದ್ಧಿಯವರ ಇಪ್ಪತ್ತೈದನೇ ವಯಸ್ಸಿನಲ್ಲಿ ಹೆಬ್ಬಲಗುಪ್ಪೆಯ ಪಾರ್ವತಮ್ಮ ಎಂಬುವರೊಡನೆ ಮದುವೆಯಾಗಿತ್ತು. ಶ್ರೀಮತಿಯವರು ದೊಡ್ಡಬುದ್ಧಿಯವರೊಡನೆ ವ್ಯವಹಾರದಲ್ಲಿ ಹೊಂದಿಕೊಂಡು ಅವರ ತಾಳಕ್ಕೆ ತಕ್ಕ ಶ್ರುತಿಯಾಗಿ ಜೀವನ ನಿಭಾಯಿಸಿದ ಮಹಾತಾಯಿಯಾದರು. ದೊಡ್ಡಬುದ್ಧಿಯವರು ಸಮಾಜಸೇವೆ, ಗ್ರಾಮಸೇವೆ, ನಾಡಸೇವೆ ಮತ್ತು ದೇಶಸೇವೆಯನ್ನು ಧಾರ್ಮಿಕ, ಸಾಂಸ್ಕೃತಿಕ ಮತ್ತು ನೈತಿಕತೆಯಿಂದ ಕೂಡಿದ ಸಾತ್ವಿಕರಾಗಿ ತಮ್ಮ ಜೀವಿತವನ್ನು ಮಾದರಿಯಾಗುವಂತಹ ಸನ್ಮಾರ್ಗದಲ್ಲಿ ನಡೆದವರಾಗಿರುತ್ತಾರೆ. ಇಂತಹವರ ಬಗ್ಗೆ ತಿಳಿಸುವುದು ನಮ್ಮ ಘನತೆಯನ್ನು ಹೆಚ್ಚಿಸುತ್ತದೆ ಎಂದು ನಾನು ನಂಬಿರುತ್ತೇನೆ.

ಶ್ರೀಯುತ ದೊಡ್ಡಬುದ್ಧಿಯವರು ಇವರ ಸಮಾಜದಲ್ಲೇ ಶ್ರೇಷ್ಠ ದಾನಿಗಳೆನಿಸಿಕೊಂಡಿರುತ್ತಾರೆ. ಇವರು ಮಾಡಿದ ದಾನವು ದೇವರಿಗೆ, ರೋಗಿಗಳಿಗೆ ಮತ್ತು ವಿದ್ಯಾರ್ಥಿಗಳಿಗೆ ಸಂದಿದೆ. ಇವರು ತಮ್ಮ ಗ್ರಾಮದ ಅಭಿವೃದ್ಧಿಗಾಗಿ ಶಾಲೆ, ಸೊಸೈಟಿ ಸ್ಥಾಪಿಸಿ, ಅದರಿಂದ ಗ್ರಾಮದ ಅಭಿವೃದ್ಧಿಯನ್ನು ಕಂಡಿರುತ್ತಾರೆ. ನಮ್ಮ ಹೆಗ್ಗಡದೇವನಕೋಟೆ ತಾಲ್ಲೂಕಿಗೆ ಆಸ್ಪತ್ರೆ, ಪಶು ಪ್ರಾಣಿಗಳಿಗೆ ಆಸ್ಪತ್ರೆ, ರಸ್ತೆ, ಸಂತೆ, ದೇವರ ಜಾತ್ರೆ, ಉತ್ಸವ, ಪೂಜೆ ಇವೆಲ್ಲಕ್ಕೂ ಒತ್ತು ಕೊಟ್ಟು ಸಹಕಾರ ನೀಡಿದವರಾಗಿರುತ್ತಾರೆ. ಇವೆಲ್ಲದರ ಮೂಲಕ ದೇಶ ಸೇವೆ ಮಾಡಿದ್ದಾರೆ ಎಂಬುದನ್ನು ನಾನು ನಿಮಗೆ ಹೇಳಬೇಕಾಗಿಲ್ಲ. ತಮಗೂ ಸಹ ಅರಿವಾಗುತ್ತದೆ ಅದನ್ನು ಮತ್ತೆ ನೆನಪು ಮಾಡುವವನಾಗಿರುತ್ತೇನೆ. ನಾನು ಅವರ ಮನೆಗೆ ಆಗಾಗ ಹೋಗುವ ರೂಢಿಯಾಗಿತ್ತು ಮತ್ತು ಅವರನ್ನು ನೋಡದೆ ಇದ್ದರೆ ನನಗೆ ಮುಜುಗರವಾಗುತ್ತಿತ್ತು. ನಾನು ಹೋದಾಗ ತಿಂಡಿ, ಊಟ ಮಾಡಿಸದೆ ಕಳುಹಿಸಿದವರಲ್ಲ. ನಾನಿರುವ ವೇಳೆಯಲ್ಲಿ ಇವರ ಮನೆಗೆ ಯಾರಾದರೂ ಏನಾದರೂ ಕೇಳಿಬಂದರೆ ಅವರ ಶ್ರೀಮತಿಯವರು ತಮ್ಮಲ್ಲಿರುವುದನ್ನು ಕೊಟ್ಟು ಕಳುಹಿಸುವ ಪದ್ಧತಿಯನ್ನು ಕಂಡಿದ್ದೆ, ಮೆಚ್ಚಿದ್ದೆ. ಇವರ ಮನೆಯಲ್ಲಿ ನೆಂಟರಿಷ್ಟರ ಮಕ್ಕಳುಗಳು ವಿದ್ಯಾಭ್ಯಾಸಕ್ಕಾಗಿ ಬಂದು ನೆಲೆಸಿ ಲಭ್ಯವಿರುವ ವಿದ್ಯೆ ಕಲಿತು ಮರಳುತ್ತಿದ್ದರು. ಇದು ಈ ಮನೆತನದಲ್ಲಿ ಬಂದ ರೂಢಿಯಾಗಿತ್ತು. ಅವರೊಡನೆ ಊರಿನ ಮಕ್ಕಳು ಕೆಲವರು ಗುರುಗಳ ಮನೆಯಲ್ಲಿ ವಿದ್ಯಾಭ್ಯಾಸ ಮಾಡಿದವರೂ ಉಂಟು. ಎಲ್ಲರನ್ನೂ ಒಂದೇ ರೀತಿಯಲ್ಲಿ ಕಾಣುವ

ಗುಣ ಅವರದಾಗಿತ್ತು. ಬುದ್ಧಿಯವರು ಜ್ಯೋತಿಷ್ಯದ ವಿದ್ಯೆಯನ್ನು ನೀಡುತ್ತಿದ್ದರು. ಮಕ್ಕಳನ್ನು ಕಂಡರೆ ದೊಡ್ಡಬುದ್ಧಿಯವರಿಗೆ ಬಲು ಪ್ರೀತಿ. ತಮ್ಮಲ್ಲಿರುವ ಹಣ್ಣು, ಹಾಲು ಮತ್ತು ಕಲ್ಲುಸಕ್ಕರೆ ನೀಡುವುದು ಇವರ ಪದ್ಧತಿಯಾಗಿತ್ತು. ಯಾರಾದರೂ ಅಪರಿಚಿತರು ಊರಿಗೆ ಬಂದರೆ ಅವರಿಗೆ ಆಶ್ರಯ ಕೊಡುವುದು ಇವರ ಪದ್ಧತಿಯಾಗಿತ್ತು.

ಶ್ರೀಯುತ ದೊಡ್ಡಬುದ್ಧಿಯವರು ನನಗೆ ಮತ್ತು ನನ್ನತಂದೆಯವರಿಗೆ ಬಹಳ ಬೇಕಾದವರಾಗಿದ್ದರು. ಇವರ ಮಾರ್ಗದರ್ಶನದಲ್ಲೇ ನಾವುಗಳು ಬೆಳೆದವರು. ಅವರು ತೋರಿಸಿದ ಮಾರ್ಗ ನಮ್ಮ ಬಾಳಿನಲ್ಲಿ ದಾರಿದೀಪವಾಗಿ ಬೆಳಕು ನೀಡುತ್ತಲಿದೆ. ದೊಡ್ಡಬುದ್ಧಿಯವರನ್ನು ಸದಾ ನೆನಪಿಸುವುದೇ ನಮ್ಮ ಉಸಿರಾಗಿದೆ. ಅಂತಹ ಉತ್ತಮ ದೈವೀಸ್ವಭಾವವನ್ನು ಬೆಳೆಸಿಕೊಂಡವರಾಗಿದ್ದರು ಎಂಬುದು ಸಾಕಷ್ಟು ಜನರುಗಳ ಸ್ಪಷ್ಟ ಮಾತಾಗಿತ್ತು. ಅದೆಲ್ಲವು ಈಗ ಬರಿ ಮಾತಾಗಿ ಉಳಿದಿದೆ. ಬುದ್ಧಿಯವರ ಪಾದಾರವಿಂದಗಳಲ್ಲಿ ನೆನಪಿನ ಪುಷ್ಪಗಳ ಅರ್ಪಣೆ ನನ್ನ ಭಾಗ್ಯ.

* * *

## ತಪಸ್ಸು .......

ತಪತಿ ಇತಿ ತಪಃ .......

ನಮ್ಮ ಪಾಪವನ್ನು ಮತ್ತು ದೋಷವನ್ನು ಸುಡುವ ಶಕ್ತಿಯೇ ತಪಸ್ಸು. ಮನುಷ್ಯ ತನಗೆ ತಿಳಿದೋ, ತಿಳಿಯದೆಯೋ ತಪ್ಪನ್ನು ಮಾಡುತ್ತಲೇ ಇರುತ್ತಾನೆ. ಪಂಚೇಂದ್ರಿಯಗಳ ಮೂಲಕ, ಮಾನಸಿಕವಾಗಿ ಪಾಪಗಳನ್ನು ಮಾಡುತ್ತಾನೆ. ಈ ಪಾಪಗಳನ್ನು ಸುಟ್ಟು ಬೂದಿ ಮಾಡಿಕೊಳ್ಳುವ ಸಾಧನವೇ ತಪಸ್ಸು.

ಸತ್ಯಕ್ಕಿಂತ ಹೆಚ್ಚಿನ ತಪಸ್ಸಿಲ್ಲ. ಪಶ್ಚಾತ್ತಾಪಕ್ಕಿಂತ ಮಿಗಿಲಾದ ತಪಸ್ಸಿಲ್ಲ. ಪ್ರೀತಿ, ಪ್ರೇಮಕ್ಕಿಂತ ಉತ್ತಮ ತಪಸ್ಸಿಲ್ಲ;

ನುಡಿದಂತೆ ನಡೆದರೆ ಅದೂ ತಪಸ್ಸೇ.

ಹೃದಯ ಶುದ್ಧ ಪ್ರೀತಿ, ಸೌಹಾರ್ದತೆ, ಕರ್ತವ್ಯನಿಷ್ಠೆ, ಏಕಾಗ್ರತೆಗಳೇ ನಿಜವಾದ ತಪಸ್ಸು.

ತಪಸ್ಸಿನಿಂದ ಮಾನವನು ಆನಂದವನ್ನುವನ್ನೇ ನಿರ್ಮಾಣ ಮಾಡಬಲ್ಲ. ತಪಸ್ಸಿನಿಂದ ಏನು ಬೇಕಾದರೂ ಮನುಷ್ಯ ಸಾಧಿಸಬಲ್ಲ. ಇಂದು ಈ ಆಚಾರ್ಯರ ಪೂಜೆ, ಪ್ರಾರ್ಥನೆಗಳೂ ಸಹ ತಪಸ್ಸೆ. ಇಂತಹ ತಪಸ್ಸು ಯಾರಿಗೆ ಬೇಡ ಅಲ್ಲವೇ.

ತಪಸ್ಸು ಸನ್ಯಾಸಿಗಳಿಗೆ ಮಾತ್ರವಲ್ಲ, ಸಾಧಕರಿಗೆ ಮಾತ್ರವಲ್ಲ, ಮತ್ತೇನೆಂದರೆ ಸರ್ವಮಾನವರಿಗೂ ನಿತ್ಯಜೀವನದಲ್ಲಿ ನಿತ್ಯಶಾಂತಿಗಾಗಿ ಬೇಕಾಗಿರುವ ಸಾಧನ. ಮಕ್ಕಳಿಗೂ, ವಿದ್ಯಾರ್ಥಿಗಳಿಗೂ, ಅಲ್ಪರಿಗೂ, ಮೇಧಾವಿಗಳಿಗೂ ಎಲ್ಲರಿಗೂ ಬೇಕು ಈ ತಪಸ್ಸು. ತಪಸ್ಸಿಲ್ಲದ ಜೀವನವೇ ಇಲ್ಲ.

# ಕೃಷಿ ಬ್ರಹ್ಮಾಂಡ - ನನ್ನ ಕಲ್ಪನೆಯ ಕೂಸು

ನನ್ನ ಕೃಷಿಬದುಕಿನಲ್ಲಿ ಉನ್ನತ ಶ್ರೇಣಿಯಲ್ಲಿ ಪದವಿಗಳನ್ನು ಪಡೆದು ಪುರಸ್ಕೃತನಾಗಿ, 28 ವರ್ಷಗಳಿಗೂ ಹೆಚ್ಚಿನ ಸೇವಾವಧಿಯ ಮೊದಲ ಭಾಗದಲ್ಲಿ ನಿಯೋಜಿತ ಕ್ಷೇತ್ರಾಭಿವೃದ್ಧಿ ಹಾಗೂ ಹೊಸ ಹೊಸ ತಳಿಗಳ ಆವಿಷ್ಕಾರ ಕಾಯಕದಲ್ಲಿ ಹಿರಿಯ ಅಧಿಕಾರಿಗಳ, ಅದಕ್ಕೂ ಮಿಗಿಲಾಗಿ ಒಡನಾಡಿ ರೈತರ ಮೆಚ್ಚುಗೆ - ಪ್ರೀತಿಗಳಿಗೆ ಪಾತ್ರನಾಗಿ ಅನೇಕಾನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದೆನಾದರೂ, ಗತವರ್ಷಗಳ ಸಾಧನೆಯ ಬಗ್ಗೆ ಒಮ್ಮೆ ಮೆಲಕು ಹಾಕಿದಾಗ - ನಾನು ಇದುವರೆಗೂ ಏನೆಲ್ಲಾ ಸಾಧನೆ ಮಾಡಿದ್ದೇನೆಂದು ತಿಳಿದೆನೊ ಅವೆಲ್ಲ ಕೇವಲ ಮೇಲಿನ ಮಧ್ಯಮವರ್ಗ ಅಥವಾ ಶ್ರೀಮಂತ ರೈತರಿಗೆ ಮಾತ್ರ ಪ್ರಯೋಜನಕಾರಿಯಾಗಬಲ್ಲವು. ಆದರೆ, ನಮ್ಮ ರಾಷ್ಟ್ರದ ಜನಸಂಖ್ಯೆಯ 70% ಜನ ರೈತರಿದ್ದು ಅವರಲ್ಲಿ 76.2% ಜನ ಬಡತನ ರೇಖೆಯ ಕೆಳಗಿದ್ದು, ಅವರು ನಾವು ಕೃಷಿ ವಿಶ್ವ ವಿದ್ಯಾನಿಲಯಗಳಿಂದ ಕೊಡುವ ತಂತ್ರಜ್ಞಾನ ಅಳವಡಿಸಿಕೊಳ್ಳಲು ಬೇಕಾಗುವ ಬಂಡವಾಳ ಅವರಲ್ಲಿಲ್ಲ. ಹೀಗಾಗಿ ಅವರಿಗೆ ಈ ತಂತ್ರಜ್ಞಾನಗಳು ಮುಟ್ಟುವುದಿಲ್ಲ ಎಂಬ ನಿತ್ಯಸತ್ಯ ನನ್ನನ್ನು ಅಲುಗಾಡಿಸಿತು. ಇದಕ್ಕೆ ಪೂರಕವಾಗಿ - ಪ್ರೇರಕವಾಗಿ - ನನ್ನ ಹಿರಿಯ ಗುರುಗಳಾದ ಡಾ. ದ್ವಾರಕಾನಾಥ್, ಡಾ. ಎ. ಎಮ್. ಕೃಷ್ಣಪ್ಪ ಹಾಗೂ ಡಾ. ಬಿ. ವಿ. ವೆಂಕಟರಾವ್ ಅವರುಗಳ ಚಿಂತನೆಯೂ ಅದೇ ಆಗಿದ್ದು ಅವರೆಲ್ಲರ ಆಶೀರ್ವಾದ, ಪ್ರೇರಣೆ, ಬೆಂಬಲಗಳ ಫಲವಾಗಿ ಒಡಮೂಡಿದ - ಇಂದು ರಾಜ್ಯಾದ್ಯಂತ, ನೆರೆ ರಾಜ್ಯಗಳ ಹಾಗೂ ಅನೇಕ ಹೊರ ದೇಶಗಳ ರೈತರ ಮತ್ತು ತಜ್ಞರ ಮೆಚ್ಚುಗೆಯ ವಿಷಯವಾಗಿರುವ ನನ್ನ ಕಲ್ಪನೆಯ ಕೂಸೇ ಒಂದು ಎಕರೆಯಲ್ಲಿ ಕೃಷಿ ಬ್ರಹ್ಮಾಂಡ.

ಜಲಾನಯನ ತತ್ತ್ವಗಳು ಮತ್ತು ಒಕ್ಕಲುತನ ಪದ್ಧತಿಗಳನ್ನು ಸಮ್ಮಿಲನಗೊಳಿಸಿ, ಕ್ಲಿಷ್ಟಕರವಲ್ಲದ, ಹೆಚ್ಚಿನ ಖರ್ಚುವೆಚ್ಚವಿಲ್ಲದ, ರೈತರ ಬದುಕನ್ನು ಸುಸ್ಥಿರಗೊಳಿಸಬಲ್ಲ,



**ಪ್ರೊ. ಎಮ್. ರುದ್ರಾರಾಧ್ಯ**
ಯೋಜನಾ ಸಮನ್ವಯಾಧಿಕಾರಿಗಳು
ಜೆಎಸ್‌ಎಸ್ ಎಸ್‌ಜಿಎಸ್‌ವೈ
ವಿಶೇಷ ಯೋಜನೆ
ಜೆಎಸ್‌ಎಸ್ ತಾಂತ್ರಿಕ
ಸಂಸ್ಥೆಗಳ ಆವರಣ,
ಮೈಸೂರು - 570 006.
ದೂರವಾಣಿ ಸಂಖ್ಯೆ. :
0821-2510471
ಸಂ. ದೂ. : 94481 45228.

ಸ್ವಾವಲಂಬನೆಯ ಕಡೆಗೆ ನಡೆಸಬಲ್ಲ ಮಾದರಿಯೊಂದನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಜಾವಿಕೆರೆಯ ಕೃಷಿಸಂಶೋಧನಾಕೇಂದ್ರದಲ್ಲಿ ನಾವು ಅಭಿವೃದ್ಧಿಪಡಿಸಿ, ಕಳೆದ ನಾಲ್ಕು ವರ್ಷಗಳಲ್ಲಿ ಸತತವಾಗಿ ಯಶಸ್ವಿಯಾಗಿ ನಿರ್ವಹಿಸಿ, ಇಂದು ಈ ಮಾದರಿಯು ಕೃಷಿಯಲ್ಲಿ ಆಸಕ್ತಿಯುಳ್ಳವರೆಲ್ಲರ ಮೆಚ್ಚುಗೆ ಗಳಿಸಿದೆಯೆಂದರೆ ಅದು ಉತ್ಪ್ರೇಕ್ಷೆಯ ಮಾತಲ್ಲ. ಇದೀಗ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾವಿದ್ಯಾಪೀಠವು, ಇದರ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಸಿ ರೈತರಿಗೆ ಮುಟ್ಟಿಸಲು ಆಶ್ರಯ ನೀಡಿದೆ.

ಒಂದು ಎಕರೆಯಲ್ಲಿ ಸಣ್ಣ ರೈತರಿಗಾಗಿ ರೂಪಿಸಿದ ಸಮಗ್ರಕೃಷಿ ಮಾದರಿಯಲ್ಲಿ ಮರಮುಟ್ಟು, ಮೇವು ಮತ್ತು ಉರುವಲು ಇತ್ಯಾದಿಗಳಿಗಾಗಿ ಅರಣ್ಯ ಗಿಡಗಳು, ಪೌಷ್ಟಿಕಾಂಶ ಒದಗಿಸುವ ಜೊತೆಗೆ ನಿರಂತರ ಆದಾಯ ನೀಡಲು ತೋಟಗಾರಿಕೆ ಬೆಳೆಗಳು ಮತ್ತು ಕೃಷಿ ಕುಟುಂಬಕ್ಕೆ ಸಮತೋಲನಆಹಾರ ಒದಗಿಬರಲು ಧಾನ್ಯದ ಬೆಳೆಗಳು, ಬೇಳೆಕಾಳುಗಳು, ಎಣ್ಣೆಕಾಳುಗಳು, ತರಕಾರಿಗಳು ಇತ್ಯಾದಿಗಳನ್ನೊಳಗೊಂಡ ಬೆಳೆಪದ್ಧತಿಗಳನ್ನು ಹಮ್ಮಿಕೊಳ್ಳುವ ಜೊತೆಗೆ ಕೃಷಿಯಾಧಾರಿತ ಉಪಕಸುಬುಗಳಾದ ಹೈನುಗಾರಿಕೆ, ಕುರಿಸಾಕಣೆ, ಕೋಳಿಸಾಕಣೆ, ಮೀನುಸಾಕಣೆ, ಜೇನುಸಾಕಣೆಗಳು ಮಾದರಿಯಲ್ಲಿ ಸ್ಥಾನ ಪಡೆದುಕೊಂಡಿವೆ. ರೈತನ ಕೃಷಿ ಕಾರ್ಯಕ್ರಮಗಳಿಗೆ ಅಗತ್ಯ ಸಂಪನ್ಮೂಲಗಳಾದ ಬೀಜ, ಗೊಬ್ಬರ ಮತ್ತು ಪ್ರಕೃತಿದತ್ತ ಪೀಡೆನಾಶಕಗಳನ್ನು ತಾನೇ ಉತ್ಪಾದಿಸಿಕೊಳ್ಳುವ ವ್ಯವಸ್ಥೆಯಿದೆ.

**ಮಾದರಿಯ ವಿನ್ಯಾಸ :**

ಈ ಮಾದರಿಯನ್ನು ಒಂದು ಎಕರೆ ವಿಸ್ತೀರ್ಣದಲ್ಲಿ ಅಳವಡಿಸಲಾಗಿದೆ. ಓಡುವಳಿಯ ಮೇಲೆ ಬೀಳುವ ಮಳೆಯ ನೀರು ಕೊಚ್ಚಿ ಪೋಲಾಗದಂತೆ ಅಡ್ಡಬದುಗಳನ್ನು ನಿರ್ಮಿಸಿ 5 ತಾಕುಗಳಾಗಿ ವಿಂಗಡಿಸಬೇಕು. ಮಳೆಯ ನೀರಿನ ನಷ್ಟ, ಮೇಲ್ಪದರದ ಫಲವತ್ತಾದ ಮಣ್ಣಿನ ನಷ್ಟ, ಹಾಗೂ ಬಳಸಿದ ಪೋಷಕಾಂಶಗಳ ಕೊಚ್ಚಣಿ ತಡೆಯಲು ಸಾಧ್ಯ. ಹೆಚ್ಚಾಗಿ ಹರಿಯುವ ಮಳೆನೀರಿಗೆ ಚಲನೆಯ ಮಾರ್ಗಗಳನ್ನು ನಿರ್ಮಿಸಿ, ಓಡುವಳಿಯ ಅತ್ಯಂತ ತಗ್ಗಿನಲ್ಲಿ ನಿರ್ಮಿಸಲಾದ ಕೃಷಿ ಹೊಂಡಕ್ಕೆ ಬಂದು ಸೇರುವ ವ್ಯವಸ್ಥೆ ಮಾಡಿದೆ. ಒಂದು ರೈತ ಕುಟುಂಬಕ್ಕೆ ಅವಶ್ಯವಾದ ಎಲ್ಲಾ ವಸ್ತುಗಳ ಉತ್ಪಾದನೆಗೆ ಅವಕಾಶ ಕಲ್ಪಿಸಿದೆ.

*** ಸಜೀವ ಬೇಲಿಯ ಬೆಳೆಗಳು :**

ಸರ್ವೆ, ಸಿಲ್ವರ್ ಓಕ್, ಕತ್ತಾಳೆ, ಗ್ಲಿರಿಸೀಡಿಯಾ, ಜೋಗಟೆ, ಬಾಗೆ, ಬಿದಿರು, ಹೊಂಗೆ, ಬೇವು, ಸೀಗೆ, ಅಂಟುವಾಳ, ದಾಸವಾಳ ಇತ್ಯಾದಿ.

*** ಸಸ್ಯಸಮೃದ್ಧಬದುಗಳು :**

ಹಲವು ಕಟಾವು ನೀಡಬಲ್ಲ ಹಸಿರುಹುಲ್ಲಿನ ಬೆಳೆ ಮತ್ತು ಗ್ಲಿರಿಸೀಡಿಯಾ/ಜೋಗಟೆ.

*** ಜೈವಿಕಅನಿಲಘಟಕ :**

ಕುಟುಂಬದ ಅಡಿಗೆಗೆ ಸಾಕಾಗುವಷ್ಟು ಅನಿಲ, ದೀಪದ ಬೆಳಕುಗಳ ವ್ಯವಸ್ಥೆ.

*** ಗೊಬ್ಬರ ಉತ್ಪಾದನಾ ಘಟಕಗಳು :**

ಕಾಂಪೋಸ್ಟ್ ಉತ್ಪಾದನೆಗೆ ಸುಧಾರಿತ ನಾಡೆಪ್ ಮಾದರಿ, ಜಪಾನ್ ಮಾದರಿ ಮತ್ತು ಎರೆಗೊಬ್ಬರ ಉತ್ಪಾದನ ತೊಟ್ಟಿಗಳು. ಗೊಬ್ಬರದ ತೊಟ್ಟಿಗಳ ಮೇಲೆ ನೆರಳಿಗಾಗಿ ಚಪ್ಪರ-ಹಂದರದ ಮೇಲೆ ಬಳ್ಳಿ ತರಕಾರಿಗಳು.

ವಿಭಾಗ - 1 (ಹಣ್ಣಿನ ಬೆಳೆಗಳು ಮತ್ತು ಅಂತರ ಬೆಳೆಗಳು) ಮಾವು, ಸಪೋಟ, ಹಲಸು, ಹುಣಸೆ, ಹೊಂಗೆ, ಬೇವು, ಬಾಗೆ, ನೇರಳೆ, ಸೀಬೆ, ಸೀತಾಫಲ ಹಾಗೂ ಬೆಟ್ಟದ ನೆಲ್ಲಿ ಇತ್ಯಾದಿ. ಅಂತರ ಬೆಳೆಗಳಾಗಿ ಅಲಸಂದೆ, ಅವರೆ, ತೊಗರಿ, ಬಟಾಣಿ, ಹೆಸರು, ಉದ್ದು, ಸೋಯಾ ಅವರೆ ಹಾಗು ಸಾವೆ, ಸಜ್ಜೆ, ನವಣೆ, ಹಾರಕ ಇತ್ಯಾದಿ.

ವಿಭಾಗ - 2 (ನೆಲಗಡಲೆ + ತೊಗರಿ, 8 : 2)

ಮಿಶ್ರಬೆಳೆಯಾಗಿ 250 ರಿಂದ 285 ಕೆ. ಜಿ. ನೆಲಗಡಲೆ ಮತ್ತು 125-130 ಕೆ. ಜಿ. ತೊಗರಿ.

ವಿಭಾಗ - 3 (ರಾಗಿ + ಹುಚ್ಚೆಳ್ಳು 4 : 1)

200 ರಿಂದ 250 ಕೆ. ಜಿ. ರಾಗಿ ಮತ್ತು 20 ರಿಂದ 25 ಕೆ. ಜಿ. ಹುಚ್ಚೆಳ್ಳು. ರಾಗಿ ಸಾಲುಗಳಲ್ಲಿ ಸಾಸಿವೆ ಮಿಶ್ರಬೆಳೆ ಮಾಡಿ 4 ರಿಂದ 6 ಕೆ. ಜಿ. ಸಾಸಿವೆ ಉತ್ಪಾದನೆ.

ವಿಭಾಗ - 4 (ರಾಗಿ + ಅವರೆ, 4 : 1)

200 ರಿಂದ 250 ಕೆ. ಜಿ. ರಾಗಿ, 4 ರಿಂದ 6 ಕೆ. ಜಿ. ಸಾಸಿವೆ, 75 ರಿಂದ 80 ಕೆ. ಜಿ. ಹಸಿ ಅವರೆ (ತರಕಾರಿ) ಮತ್ತು 35 ರಿಂದ 40 ಕೆ. ಜಿ. ಒಣ ಅವರೆಕಾಳು.

ವಿಭಾಗ - 5 (ವಾಸ್ತವ್ಯ, ಕೈತೋಟ ಮತ್ತು ಉಪಕಸುಬುಗಳು)

ವಾಸಕ್ಕೆ ಒಂದು ಕ್ಷೇತ್ರ ಕುಟೀರ, ಜಾನುವಾರು ಕೊಟ್ಟಿಗೆ, ಶೌಚಾಲಯ, ಜೈವಿಕ ಅನಿಲ ಘಟಕ, ಗೊಬ್ಬರದ ತೊಟ್ಟಿಗಳು ಕೃಷಿ ಹೊಂಡ, ಕೋಳಿ ಗೂಡು, ಜೇನು ಪೆಟ್ಟಿಗೆ, ಔಷಧೀಯ ಸಸ್ಯಗಳು, ತೆಂಗು, ಬಾಳೆ, ಹೂ ಗಿಡಗಳು ಮತ್ತು ಕೈತೋಟ.

**ಕ್ಷೇತ್ರಕುಟೀರ :**

ಚಿಕ್ಕದಾದರೂ ಚೊಕ್ಕವಾಗಿ ಎಲ್ಲ ಅನುಕೂಲಗಳ ಸುವ್ಯವಸ್ಥೆ

**ಶೌಚಾಲಯ :**

ಪರಿಸರಮಾಲಿನ್ಯಕ್ಕೆ ತಡೆ, ಜೈವಿಕಅನಿಲಘಟಕಕ್ಕೆ ಹೊಂದಿಸಿ ಪ್ರಯೋಜನ,

**ಜಾನುವಾರು ಕೊಟ್ಟಿಗೆ :**

ಒಂದೆರಡು ಎಮ್ಮೆ/ಹಸು, 10-12 ಕುರಿಗಳಿಗೆ ಅವಕಾಶ, ಪಶು ಆಹಾರ ಶೇಖರಿಸಿಡಲು ವ್ಯವಸ್ಥೆ.

**ಕೃಷಿಹೊಂಡ :**

ಹೊಂಡಕ್ಕೆ ಇರಬೇಕಾದ ಎಲ್ಲ ವ್ಯವಸ್ಥೆಗಳ ಪರಿಕಲ್ಪನೆ.

ಮೀನು ಸಾಕಣೆಗೆ ಅವಕಾಶ, ಮೇಲೆ ನಿರ್ಮಿಸಿದ ಕೋಳಿಗೂಡಿನಲ್ಲಿ ಕೋಳಿ ಸಾಕಣೆಗೆ ಅವಕಾಶ.

ಹೊಂಡದ ಸುತ್ತ ನಿರ್ಮಿಸಿದ ಜೇಲಿಯ ಮೇಲೆ ಬಳ್ಳಿ ತರಕಾರಿಗಳ ಉತ್ಪಾದನೆ.

**ಕೈತೋಟ :**

ಚಿಕ್ಕ ಚಿಕ್ಕ ಮಡಿಗಳಲ್ಲಿ ವೈವಿಧ್ಯಮಯ ತರಕಾರಿಗಳಿಗೆ ಅವಕಾಶ

8-10 ಕೆ. ಜಿ. ಒಣಮೆಣಸಿನ ಕಾಯಿ ಉತ್ಪಾದನೆ.

ಲಭ್ಯವಿರುವ ಜಾಗದಲ್ಲಿ ಹೂವಿನ ಗಿಡಗಳು, ಔಷಧೀಯ ಗಿಡಗಳು, ತೆಂಗು, ಅಡಿಕೆ, ವೀಳ್ಯದೆಲೆ, ಮೆಣಸು, ನಿಂಬೆ, ಕರಿಬೇವು, ಪಪ್ಪಾಯ, ಬಾಳೆ ಇತ್ಯಾದಿ

**ಒಟ್ಟಾರೆ ಪರಿಣಾಮ :**

ಉತ್ತಮ ಗುಣಮಟ್ಟದ ಫಲಸಮೃದ್ಧಿ-ಆರೋಗ್ಯ ಪೂರ್ಣ ಆಹಾರ

ರೈತಕುಟುಂಬಕ್ಕೆ ನೆಮ್ಮದಿಯ ನೆಲೆಗಟ್ಟು.

ಸಾಲ-ಸೋಲಗಳಿಂದ ಮುಕ್ತವಾಗಿ ಸುಸ್ಥಿರತೆಯ ನೆಲೆಗಟ್ಟಿಗೆ ಶೀಘ್ರ ಪಯಣ.

ಮೊದಲ ವರ್ಷದಲ್ಲಿ ಮಾದರಿಯ ಎಲ್ಲ ಘಟಕಗಳನ್ನು ಹೊಸದಾಗಿ ಸ್ಥಾಪಿಸಬೇಕಾಗುವುದರಿಂದ ಸುಮಾರು 20,000/- ರೂ. ಗಳ ಖರ್ಚು ತಗಲುತ್ತದೆ. ಮುಂಬರುವ ವರ್ಷಗಳಲ್ಲಿ ಎಲ್ಲಾ ಬಾಬ್ತುಗಳೂ ರೈತನ ಜಮೀನಿನಲ್ಲೆ ಒದಗಿ ಬರುವುದರಿಂದ ಖರ್ಚು 4 ರಿಂದ 5 ಸಾವಿರಕ್ಕೆ ಇಳಿಯುತ್ತದೆ.

ಸಮಗ್ರಕೃಷಿಯಿಂದಾಗಿ ಮೊದಲ ವರ್ಷ ಬರುವ ಆದಾಯ 25,000/- ರೂ. ಗಳಾದರೆ ಮುಂಬರುವ ವರ್ಷಗಳಲ್ಲಿ ಅಂದರೆ 3 ವರ್ಷಗಳ ತರುವಾಯ ವಿವಿಧ ಘಟಕಗಳಿಂದ ಬರುವ ಆದಾಯ ಹೆಚ್ಚುತ್ತಾ ಹೋಗಿ ಸುಮಾರು 45,000/- ರೂಗಳನ್ನು ಮುಟ್ಟುತ್ತದೆ. ಈ ಹಣಕಾಸಿನ ಲೆಕ್ಕಾಚಾರಗಳಿಗಿಂತ ಮಿಗಿಲಾಗಿ ಕುಟುಂಬಕ್ಕೆ ಒದಗಿ ಬರುವ ಅತ್ಯುತ್ತಮ ಗುಣಮಟ್ಟದ ವಿಷರಹಿತ ಆಹಾರ ಹಾಗು ಸುಭದ್ರ ಆರ್ಥಿಕ ನೆಲೆಗಟ್ಟಿನಿಂದಾಗಿ ದಕ್ಕುವ ಮಾನಸಿಕ ನೆಮ್ಮದಿ ಉಪಮಾತೀತ. ಹೀಗಾಗಿ ವಾಣಿಜ್ಯ ಚಟುವಟಿಕೆಗಿಂತ ಮಿಗಿಲಾಗಿ ಇದೊಂದು ಜೀವನ ಮಾರ್ಗ.



# ಸಮಾಜಭೂಷಣ

ಭರತಖಂಡವು ಅನೇಕ ಧರ್ಮಗಳ ನೆಲೆವೀಡು. ಹಿಂದೂ, ಜೈನ, ಬೌದ್ಧ, ಸಿಖ್, ಪಾರಸಿ, ಕ್ರೈಸ್ತ, ಮುಸಲ್ಮಾನ ಮುಂತಾದ ಧರ್ಮಗಳು ಪ್ರಮುಖವಾದವು. ಹಿಂದೂ ಧರ್ಮದಲ್ಲಿ ಶೈವ, ವೈಷ್ಣವ ಪ್ರಭೇದಗಳು ಬಲಾಢ್ಯವಾದುವು. ಶೈವದಲ್ಲಿ ಶಿವಾದ್ವೈತಸಂಪ್ರದಾಯದ ಸ್ವಯಂ ಆಚಾರ್ಯ ಪರಂಪರೆ ಇದೆ. ಅಂತಹ ಪರಂಪರೆಯಲ್ಲಿ ಆರಾಧ್ಯಪರಂಪರೆ ಬಹುದೊಡ್ಡ ಪರಂಪರೆಯೆನಿಸಿದೆ. ಆಂಧ್ರ ಪ್ರದೇಶದಿಂದ ಹಬ್ಬಿದ ಆರಾಧ್ಯಪರಂಪರೆಯು ಕರ್ನಾಟಕದಲ್ಲಿಯೂ ಸಾಕಷ್ಟು ಬೆಳೆದಿದೆ. ವೈದಿಕಮನೆತನಗಳಿಗೆ ಸೇರಿದ ಅನೇಕ ಕುಟುಂಬಗಳು ತಮ್ಮ ಸಂಸ್ಕೃತಿಗಳನ್ನು, ಸಂಸ್ಕಾರಗಳನ್ನು ಬೆಳೆಸಿಕೊಂಡು ಬಂದಿರುವುದನ್ನು ಇಂದಿಗೂ ನೋಡಬಹುದು. ಅಂತಹ ಪರಂಪರೆಯಲ್ಲಿ ಬಂದವರಲ್ಲಿ ಪ್ರಾತಃಸ್ಮರಣೀಯರಾದ ದಿವಂಗತರಾದ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ಒಬ್ಬರು. ಇವರು ಮಹಾರಾಜರಿಗೆ ಮಾರ್ಗದರ್ಶನ ಮಾಡುವಂತಹ ಅಪಾರ ಅನುಭವವುಳ್ಳವರಾಗಿದ್ದರು. ಆರ್. ಕುಮಾರಾರಾಧ್ಯರು ಸೋಸಲೆ ಗುರುಮಠದ ವಂಶಸ್ಥರು. ಅಲ್ಲಿಂದ ಜಿನ್ನಹಳ್ಳಿಗೆ ಕರೆಸಲ್ಪಟ್ಟವರು. ಇವರ ತಂದೆ ಶ್ರೀ ರೇವಣಾರಾಧ್ಯರು ಮತ್ತು ತಾಯಿ ಶ್ರೀಮತಿ ಬಸವಾಜಮ್ಮನವರು. ಇವರಿಗೆ ಇಬ್ಬರು ಅಕ್ಕಂದಿರು. ಒಬ್ಬ ತಮ್ಮ. ಇಂತಹ ತುಂಬು ಸಂಸಾರದಲ್ಲಿ ದಿನಾಂಕ ೨೧-೦೬-೧೮೮೫ ರಂದು ಜನನ., ಪರಂಪರೆಯಂತೆ ಗುರುಮಠದಲ್ಲೇ ವಿದ್ಯಾಭ್ಯಾಸ. ಬಾಲ್ಯದಲ್ಲೇ ಪ್ರತಿಭೆಯನ್ನು ಮೆರೆದವರು. ಸಂಸ್ಕೃತವನ್ನು ಅಭ್ಯಾಸ ಮಾಡಿದ್ದರ ಪರಿಣಾಮವಾಗಿ, ಆಯುರ್ವೇದ, ಜ್ಯೋತಿಷ್ಯ ಮುಂತಾದವುಗಳಲ್ಲಿ ಪಾಂಡಿತ್ಯ ಗಳಿಕೆ. ಜಿನ್ನಹಳ್ಳಿ ವೈದಿಕ ಮನೆತನದಲ್ಲಿ ಜನಿಸಿದರೂ ತಮ್ಮ ಕಟ್ಟುಪಾಡುಗಳನ್ನು ಬದಿಗಿಟ್ಟು, ಹಿಂದುಳಿದವರ, ದಲಿತರ ಜಂಬಲಕ್ಕೆ ನಿಂತು ಸರಳರಲ್ಲಿ ಸರಳರಾಗಿ, ಸಹೃದಯರಾಗಿ, ಸಾಮಾಜಿಕ ಸೇವೆ ಮಾಡಲಿಕ್ಕೆ ಟೊಂಕಕಟ್ಟಿ ನಿಂತವರು ಶ್ರೀ ಆರಾಧ್ಯರು.



**- ಡಾ. ಸಿ.ಎನ್. ಬಸವರಾಜು**
ಉಪನಿರ್ದೇಶಕರು,
ಪ್ರಾಚ್ಯವಿದ್ಯಾಸಂಶೋಧನಾಲಯ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - ೫೭೦೦೦೬.
ದೂ. : (ಕ.) 2419336
(ಮ.) : 5524232

ಜನರ ಮೆಚ್ಚುಗೆಯ ಸಂಬೋಧನೆ "ದೊಡ್ಡ ಬುದ್ಧಿಯವರು", "ದೊಡ್ಡ ಆರಾಧ್ಯರು" ಎಂದು! ಇಂತಹ ಬುದ್ಧಿಯವರನ್ನು ಆಗಿನ ಸರ್ಕಾರವೂ ಸಕಾಲಕ್ಕೆ ಗುರುತಿಸಿ, ಇವರನ್ನು ವಿಲೇಜ್ ಮುನ್‌ಸೀಫ್‌ರಾಗಿ ನೇಮಿಸಿದ್ದು ಇವರ ಹೆಗ್ಗಳಿಕೆ. ಇವರು ೧೯೪೪ ರಿಂದ ೧೯೫೩ರ ವರೆಗೆ ಹಂಪಾಪುರ ಗ್ರಾಮದ ಮುನ್ಸೀಫ್‌ರಾಗಿ ಸಾವಿರಾರು ತಕರಾರುಗಳನ್ನು ನ್ಯಾಯಬದ್ಧವಾಗಿ ಪರಿಹರಿಸಿರುವುದು ದಾಖಲೆಗಳಲ್ಲಿ ನಮೂದಾಗಿದೆ.

ಸಾಮಾಜಿಕ ಸೇವೆಯಲ್ಲಿಯೂ ಶ್ರೀ ಕುಮಾರಾರಾಧ್ಯರು ಸದಾ ಮುಂದು. ಜಿನ್ನಹಳ್ಳಿಯಲ್ಲಿ ಶಾಲೆ ತೆರೆಯುವಲ್ಲಿ, ಹಂಪಾಪುರದಲ್ಲಿ ಆಸ್ಪತ್ರೆ ತೆರೆಯುವಲ್ಲಿ ಇವರ ಪಾತ್ರ ಮಹತ್ತರವಾದುದು. ತಮಗೆ ಸೇರಿದ್ದ ಹೆಚ್.ಡಿ. ಕೋಟೆ ತಾಲ್ಲೂಕು ಜಂಪನಹಳ್ಳಿ ಗ್ರಾಮದಲ್ಲಿನ ೧೫ ಎಕ್ರೆ ತರಿ ಜಮೀನನ್ನು ಆಸ್ಪತ್ರೆಗೆ ದಾನವಾಗಿ ನೀಡಿದ್ದಲ್ಲದೆ, ಮೈಸೂರಿನಲ್ಲಿರುವ ಆರಾಧ್ಯಹಾಸ್ಟೆಲ್‌ಗಾಗಿ ೨೫ ಎಕ್ರೆ ಜಮೀನನ್ನು ಉದಾರವಾಗಿ ನೀಡಿರುವರು. ಇದಲ್ಲದೆ ಹತ್ತಾರು ವಿದ್ಯಾರ್ಥಿಗಳಿಗೆ ಊಟೋಪಚಾರ, ವಸತಿಯನ್ನು ಸ್ವತಃ ತಮ್ಮ ಮನೆಯಲ್ಲಿಯೇ ಕಲ್ಪಿಸಿದ್ದರೆಂಬುದನ್ನು ನೆನೆದರೆ ಇವರ ಬಗ್ಗೆ ಯಾರಿಗಾದರೂ ಗೌರವ ಮೂಡದಿರಲಾರದು.

ದೇವಸ್ಥಾನಗಳ ಜೀರ್ಣೋದ್ಧಾರ, ರಸ್ತೆಗಳ ಸುಧಾರಣೆ, ಕೆರೆಕುಂಟೆಗಳ ನಿರ್ಮಾಣ ಇತ್ಯಾದಿ ಜನೋಪಯೋಗಿ ಕಾರ್ಯಗಳನ್ನು ಮಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ನ್ಯಾಯಪಾಲಕರಾಗಿ, ಜನಾನುರಾಗಿಯಾಗಿ, ಅಜಾತಶತ್ರುವಾಗಿ, ಆದರ್ಶಗೃಹಸ್ಥರಾಗಿ ಕನ್ನಡ ನಾಡುನುಡಿಗಳ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡು, ಸಮಾಜಭೂಷಣರಾಗಿ, ಪೂಜ್ಯರಾಗಿ ಬಾಳಿ ಬದುಕಿದವರು. ನಡೆಶುದ್ಧ, ನುಡಿಶುದ್ಧ ಪುರುಷರಾಗಿ ಇಹಪರಗಳೆರಡೂ ಒಪ್ಪುವ ರೀತಿ ಬಾಳ್ವೆ ನಡೆಸಿ ೧೭-೦೨-೧೯೬೧ ರಲ್ಲಿ ಕೀರ್ತಿಶೇಷರಾದರು.

"*ಧನ್ಯೋ ಗೃಹಸ್ಥಾಶ್ರಮಃ*" ಎಂಬ ಮಾತಿಗೆ ಅರ್ಥವತ್ತಾದರು.

ಇಂತಹ ಜನಾನುರಾಗಿಗಳ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರು ಸಾಕ್ಷಾತ್ ಅನ್ನಪೂರ್ಣೆಯಂತಹವರು. ಪತಿಯ ಇಚ್ಛೆಯನ್ನರಿತು ಅವರ ನೆರಳಿನಂತೆ, ಸಹವರ್ತಿನಿಯಾಗಿ ಅನ್ನಸಂತರ್ಪಣೆ ಮಾಡುವಲ್ಲಿ ಸದಾ ಸಂತುಷ್ಟಭಾವದಲ್ಲಿ ಅತಿಥಿಗಳನ್ನು ಸತ್ಕರಿಸುತ್ತಿದ್ದರು. ಈ ದಂಪತಿಗಳಿಗೆ ಒಂದು ಹೆಣ್ಣು - ಅವರೆಂದರೆ ಶ್ರೀಮತಿ ಅಂಬುಜಾಕ್ಷಮ್ಮ ಚಂದ್ರಶೇಖರಾರಾಧ್ಯರು. ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರು. ಇನ್ನು ಅವರ ಏಕೈಕ ಪುತ್ರರೆಂದರೆ ಸಾಹಿತಿಗಳೂ, ವಿದ್ಯಾವಿನಯಶಾಲಿಗಳೂ, ತೇಜೋವಂತರೂ, ಪರಂಪರೆಯ ದ್ಯೋತಕವೆನ್ನುವಂತೆ ಬಾಳಿ ಬದುಕುತ್ತಿರುವವರೂ, ಸುಪ್ರಸಿದ್ಧರೂ, 'ಮುನಿಸಂದೇಶ' ಮಾಸ ಪತ್ರಿಕೆಯ ಸಂಪಾದಕರೂ ಆದ ಜಿನ್ನಹಳ್ಳಿ ಶ್ರೀ ನಾಗಭೂಷಣಾರಾಧ್ಯರು.

* * *




# ನನ್ನ ಸೋದರತ್ತೆ ಮತ್ತು ಮಾವನ ನೆನಪು

ನನ್ನ ತಂದೆಯ ಒಡಹುಟ್ಟಿದ ಒಬ್ಬ ಹಿರಿಯರಾದ ಶ್ರೀಮತಿ ಅಂಬುಜಾಕ್ಷಮ್ಮ ಅವರನ್ನು ಅವರ ಸೋದರತ್ತೆಯ ಮಗನಿಗೆ ಕೊಟ್ಟು ಮದುವೆಯಾಗಿತ್ತು. ಅವರೇ ನನ್ನ ಸೋದರ ಮಾವನವರಾಗಿದ್ದರು. ಅವರ ಹೆಸರು. ಸಾಗರೆ ಜೆ. ಸಿ. ಚಂದ್ರಶೇಖರಾರಾಧ್ಯರು. ಅವರು ವೃತ್ತಿಯಲ್ಲಿ ಸರಕಾರಿ ಶಿಕ್ಷಕರಾಗಿದ್ದರು. ಅವರು ವೃತ್ತಿಯಲ್ಲಿ ಉತ್ತಮರೆನಿಸಿ ಕೊಂಡವರು. ಅವರಿಗೆ ಮಕ್ಕಳಿರಲಿಲ್ಲ. ನನ್ನ ಅತ್ತೆಯವರು ಸ್ವಲ್ಪ ಸಿಡುಕಿನವರು. ನನ್ನ ಅತ್ತೆಗಿಂತಲೂ ಮಾವನವರು ಕಡುಕೋಪದವರು. ಆದರೂ ಅವರು ಬಹಳ ಒಳ್ಳೆಯವರು. ಹೃದಯ ನಿಷ್ಕಲ್ಮಶವಾಗಿತ್ತು. ಆಧ್ಯಾತ್ಮದಲ್ಲಿ ಸ್ವಲ್ಪಸಾಧನೆ ಮಾಡಿದವರು. ಅವರಿಗೆ ವೃತ್ತಿಗಿಂತ ದೇಶಪ್ರೇಮ ಬಹಳಷ್ಟಿತ್ತು. ಆದುದರಿಂದ ಅವರು 1947ರ ಸ್ವಾತಂತ್ರ್ಯ ಚಳವಳಿಯಲ್ಲಿ ನಮ್ಮ ಭಾರತದ ಮುಂದಾಳಾಗಿದ್ದ ಮಹಾತ್ಮಗಾಂಧೀಜಿಯವರ ನೇತೃತ್ವದಲ್ಲಿ ಸಹಭಾಗಿಯಾಗಿ ಸೇರಿ, ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಜೈಲುವಾಸ ಅನುಭವಿಸಿ, ತಮ್ಮ ವೃತ್ತಿಯನ್ನು ಲೆಕ್ಕಿಸದೆ ಹೆಚ್. ಡಿ. ಕೋಟೆ ತಾಲ್ಲೂಕಿನ ಸ್ವಾತಂತ್ರ್ಯ ಹೋರಾಟಗಾರರನ್ನು ಒಗ್ಗೂಡಿಸಿ, ಜನರನ್ನು ಹುರಿದುಂಬಿಸಿ ಜಾಗರೂಕರನ್ನಾಗಿಸಿದವರು ನನ್ನ ಮಾವನವರು. ಅಂತಹವರುಗಳಿಂದ ನಮ್ಮ ದೇಶ ದಾಸ್ಯದಿಂದ ಬಿಡುಗಡೆಗೊಂಡಿತು. ಅಂಥವರ ಸೇವೆ ಮಹತ್ತರವೆನಿಸುತ್ತದೆ.

ನಂತರ ಅವರು ತಮ್ಮ ವೃತ್ತಿಗೆ ಮರಳಿದರು. ಅದೆಲ್ಲವು ನನ್ನ ತಾತನ ಕೊಡುಗೆಯಾಗಿತ್ತು. ಮಾವನವರ ವೃತ್ತಿಯಲ್ಲಿ ಸರ್ವೀಸ್ ಬ್ರೇಕಾಗಿ, ರಜೆ ಇಲ್ಲದೆ ಎಲ್ಲವೂ ಗೋಜಲು ಆದರೂ ಅದೆಲ್ಲವನ್ನು ನಿಭಾಯಿಸಿದರು. ಅಷ್ಟೋ ಇಷ್ಟೋ ಪೆನ್‌ಷನ್ ಸಹ ಮಂಜೂರಾಯಿತು. ಮತ್ತು ಸ್ವಾತಂತ್ರ್ಯ ಹೋರಾಟಗಾರರ ಪೆನ್‌ಷನ್ ದೇಶದ್ದನ್ನು ಮಾತ್ರ ಪಡೆದರು. ರಾಜ್ಯದ್ದನ್ನು ಇವರು ಬೇಡ ಒಂದೇ ಸಾಕೆನಗೆ ಎಂದು ಬಿಟ್ಟಿದ್ದರು. ನುಡಿದಂತೆ

**- ಎನ್. ಕಾಂಚನ,**
ಮೈಸೂರು

ನಡೆದವರು. ನಿಜವಾಗಿಯೂ ಸಜ್ಜನ, ವಿವೇಕಶಾಲಿ, ವಿಷಯಚತುರ, ವಿದ್ವಾಂಸ, ಸದ್ಗುಣ, ಪ್ರತಿಭೆ, ಗೌರವಗಳನ್ನು ಬೆಳೆಸಿಕೊಂಡಂತವರು. ಇವರು ಜ್ಞಾನವನ್ನು, ಅನುಭವವನ್ನು, ಸಜ್ಜನಿಕೆಯನ್ನು, ಸುಸಂಸ್ಕೃತಿಯನ್ನು ಮತ್ತು ಸನ್ನಡತೆಯನ್ನು ಬೆಳೆಸಿಕೊಂಡವರಾಗಿದ್ದರು.

ಜೆ. ಸಿ. ಆರಾಧ್ಯರು ನಿವೃತ್ತಿಯಬಳಿಕ ವ್ಯವಸಾಯ ಮಾಡುವುದಾಗಿ ತೀರ್ಮಾನಿಸಿ ಅವರ ಜಮೀನಿನಲ್ಲಿ ಒಂದು ಮನೆ ಮಾಡಿ ವಾಸವಿದ್ದರು. ಅದು ಕೋಟೆ ತಾಲ್ಲೂಕು ಸಿರಮಳ್ಳಿ ಬಳಿ. ಅದು ಸರಕಾರ ಇವರಿಗೆ ನೀಡಿದ್ದ ಜಮೀನು. ಅದು ಕಾಡಾಗಿತ್ತು. ಅದನ್ನು ಅಭಿವೃದ್ಧಿಗೊಳಿಸಿ ವ್ಯವಸಾಯವಮಾಡಿ ಫಸಲನ್ನು ತೆಗೆದು ಜೀವಿಸುತ್ತಲಿದ್ದರು. ಅಲ್ಲಿಯೇ ಅವರ ತಾಯಿ ದೇವಾಜಮ್ಮನವರು ಕೈಲಾಸವಾಸಿಗಳಾದರು. ಅವರು ನನ್ನ ತಾತನ ಅಕ್ಕನವರಾಗಿದ್ದರು. ಸದರಿ ಜಮೀನನ್ನು ಮಾರಿ ಗಂಡ-ಹೆಂಡಿರು ನಮ್ಮ ತಾತನ ಮನೆಗೆ ಬಂದು ಚಿನ್ನಹಳ್ಳಿಯಲ್ಲಿದ್ದರು. ನನ್ನ ತಂದೆಗೂ ಅವರು ಒಂದು ಆಸರೆಯಾಗಿದ್ದರು ಎಂದು ನನ್ನ ತಂದೆಯವರು ಆಗಾಗ ಹೇಳುತ್ತಿದ್ದರು.

ನನ್ನ ಮಾವನವರಿಗೆ ಕೊನೆಯಲ್ಲಿ ಕ್ಯಾನ್ಸರ್ ಬಂದು ಬಹಳ ಜೀವನದಲ್ಲಿ ಹೋರಾಟ ಮಾಡಿ ಬೆಂಗಳೂರು, ಮೈಸೂರು ಕೆ. ಆರ್. ಆಸ್ಪತ್ರೆ ಒಳರೋಗಿಯಾಗಿ ನನ್ನ ತಂದೆಯವರ ಮುಂದಾಳತ್ವದಲ್ಲಿ ಶುಶ್ರೂಷೆಗೊಂಡು ದಿನಾಂಕ 20-10-85ರಲ್ಲಿ ಕೈಲಾಸವಾಸಿಗಳಾದರು. ನಂತರ ಅತ್ತೆಯವರು ಮೈಸೂರಿನ ನಮ್ಮ ಮನೆಯಲ್ಲೇ ಇದ್ದರು. ತದನಂತರ 19-5-2002ರಲ್ಲಿ ಅವರು ಇಹಲೋಕ ತ್ಯಜಿಸಿದರು. ಇಬ್ಬರಿಗೂ ನನ್ನ ತಂದೆಯವರೇ ನೋಡಿದರು ಹಾಗೂ ಅಂತ್ಯಕ್ರಿಯಾಕರ್ಮಗಳನ್ನು ಮಾಡಿದರು. ನಮ್ಮ ಕುಟುಂಬದವರಲ್ಲಿ ಹಿರಿಯರ ಮಾರ್ಗದರ್ಶನದಂತೆ ನಡೆದವರಾಗಿರುತ್ತಾರೆ. ಇಂತಹ ಒಂದು ಮನೆತನ ನಮ್ಮದು.

* * *

## ನನ್ನ ಅಜ್ಜ

ನಾನು ಅವರನ್ನು ಫೋಟೋದಲ್ಲಿ ನೋಡಿದ್ದೇನೆ ಅಷ್ಟೆ. ಆದರೆ ಅವರು ಮಾತ್ರ ನಮ್ಮೊಡನೆ ಸದಾ ಇದ್ದಾರೆ. ಅಂದರೆ ನಾವು ಊರಿಗೆ ಹೋದಲ್ಲಿ ನಮ್ಮೊಡನೆ ಮಾತನಾಡುವ ಜನರು ಅಜ್ಜನನ್ನು ಅವರ ಕೆಲಸವನ್ನು ನಮಗೆ ತಿಳಿಸದೇ ಹೋದ ದಿನಗಳಿಲ್ಲ. ಆದ್ದರಿಂದ ಅಜ್ಜನನ್ನು ನೋಡದಿದ್ದರೂ ಅವರ ನೆನಪು ಸಿಕ್ಕುತ್ತಲಿತ್ತು ಹಾಗೂ ನೋಡುತ್ತಲಿದ್ದೆವು.

ಅವರ ಹೆಸರು ಆರ್. ಕುಮಾರಾರಾಧ್ಯ

ರೆ - ಹೂವಿನ ಪರಾಗ
ಕು - ಕುಟುಂಬದ
ಮಾ - ಮಾನ ಮರ್ಯಾದೆಯನ್ನು
ರಾ - ರಾರಾಜಿಸುವ
ರಾ - ರಾದಂತಹ
ಧ್ಯ - ಧ್ಯೇಯ ಉಳ್ಳವರು. - *ಆರಾಧ್ಯ ಪೂರ್ಣ ಚೈತನ್ಯ ರೇಣುಕೇಶ್*

# ದಿನನಿತ್ಯದಲ್ಲಿ ಆಯುರ್ವೇದ

*ನಮಾಮಿ ಧನ್ವಂತರಿಮಾದಿದೇವಂ*
*ಸುರಾಸುರೈರ್ವಂದಿತಪಾದಪದ್ಮ ಮ್ |*
*ಲೋಕೇ ಜರಾರುಗ್ಭಯಮೃತ್ಯುನಾಶಂ*
*ದಾತಾರಮೀಶಂ ವಿವಿಧೌಷಧೀನಾಮ್ ||*

ಇದರ ಮೂಲ ಉದ್ದೇಶವೇನೆಂದರೆ ಆಯುರ್ವೇದವೆಂದರೇನು, ಆಯುರ್ವೇದದಲ್ಲಿ ಆರೋಗ್ಯದ ಬಗ್ಗೆ ಯಾವ ನಿಯಮಗಳನ್ನು ವರ್ಣಿಸಿದ್ದಾರೆ ಎಂಬುದನ್ನಷ್ಟೆ ತಿಳಿಯುವ ಉದ್ದೇಶ.

ಈಗಿನ ಜಗತ್ತಿನಲ್ಲಿ ಬೆಳಗೆದ್ದು ವರ್ತಮಾನಪತ್ರಿಕೆ ಓದಲು ಕುಳಿತರೆ ಅವರು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಇವರಿಗೆ ಮೂತ್ರಪಿಂಡ ಖಾಯಿಲೆ. ಶ್ವಾಸದ ತೊಂದರೆಯಿಂದ ಬಳಲುತ್ತಿದ್ದಾರೆ. ಇವರು ಸಕ್ಕರೆ ಖಾಯಿಲೆಯಿಂದ ತೊಂದರೆ ಪಡುತ್ತಿದ್ದಾರೆ. ಇನ್ನೂ ಎಷ್ಟೋ ವರದಿಗಳು ನಮ್ಮ ಮುಂದೆ ಬರುವ್ವವು. ಹಾಗಾದರೆ ಇವೆಲ್ಲಕ್ಕೂ ಏನು ಕಾರಣ? ಯಾವ ಕಾರಣದಿಂದ ನಾವು ತೊಂದರೆಗಳನ್ನು ಅನುಭವಿಸುತ್ತಿದ್ದೇವೆ. ಎಂಬುದರ ಸತ್ಯಾಸತ್ಯತೆಯನ್ನು ಅರಿಯಲು ಹೋದಾಗ, ನಮ್ಮಲ್ಲಿ ಊಟದ ಬಗ್ಗೆ ರೀತಿ ನೀತಿ ಇಲ್ಲದಿರುವುದು. ಶರೀರವು ಅಸ್ವಾಸ್ಥ್ಯದಿಂದ ಕೂಡಿರುವುದಕ್ಕೆ ಶಾಸ್ತ್ರದಲ್ಲಿ ಹೇಳಿರತಕ್ಕಂಥ ನಿಯಮಗಳ ಉಲ್ಲಂಘನೆಯೇ ಕಾರಣವೆಂದರೆ ತಪ್ಪಾಗಲಾರದು. ಆದ ಕಾರಣ ಆಯುರ್ವೇದವೆಂದರೇನು, ಯಾವ ಆರೋಗ್ಯದ ಉದ್ದೇಶಕ್ಕಾಗಿ ಅದರಲ್ಲಿ ವರ್ಣನೆ ಕಂಡುಬರುವುದು ಎಂಬುದನ್ನು ತಿಳಿದುಕೊಳ್ಳಬೇಕು.



**ಡಾ. ಜಿ.ವಿ. ಮುಳಗುಂದ**
(M.D. Ayu)
ನಿವೃತ್ತ ಸರ್ಕಾರಿ ವೈದ್ಯರು
280, II ಮೇನ್, 10ನೇ ಕ್ರಾಸ್
ಶ್ರೀರಾಮಪುರ 2ನೇ ಹಂತ
ಮೈಸೂರು - 23
ದೂ. : 2363572

"ಶರೀರ ಸಂಪತ್ತು" ಬಹು ಅಮೂಲ್ಯವಾದುದು ಎಂದು ಹಿರಿಯರು ಹೇಳಿದ್ದಾರೆ. ಏಕೆಂದರೆ ಶರೀರ ಆರೋಗ್ಯದಿಂದ ಇದ್ದರೆ ಅಥವಾ ಶರೀರದಲ್ಲಿಯ ಅವಯವಗಳು ಸದೃಢವಾಗಿದ್ದರೆ ಬೇಕಾದಷ್ಟು ಸಂಪತ್ತನ್ನು

ಹಾಗೂ ಐಶ್ವರ್ಯವನ್ನು ಸಂಪಾದನೆ ಮಾಡಬಹುದು. ಆದರೆ ಅದೇ ಶರೀರದಲ್ಲಿಯ ಅವಯವಗಳು ಸದೃಢವಾಗಿರದಿದ್ದರೆ ಅಥವಾ ಶರೀರ ಅನಾರೋಗ್ಯದಿಂದ ಬಳಲುತ್ತಿದ್ದರೆ ನಾವು ಮಾನಸಿಕವಾಗಿ, ಶಾರೀರಿಕವಾಗಿ ಜರ್ಝರಿತರಾಗಿ ಅದೇ ವ್ಯಸನದಲ್ಲಿ ಯಾವ ಕಾರ್ಯವನ್ನು ಮಾಡುವಷ್ಟು ಸಮರ್ಥರಾಗಲಾರೆವು.

ಇನ್ನು ಸಂಪತ್ತುಗಳಿಸುವುದಂತೂ ದೂರದ ಮಾತೇ?

ಇಂಗ್ಲೀಷಿನಲ್ಲಿ ಗಾದೆ ಮಾತೊಂದಿದೆ. "ಸಂಪತ್ತು ಕಳೆದುಕೊಂಡರೆ ಸ್ವಲ್ಪ ಕಳೆದುಕೊಂಡಂತೆ, ಆದರೆ ಆರೋಗ್ಯ ಕಳೆದುಕೊಂಡರೆ ಎಲ್ಲವನ್ನೂ ಕಳೆದುಕೊಂಡಂತೆ"

ಆರೋಗ್ಯ ಭಾಗ್ಯ ಶರೀರದ ಮೇಲೆ ಅವಲಂಬಿತವಾಗಿರುವುದು. ಇದಕ್ಕೆ ಶರೀರ ಸದಾ ಚೈತನ್ಯದಿಂದ ಕೂಡಿರಬೇಕು. ಚೈತನ್ಯಯುಕ್ತವಾದಂಥ ಶರೀರದಲ್ಲಿ ಕೆಲವೊಂದು ಘಟಕಗಳ ಸಮಾವೇಶ ಅವಶ್ಯವಾಗಿದೆ. ಸಂಸ್ಕೃತ ಉಕ್ತಿಯಂತೆ "ಶರೀರೇಂದ್ರಿಯ ಸತ್ತ್ವಾತ್ಮಾಂ ಸಂಯೋಗಧಾರೀ ಜೀವಿತಮ್ "

ಅಂದರೆ ಶರೀರ, ಇಂದ್ರಿಯ, ಸತ್ವ(ಮನಸ್ಸು), ಆತ್ಮ ಈ ಘಟಕಗಳು ಸಮವಾಯಿ ಸ್ವರೂಪದಿಂದ ಕೂಡಿದಾಗ ಶರೀರ ಚೈತನ್ಯದಿಂದ ಯುಕ್ತವಾಗಿರುವುದು. ಈ ೪ ಘಟಕಗಳು ಪರಿಪೂರ್ಣವಾಗಿದ್ದು, ಸ್ವಸ್ಥವಾಗಿದ್ದಾಗ ಚೈತನ್ಯಯುಕ್ತ ಶರೀರ ಆರೋಗ್ಯದಿಂದ ಕೂಡಿರುವುದು.

ಇಂಥ ಆರೋಗ್ಯವಂತ ಶರೀರದ ಭಾಗ್ಯಕ್ಕಾಗಿ ಆಯುರ್ವೇದ ಶಾಸ್ತ್ರದಲ್ಲಿ ಹೇಳಿರತಕ್ಕಂಥ ದಿನಚರ್ಯೆಗಳನ್ನು ತಪ್ಪದೇ ಪಾಲಿಸಬೇಕು.

ದಿನಚರ್ಯೆ = ಶಾಸ್ತ್ರದಲ್ಲಿ "ಬ್ರಾಹ್ಮೀ ಮುಹೂರ್ತೇ ಉತ್ತಿಷ್ಠೇತ ಸ್ವಸ್ಥೋರಕ್ಷಾರ್ಥ ಮಾಯುಷಃ " ಅಂದರೆ ಆರೋಗ್ಯ ಪ್ರಾಪ್ತಿಮಾಡಿಕೊಳ್ಳಬೇಕೆಂದರೆ ಬ್ರಾಹ್ಮೀಮುಹೂರ್ತದಲ್ಲಿ (ನಸುಕಿನ ೪ ಗಂಟೆ) ಎದ್ದು ಮುಖಮಾರ್ಜನ, ಬಹಿಪರಿಮಾರ್ಜನ, ದಂತಧಾವನ, ಸ್ನಾನ, ಧ್ಯಾನ, ಯೋಗ, ಇತ್ಯಾದಿಗಳನ್ನು ಪೂರೈಸಿಕೊಂಡು ದೈನಂದಿನಕ್ಕೈಂಕರ್ಯದಲ್ಲಿ ತೊಡಗಬೇಕು. ಅಂದರೆ ವಿದ್ಯಾರ್ಥಿಗಳಾದವರು ಶಾಸ್ತ್ರಾಧ್ಯಯನದಲ್ಲಿ ತೊಡಗಬೇಕು. ಉಳಿದವರು ತಮ್ಮ ತಮ್ಮ ಕಾರ್ಯಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ ತೊಡಗಬೇಕು.

ಈ ದಿನಚರ್ಯವನ್ನು ಪಾಲಿಸುವುದರ ಜೊತೆಗೆ ಹಿತಮಿತಆಹಾರಸೇವನೆ ಕ್ರಮ ಹಾಗೂ ಆಯಾ ಋತುಗಳಿಗನುಸಾರ ಆಹಾರ - ವಿಹಾರ ಪಾಲನೆಗಳನ್ನು ಕ್ರಮವಾಗಿ ಪಾಲಿಸಬೇಕು. ಈ ಮೇಲಿನ ದಿನನಿತ್ಯದ ಚಟುವಟಿಕೆಗಳನ್ನು ಪುರುಷಾರ್ಥ ಚತುಷ್ಟಯಗಳ ಸರಿಯಾದ ಕ್ರಮದಿಂದ ಪಾಲಿಸಿದಾಗ ನಮಗೆ ಮೋಕ್ಷಪ್ರಾಪ್ತಿಗೆ ದಾರಿಯಾಗುವುದೆಂದು ಹೇಳಿದ್ದಾರೆ.

ಪುರುಷಾರ್ಥ ಚತುಷ್ಟಯಗಳೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷ.

ಈ ಭೂಮಿಯ ಮೇಲೆ ಹುಟ್ಟಿ ಬಂದಂಥ ಯಾವುದೇ ಪುರುಷನಾಗಲಿ, ಸ್ತ್ರೀಯಾಗಲಿ ಮೇಲಿನ ಚತುಷ್ಟಯಗಳನ್ನು ಅನುಷ್ಠಾನದಲ್ಲಿ ತರಬೇಕು.

ಮೊದಲನೆಯ ಪುರುಷಾರ್ಥ ಧರ್ಮ :- "ಧರ್ಮೋ ರಕ್ಷತಿ ರಕ್ಷಿತಃ" ಧರ್ಮವನ್ನು ರಕ್ಷಣೆಯಿಂದ ಕಾಪಾಡಿದ್ದಾದರೆ ಅದು ನಮ್ಮನ್ನು ರಕ್ಷಿಸುತ್ತದೆ. ಅಂದರೆ ಅಧರ್ಮದ ಯಾವುದೇ ಚಟುವಟಿಕೆಯಲ್ಲಿ ತೊಡಗಬಾರದು. ಅಧರ್ಮದಿಂದ ಮನಸ್ಸಿನ ಚಿತ್ತ ಚಾಂಚಲ್ಯತೆ ಉತ್ಪನ್ನವಾಗಿ

ಶರೀರದಲ್ಲಿ ಶಾರೀರಿಕವಾಗಿ ಹಾಗೂ ಮಾನಸಿಕವಾದಂಥ ವಿಕೃತಿಗಳನ್ನು ಉತ್ಪನ್ನ ಮಾಡಿ ಆರೋಗ್ಯ ಹದಗೆಡುವಂತೆ ಮಾಡುತ್ತದೆ.

ಎರಡನೆಯದಾಗಿ ಅರ್ಥ :- ಅರ್ಥವೆಂದರೆ ಧನ ಅಥವಾ ಹಣ ಅಥವಾ ಕಾಸು ಎಂದರ್ಥವಾಗುವುದು.

ಹಣ ಸಂಪಾದನೆ ಧರ್ಮಯುಕ್ತವಾಗಿರಬೇಕು. ಅಧರ್ಮದ ಹಣಸಂಪಾದನೆಯು ಮನುಷ್ಯನ ತೃಷೆಗೆ ಕಾರಣವಾಗಿದೆ. "ಆಸೆಯೇ ದುಃಖಕ್ಕೆ ಮೂಲ" ಎಂಬ ನಾಣ್ನುಡಿಯಂತೆ ಆರೋಗ್ಯವಂತ ಶರೀರ ಆಸೆಯ ಮೂಲವಾಗಿ ಅನಾರೋಗ್ಯಕ್ಕೆ ಕಾರಣವಾಗುವುದು.

ಸೃಷ್ಟಿಯಲ್ಲಿ ಅವರವರ ಕಾಯಕದಂತೆ "ಕಾಯಕವೇ ಕೈಲಾಸ"ವೆಂಬಂತೆ ಧರ್ಮದಿಂದ ಕಾಯಕವನ್ನು ಮಾಡಿದ್ದಾದರೆ ಅದುವೇ ಕೈಲಾಸವಿದ್ದಂತೆ. ಅದರಿಂದ ಆರೋಗ್ಯಸಂಪತ್ತು ಪ್ರಾಪ್ತವಾಗುವುದು.

ಇನ್ನು ಮೂರನೆಯದಾಗಿ ಕಾಮ :- ಕಾಮ ಎಂದರೆ, ಇಚ್ಛೆ ಅಥವಾ ಅಪೇಕ್ಷೆ ಅಥವಾ ಪಡೆದುಕೊಳ್ಳುವುದು.

ಯಾವುದನ್ನೂ ನಾವು ಪಡೆಯಬೇಕಾದರೆ ಧರ್ಮದಿಂದ ಪಡೆಯಬೇಕು. ಇದಕ್ಕೆ ಶರೀರದಲ್ಲಿಯ ಇಂದ್ರಿಯಗಳ ನಿಗ್ರಹದಿಂದ ಅಪೇಕ್ಷೆ ಪೂರೈಸಿಕೊಳ್ಳಬೇಕು. ಇಂದ್ರಿಯ ನಿಗ್ರಹ ಮೀರಿ ಅಪೇಕ್ಷೆಪಟ್ಟದ್ದಾದರೆ ಅದು ಮನಸ್ಸಿನ ಮೇಲೆ ಪರಿಣಾಮವಾಗಿ ದುಃಖಕ್ಕೆ ಕಾರಣೀಭೂತವಾಗುವುದು. ಅದು ಅಹಿತ ಕರ್ಮಗಳ ಪ್ರವೃತ್ತಿಗೆ ಕಾರಣವಾಗುವುದು. ಕುದುರೆಗೆ ಕಡಿವಾಣವಿದ್ದಂತೆ, ಮದವೇರಿದ ಆನೆಗೆ ಮಾವುತನ ಅಂಕುಶವಿದ್ದಂತೆ, ನಮ್ಮ ಶರೀರದಲ್ಲಿರತಕ್ಕಂಥ ಇಂದ್ರಿಯಗಳ ನಿಗ್ರಹವನ್ನು ಮನಸ್ಸು, ಮನಸ್ಸಿನ ನಿಗ್ರಹವನ್ನು ಚೇತನವಾದ ಆತ್ಮನು ನಿಗ್ರಹಿಸಿಕೊಂಡು ಶರೀರದ ಆರೋಗ್ಯ ಕಾಪಾಡಿಕೊಳ್ಳಬೇಕು.

ಈ ಜಗತ್ತಿನಲ್ಲಿ ಪರಿಪೂರ್ಣ ಜ್ಞಾನದಿಂದ ಕೂಡಿದ ವಸ್ತು ಎಂದರೆ ಮನುಷ್ಯನೊಬ್ಬನೇ. ಪ್ರಾಣಿ, ಪಶು, ಪಕ್ಷಿಗಳಿಗೂ ಜ್ಞಾನವಿರುವುದು. ಆದರೆ ಮೂರು ಕಾಲಗಳ ವಿಚಾರ ಮಾಡುವ ಪ್ರವೃತ್ತಿ ಮನುಷ್ಯನೊಬ್ಬನಿಗಿದೆ. ಆದ ಕಾರಣ ಆರೋಗ್ಯ ಕಾಪಾಡಿಕೊಳ್ಳುವುದರಲ್ಲಿ ಮನೋ ನಿಗ್ರಹ ಅತಿ ಪ್ರಾಮುಖ್ಯವಾಗಿದೆ.

ಇನ್ನು ನಾಲ್ಕನೆಯದಾಗಿ ಮೋಕ್ಷ :- ಮೋಕ್ಷ ಅಲೌಕಿಕವ್ಯವಹಾರಜ್ಞಾನದಿಂದ ಕೂಡಿದೆ. ಅಂದರೆ ಕಣ್ಣಿಗೆ ಕಾಣಲಾರದ್ದು. ಅಗೋಚರವಾದದ್ದು. ಇಹದಲ್ಲಿ ಯಾವನು ಕರ್ಮ ಅಥವಾ ಕಾರ್ಯಗಳನ್ನು ಧರ್ಮ -ಅರ್ಥದಿಂದ ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗಿ ನಾಲ್ಕು ಜನರ ಹಿತರಕ್ಷಣೆ- ಪ್ರಾಣ ರಕ್ಷಣೆಗೆ ಕಾರಣೀಭೂತನಾಗುವನೋ ಅವನೇ ಪರಲೋಕದಲ್ಲಿ ಮೋಕ್ಷ ಪ್ರಾಪ್ತಿಗೆ ಕಾರಣೀಭೂತನಾಗುವನು.

ಯಾವ ರೀತಿ ಆರೋಗ್ಯದ ಸಾಧನೆಗೆ ಪುರುಷಾರ್ಥಚತುಷ್ಟಯಗಳು ಕಾರಣೀಭೂತ ವಾಗಿರುವವೋ ಅದೇ ರೀತಿ ನಾವು ದಿನ ನಿತ್ಯ ಸೇವಿಸುವ ಆಹಾರವೂ ಆರೋಗ್ಯ ವರ್ಧನೆಗೆ ಕಾರಣೀಭೂತವಾಗಿರುವುದು.

ಆಹಾರದಲ್ಲಿ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ ಎಂದು ೪ ಪ್ರಕಾರ. ಇದು

ಶರೀರದಲ್ಲಿ ರತಕ್ಕಂಥ ಸಾತ್ತ್ವಿಕ, ರಾಜಸ, ತಾಮಸ ಗುಣಗಳ ವರ್ಧನೆಗೆ ಕಾರಣವಾಗಿರುವುದು.

ನಾವು ಸೇವಿಸುವ ಆಹಾರ ಸಾತ್ತ್ವಿಕಗುಣವರ್ಧನೆ ಮಾಡಿ ಸಾತ್ತ್ವಿಕಕ್ರಿಯಾಪ್ರವೃತ್ತಿಯಲ್ಲಿ ತೊಡಗುವಂತೆ ಮಾಡುವುದು. ತಾಮಸಪ್ರಧಾನಆಹಾರ ಶರೀರದಲ್ಲಿಯ ತಾಮಸೀಗುಣವನ್ನು ವರ್ಧನೆ ಮಾಡಿ ತಾಮಸಪ್ರವೃತ್ತಿಯಲ್ಲಿ ತೊಡಗುವಂತೆ ಮಾಡುವುದು. ಆದ ಕಾರಣ ಮನುಷ್ಯನ ಆರೋಗ್ಯರಕ್ಷಣೆಗೆ ಆಹಾರ ಸೇವನೆ ಕ್ರಮ ಬಹಳ ಮಹತ್ವಪೂರ್ಣವಾಗಿದೆ.

" *ಒಂದ್ಹೊತ್ತು ಊಟ ಮಾಡಿದವ ಯೋಗಿ*

*ಎರಡ್ಹೊತ್ತು ಊಟ ಮಾಡಿದವ ಭೋಗಿ*

*ಮೂರ್ಹೊತ್ತು ಊಟಮಾಡಿದವನನ್ನು ಹೊತ್ತುಕೊಂಡು ಹೋಗಿ* " ಎಂಬ ನಾಣ್ನುಡಿ ಇದೆ. ಈ ಪ್ರಕಾರ ಆರೋಗ್ಯರಕ್ಷಣೆಗೆ, ಶರೀರರಕ್ಷಣೆಗೆ ಆಯುರ್ವೃದ್ಧಿಗೋಸ್ಕರ ಯಾವ ಶಾಸ್ತ್ರದಲ್ಲಿ ಪಾಂಡಿತ್ಯಪೂರ್ಣ ವಿಚಾರವಿಮರ್ಶೆ ಮಾಡಲ್ಪಟ್ಟಿದೆ ಎಂದರೆ ಅದುವೇ "ಆಯುರ್ವೇದಶಾಸ್ತ್ರ." ಹಾಗಾದರೆ ಆಯುರ್ವೇದ ಎಂದರೇನು ?

ಆಯುರ್ವೇದ ಎಂದರೆ ಆಯುಃ + ವೇದ. ಹೀಗೆ ೨ ಶಬ್ದಗಳಿಂದ ಯುಕ್ತವಾಗಿದ್ದು ೪ ವೇದಗಳಲ್ಲಿ ಅಥರ್ವಣವೇದದ ಉಪಾಂಗವಾಗಿ ಆಯುರ್ವೇದ ಉದ್ಧರಿಸಲ್ಪಟ್ಟಿದೆ.

ಆಯುರ್ವೇದವು ೪ ವೇದಗಳ ಸಾರಭಾಗವನ್ನು ಸಂಗ್ರಹಿಸಿ ರೂಪಗೊಂಡಿರುವುದರಿಂದ ಇದಕ್ಕೆ "ಪಂಚಮವೇದ" ಎಂತಲೂ ಕರೆದಿದ್ದಾರೆ.

ಅಥರ್ವವೇದದಲ್ಲಿ ದಾನ, ಸ್ವಸ್ತ್ಯಯನ, ಬಲಿ, ಮಂಗಲ, ಹೋಮ, ನಿಯಮ, ಪ್ರಾಯಶ್ಚಿತ್ತ, ಉಪವಾಸ, ಮಂತ್ರಗಳಿಂದ ರೋಗವನ್ನು ವಾಸಿಮಾಡುವ ಚಿಕಿತ್ಸೆಯನ್ನು ಹೇಳಿದ್ದಾರೆ. ಈ ಚಿಕಿತ್ಸೆಯನ್ನು ಆಯುರ್ವೇದದ ಹಿತಕ್ಕಾಗಿಯೇ ಹೇಳಿದ್ದುಂಟು.

ಯಾವ ವೇದದಿಂದ ಆಯುಷ್ಯವನ್ನು ಸಂಪಾದಿಸಲಿಕ್ಕೆ ಅಥವಾ ಆರೋಗ್ಯವನ್ನು ಕಾಪಾಡಿಕೊಳ್ಳತಕ್ಕಂಥ ನಿಯಮಗಳನ್ನು ಹೇಳಲ್ಪಟ್ಟಿದೆಯೋ ಅದುವೇ ಆಯುರ್ವೇದ. "ಆಯುರ್ವಿಧ್ಯತ ಇತ್ಯಾಯುರ್ವೇದಃ, ವಿಂದತಿ ಪ್ರಾಪ್ನೋತಿ "

ಆಯುರ್ವೇದ ಎಂದರೆ ಶರೀರ, ಇಂದ್ರಿಯ, ಸತ್ವ, ಆತ್ಮಗಳ ಸಂಯೋಗ. ಇದನ್ನು ಯಾವ ವೇದದಲ್ಲಿ ಹೇಳಿರುತ್ತದೆಯೋ ಅದುವೇ ಆಯುರ್ವೇದ.

"ಆಯುರ ನಿನ್ವಿದ್ಯ ತೇ ಅನೇನ ಇತ್ಸಾಯು ರ್ವೇದ್ಃ "

ಚರಕಾಚಾರ್ಯರು ಆಯುಷ್ಯದ ವ್ಯಾಖ್ಯೆಯನ್ನು

"ಆಯುರ್ವಾಚ್ಯಂ ತತ್ರಾಯುಶ್ಚೇತನಾಯ ವೃಷಿಃ " : ಎಂದರೆ ಪ್ರತಿಯೊಂದು ಕ್ಷಣಕ್ಕೆ ಶರೀರದ ಘಟಕಗಳಲ್ಲಿ ಬದಲಾವಣೆಗಳಾಗುತ್ತವೆ. ಮೊದಲಿನ ಘಟಕಗಳು ಕಾರ್ಯಮಾಡಿ ಸವೆದ ಮೇಲೆ ಆ ಸ್ಥಳಗಳಲ್ಲಿ ಹೊಸ ಘಟಕಗಳು ಬರುತ್ತವೆ. ಅವು ಶರೀರ ರೂಪವನ್ನು ತಾಳಿ ಚೇತನಉಳ್ಳವುಗಳಾಗಿರುತ್ತವೆ. ಇದಕ್ಕೆ ಚೇತನಾನುವೃತ್ತಿ ಎಂದು ಅನ್ನುವರು. ಇದೇ ಆಯುಃ ಎಂದು ಚರಕಾಚಾರ್ಯರು ಕರೆದಿದ್ದಾರೆ.

ಹಿತಾಹಿತಂ ಸುಖಂ ದುಃಖಂ ಆಯುಸ್ತಸ್ಯ ಹಿತಾ ಹಿತಮ್ |
ಮಾನಂತಚ್ಚ ಯತ್ರೋಕ್ತ ಮಾಯುವೇದಃ ಸ ಉಚ್ಯತೇ ||

ಯಾವ ವೇದದಲ್ಲಿ ಹಿತಕರ ಆಯುಷ್ಯ ಅಹಿತಕರ ಆಯುಷ್ಯ, ಸುಖಕರ ಆಯುಷ್ಯ, ದುಃಖಕರ ಆಯುಷ್ಯ, ಆಯುಷ್ಯಕ್ಕೆ ಹಿತಕರ ಸಂಗತಿಗಳು, ಅಹಿತಕರ ಸಂಗತಿಗಳು ಹೇಳಲ್ಪಡುತ್ತವೆಯೋ ಅದಕ್ಕೆ ಆಯುರ್ವೇದ ಎನ್ನುವರು.

ಈ ಪ್ರಕಾರ ನಮ್ಮ ಸುವರ್ಣಸಮಾನ ಆರೋಗ್ಯಭಾಗ್ಯ ಪಡೆಯಬೇಕಾದರೆ ಜ್ಞಾನ ಜ್ಯೋತಿಯಂತೆ ಬೆಳಗುತ್ತಿರುವ ಆಯುರ್ವೇದಸಾರವನ್ನು ಅರಿತುಕೊಂಡು ಆಚರಣೆಯಲ್ಲಿ ತಂದದ್ದಾದರೆ ಶರೀರ ರೋಗ - ರುಜಿನಗಳಿಂದ ದೂರಾಗಿ ಸದೃಢವಾಗುವುದರಲ್ಲಿ ಸಂದೇಹವೇ ಇಲ್ಲ.

* * *

## ವಿನಯ

ವಿನಯಕ್ಕೆ ಸಮನಾದದ್ದು ಈ ಪ್ರಪಂಚದಲ್ಲಿ ಮತ್ತೊಂದಿಲ್ಲ. ನಯಕ್ಕೆ ಮೂಲ ಆಧಾರವೇ ವಿನಯ. ವಿನಯವಂತ ಎಂದರೆ ಇಂದ್ರಿಯಗಳನ್ನು, ಅರಿಷಡ್ವರ್ಗಗಳನ್ನು ಗೆದ್ದಂಥವನು ಎಂದೇ ಅರ್ಥ. ಇಂಥ ವಿನಯ ಉಳ್ಳಂಥವನು ಖಂಡಿತವಾಗಿಯೂ ಜ್ಞಾನಿ, ಪರಿಜ್ಞಾನಿ, ವಿದ್ಯಾವಂತ, ನಾಗರಿಕ , ಸುಸಂಸ್ಕೃತ, ಸಭ್ಯ. ಇವೆಲ್ಲಕ್ಕಿಂತ ಹೆಚ್ಚಾಗಿ ಉತ್ತಮಮನುಷ್ಯ ಎನ್ನಲು ಅತ್ಯಂತ ಅರ್ಹ, ಯೋಗ್ಯ.

ವಿನಯದ ಅರ್ಥವ್ಯಾಪ್ತಿಯ ವೈಶಾಲ್ಯವೇ ಅಂಥದ್ದು. ಇಂಥ ಅತ್ಯ ಮೂಲ್ಯವಾದ ವಿನಯವಂತಿಕೆಯನ್ನು ಸಂಪಾದಿಸುವುದು ಅಷ್ಟು ಸುಲಭ ಸಾಧ್ಯವಲ್ಲ. ವಿನಯ ಎಂದರೆ ವಿಶೇಷವಾದ ಅರಿವು ಎಂದೂ ಅರ್ಥೈಸಬಹುದು. ಇಂಥ ಅತ್ಯಮೂಲ್ಯವಾದ ವಿನಯಗುಣವನ್ನು ಸಂಪಾದಿಸಿದಂಥ ವ್ಯಕ್ತಿಯು ತನ್ನ ಪಂಚೇಂದ್ರಿಯಗಳನ್ನು, ಅರಿಷಡ್ವರ್ಗಗಳನ್ನು ಗೆದ್ದಂತೆಯೇ. ಹೀಗಾಗಿ ಇಂಥ ವ್ಯಕ್ತಿಯನ್ನು ಪರಿಜ್ಞಾನಿ ಹಾಗೂ ಜ್ಞಾನಿ ಎಂದೇ ನಿರ್ಣಯಿಸಬಹುದು.

"ವಿದ್ಯಾದದಾತಿ ವಿನಯಮ್" ಎಂಬ ಮಾತು ಸಂಸ್ಕೃತದಲ್ಲಿ ಇಂದಿಗೂ ಚಾಲ್ತಿಯಲ್ಲಿದೆ. ವಿದ್ಯೆಯಿಂದ ದೊರೆಯುವ ಮೊದಲ ಗುಣವೇ ವಿನಯ. ಕೆಲವೊಮ್ಮೆ ಹುಟ್ಟಿನಿಂದಲೇ ಈ ವಿನಯ ಗುಣ ಬರುವುದೂ ಉಂಟು. ಆದರೆ ವಿದ್ಯಾಭ್ಯಾಸದಿಂದ ವಿನಯ ಮತ್ತಷ್ಟು ಖಚಿತವಾಗುತ್ತದೆ. ಆಗಬೇಕು ದಟ್ಟವಾಗುತ್ತದೆ, ಆಗಿಯೇ ತೀರಬೇಕು. ವಿದ್ಯಾವಂತರು ವಿನಯವಂತರಾಗಬೆಕು. ವಿನಯವಿಲ್ಲದ ವಿದ್ಯೆಯು ವಿದ್ಯೆಯೇ ಅಲ್ಲ. ವಿನಯವಂತರಲ್ಲದ ವಿದ್ಯಾವಂತರು ನಿಜವಾಗಿಯೂ ವಿದ್ಯಾವಂತರೇ ಅಲ್ಲ. ವಿನಯ ಎಂದರೆ ಶರಣಾಗತಿ ಎಂದಾಗಲೀ, ದೈನ್ಯ ಎಂದಾಗಲಿ, ದೌರ್ಬಲ್ಯವೆಂದಾಗಲಿ ಖಂಡಿತವಾಗಿಯೂ ಅರ್ಥವಲ್ಲ. ವಿನಯ ಎಂಬುದು ವಿಶೇಷಗುಣ, ಸಜ್ಜನಿಕೆಯ ಮೂಲಲಕ್ಷಣ ಒಟ್ಟಿನಲ್ಲಿ ಮನುಷ್ಯರಾಗಿ ಹುಟ್ಟಿರುವ ನಾವೆಲ್ಲರೂ ವಿನಯವಂತಿಕೆಯನ್ನು ಗಳಿಸಿ , ಉಳಿಸಿ, ಬೆಳೆಸಿಕೊಂಡರೆ ನಮ್ಮ ಬದುಕು ಸಾರ್ಥಕವಾಗುತ್ತದೆ.

ಇಂದು ನಮ್ಮ ಸಮಾಜಕ್ಕೆ, ಅದರಲ್ಲೂ ವಿಶೇಷವಾಗಿ ಯುವಜನಾಂಗಕ್ಕೆ ಅತ್ಯಗತ್ಯವಿರುವುದು ಈ ವಿನಯವಂತಿಕೆಯ ಅತ್ಯಮೂಲ್ಯ ಗುಣ. ಶಾಲಾ, ಕಾಲೇಜುಗಳಲ್ಲಿ ಅಭ್ಯಾಸ ಮಾಡುವವರೆಲ್ಲ ಎಲ್ಲಕ್ಕಿಂತ ಮೊದಲು 'ವಿನಯ'ವಂತಿಕೆಯನ್ನು ಅಭ್ಯಾಸಮಾಡಬೇಕು. ವಿನಯ ಎಂಬ ಮೂರಕ್ಷರದ ಈ ಗುಣವನ್ನು ಸಂಪಾದಿಸಿ ಬಿಟ್ಟರೆ ಬದುಕು ನಿಜಕ್ಕೂ ಅರ್ಥಪೂರ್ಣವಾಗುತ್ತದೆ. ಬಾಳು ಸಾರ್ಥಕವಾಗುತ್ತದೆ.

# ಸ್ನೇಹಜೀವಿ

ಮೈಸೂರು ಜಿಲ್ಲೆ, ಹೆಚ್. ಡಿ. ಕೋಟೆ ತಾಲ್ಲೋಕು, ಹಂಪಾಪುರದ ಹೋಬಳಿ, ಜಿನ್ನಹಳ್ಳಿ ಗ್ರಾಮದ ಶ್ರೀಯುತ ದೊಡ್ಡಆರಾಧ್ಯರು ಅರ್ಥಾತ್, ವೇ|| ಬ್ರಂ|| ಶ್ರೀ|| ಆರ್. ಕುಮಾರಾರಾಧ್ಯರು ಸಹಜ ಸ್ನೇಹಜೀವಿ ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಬಹುಮುಖ ವ್ಯಕ್ತಿತ್ವದ ಮಹಾಚೇತನ. ನಮ್ಮ ಸಮಾಜದಲ್ಲಿ ಅಂದು ಇಂತಹ ವ್ಯಕ್ತಿತ್ವ ಹೊಂದಿದ ಕೆಲವರುಗಳಿಂದ ನಮ್ಮ "ಆರಾಧ್ಯಮಹಾಸಭಾ" ಎಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು. ಅದು ಬೆಳೆದು ಇಂದು ಸಮಾಜಕ್ಕೆ ಸಹಕಾರಿಯಾಗಿರುವುದನ್ನು ಕಾಣಬಹುದು. ಇಂತಹ ಸಂಸ್ಥೆಯು ಪ್ರಪ್ರಥಮವಾಗಿ ನಮ್ಮ ಸಮಾಜದ ಒಂದು ಸ್ಥಿರಆಸ್ತಿ ಎಂದು ತಿಳಿಸಲು ನನಗೆ ಬಹಳ ಸಂತಸವಾಗುತ್ತದೆ. ಇದಕ್ಕೆ ಕಾರಣರಾದವರೆಲ್ಲರಿಗೂ ನನ್ನ ವಂದನೆಗಳು.

ಅಖಿಲ ಭಾರತೀಯ ಆರಾಧ್ಯಬ್ರಾಹ್ಮಣಮಹಾಸಭಾ, ಮೈಸೂರು ಇದನ್ನು ದಿನಾಂಕ 25-4-1920ರಲ್ಲಿ ನಮ್ಮ ಸಮಾಜ ಸ್ಥಾಪಿಸಿ ವೇ|| ಬ್ರಂ|| ಶ್ರೀ ಬಿ. ಬಸವಾರಾಧ್ಯರು ಸಿಟಿ ಮ್ಯಾಜಿಸ್ಟ್ರೇಟ್ ಮೈಸೂರು, ಪಂಡಿತ ಕೆ. ಸಿ. ನಂಜುಂಡಾರಾಧ್ಯರು, ಬೆಳ್ತೂರು ಬಿ. ರಾಮಾರಾಧ್ಯರು, ಮೈಸೂರು ಕೆ. ನಾಗಭೂಷಣಾರಾಧ್ಯರು, ನಂಜನಗೂಡು ಬಿ. ನಂಜುಂಡಾರಾಧ್ಯರು, ಫಸ್ಟ್ ಗ್ರೇಡ್ ಪ್ಲೀಡರ್ ಕಳಲೆ ಆರ್. ಶ್ರೀಕಂಠಾರಾಧ್ಯರು, ಕೊತ್ತತ್ತಿ ದೊಡ್ಡತೊಟ್ಟಿ ರಾಮಾರಾಧ್ಯರು, ಕೆಂಬಲ್ ಬಸವಾರಾಧ್ಯರು, ಮೇಲೂರು ಬಸವಾರಾಧ್ಯರು, ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು, ಕಿರುಗಾವಲು ಸಿದ್ದಮಲ್ಲಾರಾಧ್ಯರು, ಭೂವಳ್ಳಿ ಮಲ್ಲಾರಾಧ್ಯರು, ಕೆ. ಆರ್. ಪೇಟೆ ಮಲ್ಲಾರಾಧ್ಯರು ಮತ್ತು ಜಿಂತಗಳ್ಳಿ ಬಸವಾರಾಧ್ಯರು ಇವರುಗಳನ್ನೊಳಗೊಂಡ ಆಡಳಿತ ಮಂಡಳಿಯು ಪ್ರಥಮವಾಗಿ ಸ್ಥಾಪನೆಗೊಂಡಿದ್ದು, ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಬೆಳೆಯುತ್ತ ಇರಲು ಶ್ರೀ ಜೆ. ಬಿ. ಮಲ್ಲಾರಾಧ್ಯರ ಆಡಳಿತದಲ್ಲಿ "ಅಖಿಲ ಭಾರತಆರಾಧ್ಯಬ್ರಾಹ್ಮಣಮಹಾಸಭಾ" ಎಂಬುದನ್ನು



- ದಿ|| ಬಿ. ಎಸ್. ರೇಣುಕಾರಾಧ್ಯ
(ಎ. ರೇಣುಕ, ರಾಗೋಟ್ಸೈನ್)
# 1046, ಸಿ. ಬ್ಲಾಕ್,
ಮಹದೇವಪುರ, ಮೈಸೂರು.
ಮಾಜಿ ಕಾರ್ಯದರ್ಶಿ
ಆರಾಧ್ಯ ಮಹಾಸಭಾ ಮತ್ತು
ಎಕ್ಸ್ ಮಿಲಿಟರಿಮ್ಯಾನ್
2ನೆ ಪ್ರಪಂಚ ಯುದ್ಧ.

"ಆರಾಧ್ಯಮಹಾಸಭಾ" ಎಂದು ಬದಲಿಸಿದರು. ತದನಂತರ ತಳಗವಾದಿ ಶ್ರೀ ಎಸ್. ಪುಟ್ಟಸೋಮಾರಾಧ್ಯರ ಅವಧಿಯಲ್ಲಿ ತನ್ನ ಬೆಳವಣಿಗೆಯನ್ನು ತೋರ್ಪಡಿಸಿತು. ನಮ್ಮ ಸಮಾಜದ ಏಕೈಕ ತಾಣವಾಗಿ ಎಲ್ಲರ ಗಮನ ಸೆಳೆಯಿತು. ಅನಂತರ ಪ್ರಾರಂಭಗೊಂಡ ಕರ್ನಾಟಕ ರಾಜ್ಯ ಆರಾಧ್ಯಯುವಜನಸಮಿತಿ (ರಿ) ಮಂಡ್ಯ, ಈ ಸಂಸ್ಥೆಯು ಒಂದು ಚಿಕ್ಕ ನೆಲೆಯನ್ನು ಕಂಡಿತು. ಇದೂ ಸಹ ಆರಾಧ್ಯಮಹಾಸಭಾ ಮಾರ್ಗದಲ್ಲಿದೆ. ತದನಂತರ ಆರಾಧ್ಯ ವಿವಿಧೋದ್ದೇಶ ಸಂಘ (ರಿ) ಬೆಂಗಳೂರು ಸಹ ಒಂದು ನಿವೇಶನ ಮಾಡಿರುವುದು ಹೆಮ್ಮೆಯ ಸಂಗತಿಯಾಗಿದೆ. ಈ ಎಲ್ಲ ಬೆಳವಣಿಗೆಯು ಸಮಾಜದ ಅಭ್ಯುದಯವನ್ನು ತೋರಿಸುತ್ತದೆ. ಹೀಗೇಯೇ ಜಿಲ್ಲೆ, ತಾಲ್ಲೋಕುಗಳಲ್ಲಿ ಆರಾಧ್ಯಸಮುದಾಯಗಳು ಬೆಳೆದು ನಿಲ್ಲಲೆಂದು ಆಶಿಸುವೆ.

ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ಪರೋಪಕಾರಿ ಕೆಲಸಗಳಿಗೆ ಆಂತರ್ಯದ ಚೇತನವಾಗಿದ್ದರೆಂದರೆ ತಪ್ಪಾಗಲಾರದು. ಕಾರಣ ತಮ್ಮ ಜೊಂಪನಹಳ್ಳಿ ಸರ್ವೆ 16ರಲ್ಲಿ ನಮ್ಮ ಆರಾಧ್ಯಮಹಾಸಭಾಕ್ಕೆ (ವಿದ್ಯಾರ್ಥಿಗಳ ಊಟಕ್ಕಾಗಿ) ದಾನವಾಗಿ 25 ಎಕರೆ ತರಿ ಜಮೀನನ್ನು ದಿನಾಂಕ 26-5-1924ರಲ್ಲಿ ಹೆಚ್. ಡಿ. ಕೋಟೆ ಸಬ್‌ರಿಜಿಸ್ಟ್ರಾರ್ ರವರಲ್ಲಿ ಬರೆದು ರಿಜಿಸ್ಟರ್ ಮಾಡಿಸಿ ಕೊಟ್ಟಿರುತ್ತಾರೆ. ಇನ್ನು ಅನೇಕ ಸಂಸ್ಥೆಗಳಿಗೆ ದಾನಮಾಡಿರುತ್ತಾರೆ. ಅಲ್ಲದೆ ಇವರು ಇಂತಹ ದಾನಗಳಲ್ಲಿ ನಂಬಿಕೆ ಇಟ್ಟವರು. ಆದ್ದರಿಂದ ಶ್ರೀಯುತ ದೊಡ್ಡಆರಾಧ್ಯರು ನಮ್ಮ ಸಮಾಜದಲ್ಲಿ ಒಬ್ಬ ಮಹಾದಾನಿಯಾಗಿ ಎಲ್ಲರಿಗೂ ಕಾಣವಂತಹ ವ್ಯಕ್ತಿಯಾಗಿರುವುದನ್ನು ನಾನು ತಿಳಿಸಬೇಕಾಗಿಲ್ಲ. ತಮ್ಮೆಲ್ಲರಿಗೂ ತಿಳಿದ ವಿಚಾರವನ್ನು ಮತ್ತೆ ನೆನಪಿಸಿ ಸ್ನೇಹಜೀವಿ ಶ್ರೀ ಆರ್. ಕುಮಾರಾರಾಧ್ಯರ ದಾನಶ್ರೇಷ್ಠತೆಯನ್ನು ಮತ್ತು ಅವರ ಸಮಾಜದ ಕಾಳಜಿಯನ್ನು ಅಂದೇ ಅವರು ಕನಸಿನಲ್ಲಿ ಸವಿದು ಇತರರಿಗೂ ಸವಿಸುತ್ತಲಿದ್ದವರಲ್ಲಿ ಒಬ್ಬರಾಗಿದ್ದರು. ಮೈಸೂರಿನ ಆರಾಧ್ಯಧರ್ಮಸಭೆಯು ಇಂತಹವರ ವಿಚಾರಗಳನ್ನು ಪುಸ್ತಕ ರೂಪದಲ್ಲಿ ಹೊರ ತರುತ್ತಿರುವುದು ಒಂದು ಉತ್ತಮ ಕೆಲಸವೆಂದು ಅರಿತು ಇಂತಹ ಸಂಸ್ಥೆಗಳು ಬೆಳೆಯಲೆಂದು ದೇವರನ್ನು ನಾನು ಸದಾ ಪ್ರಾರ್ಥಿಸಿ, ನಮ್ಮ ಸಮಾಜವನ್ನು ಯಶಸ್ಸಿನತ್ತ ಸಾಗಿಸಲೆಂದು ಅನುದಿನವೂ ಭಗವಂತನಲ್ಲಿ ಬೇಡುತ್ತೇನೆ. ನಾನೂ ಸಹ ಆರಾಧ್ಯ ಮಹಾಸಭಾ ಮಾಜಿ ಕಾರ್ಯದರ್ಶಿಯಾಗಿದ್ದು ಎಲ್ಲ ವಿಚಾರಗಳನ್ನು ತಿಳಿದವನಾಗಿಯೂ, ಶ್ರೀಯುತ ಜಿನ್ನಹಳ್ಳಿ ಆರಾಧ್ಯರ ಸ್ನೇಹ, ಪ್ರೀತಿ, ಆತ್ಮೀಯತೆಯ ವಿಚಾರಗಳನ್ನು ನಿಮ್ಮೆಲ್ಲರಲ್ಲಿ ನಾನು ಒಂದಾಗಿ ಅವರ 121 ನೆಯ ವರ್ಷದ ಸವಿ ನೆನಪಿನಲ್ಲಿ ಭಾಗಿಯಾಗಬೇಕೆಂದು ನನ್ನ ಅಂತರ್‌ವಾಣಿ ತಿಳಿಸಿದ ಮೇಲೆ ಈ ಲೇಖನವನ್ನು ತಯಾರುಮಾಡಿ ಅವರ ಮಗ ಜಿನ್ನಹಳ್ಳಿ ನಾಗಭೂಷಣನಿಗೆ ತಲುಪಿಸಬೇಕೆಂದು ಅರಿವಾಗಿ ಈ ಕಾರ್ಯ ಮಾಡಿರುತ್ತೇನೆ. ಜಿನ್ನಹಳ್ಳಿ ಕುಮಾರಾರಾಧ್ಯರು ಹುಟ್ಟಿದ ಮನೆಗೆ, ಜನ್ಮವಿತ್ತ ತಂದೆತಾಯಿಗೆ, ನಂಬಿನೆಚ್ಚಿದ ಕುಟುಂಬಕ್ಕೆ, ಸಮಾಜಕ್ಕೆ, ತಾಯ್ನಾಡಿಗೆ ಸಾಧ್ಯವಾದ ಮಟ್ಟಿಗೆ ಪ್ರಾಮಾಣಿಕವಾಗಿ ಸತ್ಯ- ನ್ಯಾಯ - ನಿಷ್ಠಾಪೂರ್ವಕ - ಸೇವೆಸಲ್ಲಿಸಬೇಕೆಂದು ಸಂಕಲ್ಪಗೊಂಡು ತದೇಕಚಿತ್ತದಿಂದ ತಮ್ಮ ಬದುಕಿಗೊಂದು ಅರ್ಥನೀಡಿ, ಬಾಳಿನಲ್ಲೊಂದು ಸಾರ್ಥಕ ಸೇವೆ ಮಾಡಿ, ಬದುಕನ್ನು ನಂಬಿ ಅರಿತವರಾಗಿ ಬಾಳಿದರು. ಇಂದು ನಮ್ಮ ಸಮಾಜದಲ್ಲಿ

ಯುವಪೀಳಿಗೆಯಲ್ಲಿ ಈ ತೆರನಾದ ಬದುಕನ್ನು ಕಾಣುವ ಹಂಬಲ ನನ್ನಂತಹ ಹಲವರ ಹಂಬಲವಾಗಿದೆ. ಇದಕ್ಕೆ ದೇವರ ಅನುಗ್ರಹ ಇರಲಿ.

ಶ್ರೀಯುತ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ತಮ್ಮ ಸಹಪಾಠಿಗಳೊಡನೆಯೂ, ಪ್ರಾಂತೀಯ ಜನತೆಯಲ್ಲಿಯೂ, ಅಧಿಕಾರಿಗಳೊಡನೆಯೂ, ರಾಜಕೀಯ ಮುಖಂಡರೊಡನೆಯೂ, ಯಾವಾಗಲೂ, ಎಲ್ಲೆಲ್ಲೂ ತಮ್ಮೊಡನಿರುವವರೊಂದಿಗೂ ಬಹು ಕಾಲದ ಪರಿಚಯದವರಂತೆ ಬಹಳ ಪ್ರೀತಿ, ವಿಶ್ವಾಸ ಮತ್ತು ಸ್ನೇಹದಿಂದ ಕಾಣುವ ಸ್ವಭಾವವನ್ನು ಬೆಳೆಸಿಕೊಂಡವರಾಗಿದ್ದರು. ಇವರ ಸ್ನೇಹ ಉಳಿಸಿಕೊಳ್ಳಬೇಕೆಂಬುದು ಇವರೊಡನೆ ಮಾತನಾಡಿದವರಿಗೆಲ್ಲ ಅನಿಸುವಂತಾಗುತ್ತಿತ್ತು. ಚಿಕ್ಕವರು ದೊಡ್ಡವರು ಎಂದು ಪರಿಗಣಿಸದೆ ಎಲ್ಲರಲ್ಲಿಯೂ ಸ್ನೇಹಪರತೆಯನ್ನು ಕಂಡು ಮಾತನಾಡುವುದು ಇವರ ಸ್ವಭಾವವಾಗಿತ್ತು. ಆದುದರಿಂದ ಇವರ ಎಲ್ಲ ಕ್ಷೇತ್ರಗಳ ಪರಿಚಯಸ್ಥರು ಸ್ನೇಹಬೆಳೆಸುವಾಸಕ್ತಿಯುಳ್ಳವರಾಗುತ್ತಿದ್ದರು. ಆದ್ದರಿಂದ ಇವರನ್ನು ಸ್ನೇಹಜೀವಿ ಎಂದು ಎಲ್ಲರೂ ಕಾಣುತ್ತಿದ್ದರು.

ಇಂತಹ ಮನಸ್ಸಿನವರಾದುದರಿಂದ ಸರಕಾರವು ಇವರನ್ನು ಗುರುತಿಸಿ ಹಂಪಾಪುರದಲ್ಲಿ ಒಂದು ವಿಲೇಜ್ ಮುನ್‌ಸೀಫ್‌ಕೋರ್ಟ್ ಮಂಜೂರು ಮಾಡಿ ಶ್ರೀಯುತ ಜಿನ್ನಹಳ್ಳಿ ಕುಮಾರಾರಾಧ್ಯರನ್ನೇ ಮುನ್‌ಸೀಫರಾಗಿ ನೇಮಕಮಾಡಿದರು. ಇದರಿಂದ ಅಲ್ಲಿನ ಜನತೆಗು ಇವರಲ್ಲಿ ಆತ್ಮವಿಶ್ವಾಸವಿದ್ದುದರಿಂದ ಇವರು ಸತತವಾಗಿ ಹತ್ತು ವರ್ಷಗಳು ಮುನ್ಸೀಫರಾ ಸೇವೆಯನ್ನು ಮಾಡಿ ಜನತೆಯಲ್ಲಿ ಹೆಚ್ಚು ವಿಶ್ವಾಸಗಳಿಸಿದರು. ತಮ್ಮ ಕಾರ್ಯದಲ್ಲಿ ಯಶಸ್ವಿಯಾಗಿ ನಿಭಾಯಿಸಿದವರೆಂದು ಹೇಳಲು ನನಗೆ ಇನ್ನೂ ಹೆಚ್ಚಿನ ಹೆಮ್ಮೆಯಾಗುತ್ತದೆ ಇವರ ಮಾರ್ಗದರ್ಶನವು ನಮ್ಮೆಲ್ಲರಿಗೂ ದಾರಿದೀಪವಾಗಿ ನಮ್ಮ ಸಮಾಜವನ್ನು ಸದೃಢವಾ ಕಟ್ಟಲು ನೆರವಾಗಲೆಂದು ಆಶಿಸುತ್ತೇನೆ.

* * *

## ಕ್ರಿಯೆ

ಕ್ರಿಯೆಯು ಪ್ರಕೃತಿ ನಿಯಮ. ಇದನ್ನು ಬದಲಿಸಲು ಸಾಧ್ಯವಿಲ್ಲ. ಈ ವಿನಿಮಯ ಕಾರ್ಯ ಪ್ರಕೃತಿಯ ಕೊಡುಗೆ. ಜೀವಿತದಿಂದ ಪ್ರಾಣಿಗಳ ಉಸಿರಾಟದಿಂದ ಗಾಳಿಯಲ್ಲಿರುವ ಆಮ್ಲಜನಕವನ್ನು ಉಪಯೋಗಿಸಿಕೊಂಡು, ಅನುಪಯುಕ್ತ ಇಂಗಾಲಾಮ್ಲವನ್ನು ಹೊರ ಬಿಡುವ ಕ್ರಿಯೆಯು ನಿರಂತರ. ಹೀಗೆ ನಾವು ಹೊರಬಿಟ್ಟ ಇಂಗಾಲಾಮ್ಲವನ್ನು ಸಸ್ಯ ಪ್ರಪಂಚವು ನಮ್ಮಂತೆ ತಾನು ಉಪಯೋಗಿಸಿಕೊಂಡು ತನಗೆ ಬೇಡವಾದ ಆಮ್ಲಜನಕವನ್ನು ಹೊರಬಿಟ್ಟುಕೊಡುತ್ತದೆ. ಇದು ಒಂದು ಆವರ್ತನ ಕ್ರಿಯೆ. ಪ್ರಪಂಚದಲ್ಲಿ ಯಾವುದೂ ಸರ್ವತಂತ್ರ ಸ್ವತಂತ್ರವಾಗಿಲ್ಲ. ಒಂದು ಇನ್ನೊಂದನ್ನು ಹೊಂದಿಕೊಂಡಿದೆಯೆಂಬುದನ್ನು ಸೂಚಿಸುತ್ತದೆ.

# ಪರೋಪಕಾರಿ



- ಡಾ. ಎಸ್. ಡಿ. ನಾಗರಾಜ್
M.B.B.S., DEH,
ನಿವೃತ್ತ ಸಿವಿಲ್‌ಸರ್ಜನ್,
# 202, 7ನೇ ಮುಖ್ಯರಸ್ತೆ,
ವಿಜಯನಗರ 3ನೇ ಹಂತ
ಮೈಸೂರು -17
ದೂ. : 3117664

ಶ್ರೀ ಆದಿಶಂಕರಾಚಾರ್ಯರು ಮನುಷ್ಯತ್ವ, ಮುಮುಕ್ಷತ್ವ (ಮೊಹದಕ್ಷಯವೇ) ಮತ್ತು ಮಹಾಪುರುಷರ ಸಂಶ್ರಯ ಇವುಗಳು ಭಗವಂತನ ಕೃಪೆ ಇಲ್ಲದೆ ದೊರಕುವುದಿಲ್ಲ ಎಂದು ತಿಳಿಸಿದ್ದಾರೆ. ಇದು ಜಗಜ್ಜನಿತ ಎಂಬುವಂತೆ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರ ಜೀವನ ಒಂದು ನಿದರ್ಶನವಾಗಿದೆ.

ಶ್ರೀಯುತರು ಸ್ವಸ್ತಿಶ್ರೀ ವಿಜಯಾಭ್ಯುದಯ ಶ್ರೀಮನ್ನೃಪಶಾಲಿವಾಹನಶಕೆ ಪಾರ್ಥಿವಸಂವತ್ಸರದಲ್ಲಿ ಜನಿಸಿದರು. ಇವರ ತಂದೆ ತಾಯಂದಿರಾದ ಶ್ರೀ ರೇವಣಾರಾಧ್ಯ ಮತ್ತು ಶ್ರೀಮತಿ ಬಸವಾಜಮ್ಮನವರ ಹಿರಿಯ ಗಂಡುಮಗನಾಗಿ ಜನಿಸಿದರು. ಇವರಿಗೆ ಇಬ್ಬರು ಅಕ್ಕಂದಿರು ಮತ್ತು ಒಬ್ಬ ತಮ್ಮ ಇದ್ದರು. ವೈದಿಕ ಕುಟುಂಬದಲ್ಲಿ ಜನಿಸಿದ ಇವರ ವಿದ್ಯಾಭ್ಯಾಸವು ಜಿನ್ನಹಳ್ಳಿ ಗುರುಕುಲದಲ್ಲಿ ನಡೆಯಿತು. ಅಲ್ಲಿ ಕನ್ನಡ, ಸಂಸ್ಕೃತ, ವೇದ - ಉಪನಿಷತ್ತುಗಳ ಅಂಶ ಬೋಧಿಸಲಾಗಿತ್ತು.

ಆರಾಧ್ಯರು ಚಿಕ್ಕವಯಸ್ಸಿನಿಂದಲೇ ಸಾರ್ಥಕ ಜೀವನದ ಬುನಾದಿ ಹಾಕಿಕೊಂಡಿದ್ದವರು. ಅದರ ಪರಿಣಾಮವಾಗಿ ಮಾದರಿಯ ಮಗನಾಗಿ, ಜಿನ್ನಹಳ್ಳಿಯ ಉತ್ತಮಪ್ರಜೆಯಾಗಿ ಬೆಳೆದರು. ಇವರ ನಿಃಸ್ವಾರ್ಥ, ಪರೋಪಕಾರ ಜೀವನದ ಬೆಳಕು, ಸುತ್ತಮುತ್ತಲ ಗ್ರಾಮ ಹಾಗೂ ತಾಲ್ಲೂಕುಗಳಲ್ಲಿಯೂ ಹರಡಿತ್ತು. ಇವರ ವ್ಯಕ್ತಿತ್ವದ ಹಿರಿಮೆಯು ಜನರಿಗೆ ತಿಳಿದಿತ್ತು. ಇದರಿಂದಾಗಿ ಬಡ ವಿದ್ಯಾರ್ಥಿಗಳಿಗೆ ಹೆಚ್ಚು ಆಶ್ರಯ ನೀಡಿ ಅವರಿಗೆ ವಿದ್ಯೆ ಕಲಿಸಿದರು. ಊರಿನ ಮತ್ತು ಅಕ್ಕಪಕ್ಕದ ಹಳ್ಳಿಗರ ಏಳಿಗೆಗೆ ಮೇಲು- ಕೀಳೆನ್ನದೆ, ಭೇದ -ಭಾವವಿಲ್ಲದೆ ದುಡಿದರು. ಇದರಿಂದಾಗಿ ಜಿನ್ನಹಳ್ಳಿ ಹಾಗೂ ದಾಖಲೆ ಗ್ರಾಮವಾದ ಮಲಾರದ ಹುಂಡಿಯಲ್ಲಿ ಶಾಲೆಗಳನ್ನು, ಹಂಪಾಪುರದಲ್ಲಿ ಆಸ್ಪತ್ರೆ ಮತ್ತು ಪಶುವೈದ್ಯಶಾಲೆಗಳನ್ನು ತರಲು ಶ್ರಮಿಸಿದರು.

ಆರಾಧ್ಯರು ನಿಧಾನಿಗಳು. ದಾನಸ್ವಭಾವ ಹೊಂದಿದವರಾದ್ದರಿಂದ ಹಂಪಾಪುರದ ಆಸ್ಪತ್ರೆಗೆ 15

ಎಕರೆ, ಮೈಸೂರಿನ ಆರಾಧ್ಯಮಹಾಸಭೆಗೆ 25 ಎಕರೆ ಮತ್ತು ಶ್ರೀ ಕೆಂಡಗಣ್ಣಸ್ವಾಮಿಗದ್ದಿಗೆಗೆ 1ಎಕರೆ ಜಮೀನನ್ನು ದಾನಮಾಡಿ ರಿಜಿಸ್ಟರ್ ಪತ್ರ ಮಾಡಿಸಿರುತ್ತಾರೆ. *"ಸ್ವಾರ್ಥರಹಿತಪರೋಪಕಾರ"* ಇವರ ಜೀವನದ ಗುರಿಯಾಗಿತ್ತು. ಆಧ್ಯಾತ್ಮದಲ್ಲಿ ನಂಬಿಕೆ ಇಟ್ಟವರು. ಆದರೂ ಭಗವಂತ ತಿಳಿಸಿರುವಂತೆ, ನನಗೆ ಕೈಮುಗಿಯುವ ಬದಲು ನಾನು ಸೃಷ್ಟಿಸಿದ ಜೀವರಾಶಿಗಳಿಗೆ ಅಂದರೆ ಪ್ರಾಣಿ, ಪಕ್ಷಿ, ಗೋವು ಇತ್ಯಾದಿಗಳಿಗೆ ನಿಮ್ಮ ರಕ್ಷಣೆ, ಸೇವೆ ಹಾಗೂ ಸಹಕಾರಗಳನ್ನು ನೀಡಿದರೆ ಅದೇ ನನಗೆ ಸಲ್ಲುತ್ತದೆ ಎಂಬ ಅಂಶವನ್ನು ಇವರು ತಮ್ಮ ಜೀವನದಲ್ಲಿ ರೂಢಿಸಿಕೊಂಡಿದ್ದರು. ಇವರು ಹೊಂದಿದ್ದ ಉತ್ತಮ ವ್ಯಕ್ತಿತ್ವದ ಉತ್ತಮ ನಡೆ, ನುಡಿ, ಆಚಾರ - ವಿಚಾರ ಹಾಗೂ ವಿದ್ವತ್ ಗುರುತಿಸಿ ಇವರನ್ನು ಹಂಪಾಪುರದ ಹೋಬಳಿಯ ವಿಲೇಜ್ ಮುನ್ಸೀಫರನ್ನಾಗಿ ಸರಕಾರ ನೇಮಿಸಿತ್ತು. ಇವರ ಮನೋಸ್ಥೈರ್ಯ, ಅನುಭವ ಹಾಗೂ ಹಳ್ಳಿಗರ ಕಷ್ಟ ಕಾರ್ಪಣ್ಯಗಳನ್ನು ತಿಳಿದಿದ್ದ ಅಂದಿನ ಸರಕಾರ ಜರೂರಾಗಿ ಮತ್ತು ನಿಷ್ಪಕ್ಷಪಾತವಾಗಿ ನ್ಯಾಯ ವಿತರಣೆ ನಡೆಯುವುದೆಂದು ಆಶಿಸಿ ಗ್ರಾಮ ನ್ಯಾಯಾಧೀಶರನ್ನಾಗಿ ನೇಮಿಸಿತು. ಶ್ರೀಯುತ ಆರಾಧ್ಯರು ನ್ಯಾಯವಿತರಣೆಯಲ್ಲಿ ಸರಕಾರದ ಅಧಿಕಾರಿಗಳ ಆಶಯಕ್ಕೆ ಚ್ಯುತಿಬರದಂತೆ ಶೀಘ್ರನ್ಯಾಯವಿತರಣೆ ಮತ್ತು ಜರೂರು ಇತ್ಯರ್ಥಗಳನ್ನು ಸತತ ಹತ್ತು ವರ್ಷಗಳ ಕಾಲ ಮಾಡಿ, ಆ ಪ್ರದೇಶದ ಜನರ ಬಾಯಲ್ಲಿ ಜನಜನಿತರಾಗಿದ್ದರು. *"ಪರೋಪಕಾರಾರ್ಥಮಿದಂ ಶರೀರಮ್"* ಎಂಬುದೇ ಇವರ ಉಸಿರಾಗಿತ್ತು.

ಅಂದಿನ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿಸಭೆಯ ಪ್ರತಿನಿಧಿಯಾಗಿದ್ದ ಹೊಮ್ಮರಗಳ್ಳಿ ಹೆಚ್.ಪಿ. ಬಸಪ್ಪನವರು, ಹೆಚ್. ಕೆ. ತಿಮ್ಮಯ್ಯನವರು, ಮರಿಮುತ್ತೇಗೌಡರು, ಸಾಹುಕಾರ್ ಸೈಯದ್ ರಹೀಮ್‌ಸಾಬ್‌ರವರು, ಪ. ಬಸಪ್ಪನವರು, ಪ. ದೇವಣ್ಣನವರು ಸಂಗಮದ ತಮ್ಮಡಿ ಸಂಗಪ್ಪನವರು ಹಾಗೂ ಶಾನುಭೋಗ್ ಶ್ರೀಕಂಠಯ್ಯನವರು ಇತ್ಯಾದಿ ಗೆಳೆಯರಾಗಿದ್ದರು. ಆರಾಧ್ಯರು ನಡೆದು ಬಂದ ದಾರಿ ಇಂದಿನ ಯುವಪೀಳಿಗೆಗಳಿಗೆ ಆದರ್ಶಪ್ರಾಯವಾಗಿದೆ.

*"ಜಾತಸ್ಯ ಮರಣಂ ಧ್ರುವಮ್"*. ಇವರು ನಡೆದು ಬಂದ ಸಾರ್ಥಕ ಜೀವನದ ಮಾರ್ಗ ಇವರಿಗೆ ಮೋಕ್ಷವನ್ನು ಕರುಣಿಸಿರುವುದರಲ್ಲಿ ಸಂದೇಹವಿಲ್ಲ. ಸನಾತನ ಧರ್ಮದ ತಳಹದಿಯಾದ ವೇದ, ಉಪನಿಷತ್ತುಗಳ ಆಧಾರದ ಹಿಂದೂಧರ್ಮದ ಪರಿಕಲ್ಪನೆಯಲ್ಲಿ ಅಲ್ಲೊಂದು, ಇಲ್ಲೊಂದು ಎಂಬಂತೆ ಇಂತಹ ಅಭೂತಪೂರ್ವ ವ್ಯಕ್ತಿತ್ವ ರೂಪುಗೊಳ್ಳುವುದು. ಅವಿಸ್ಮರಣೀಯ. ಇವರ ಜೀವಿತ ಸದಾಕಾಲ ಜನರ ಮನಸ್ಸಿನಲ್ಲಿ ನಿಲ್ಲುವ ಮಹಾತ್ಮರ ಕಥೆಯಾಗಿ ಉಳಿದಿದೆ. ಇಂತಹ ಪ್ರಬುದ್ಧ, ನಿಃಸ್ವಾರ್ಥ ಪರೋಪಕಾರಿ, ಸಾರ್ಥಕ ಜೀವನ ನಡೆಸಿ ಸಮಾಜ ಸೇವೆಯಲ್ಲಿ ನಿರತರಾಗಿದ್ದ ಶ್ರೀ ಜಿನ್ನಹಳ್ಳಿ, ಕುಮಾರಾರಾಧ್ಯರ ವಿಷಯ ಬರೆಯಲು ನನಗೆ ಹೆಮ್ಮೆ ಎನಿಸುತ್ತದೆ.

* * *

# ಆದರ್ಶದಲ್ಲಿ ಅಲೆಯುವಮನ

ಪ್ರಿಯಮಿತ್ರ ಶ್ರೀ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ನನ್ನ ಸಹಪಾಠಿಗಳು. ಸುಮಾರು ಐವತ್ತುವರ್ಷದ ನಮ್ಮ ಸ್ನೇಹ ಇಂದಿಗೂ ಪ್ರವರ್ಧಮಾನಗೊಂಡಿದೆ. ಶ್ರೀಯುತರು ಪದವಿ ತರಗತಿಗಳಲ್ಲಿ ಭಾರತೀಯ ಪುರಾತತ್ತ್ವಶಾಸ್ತ್ರ, ತತ್ತ್ವಶಾಸ್ತ್ರ ಮತ್ತು ಸಮಾಜ ಶಾಸ್ತ್ರಗಳನ್ನು ಅಭ್ಯಾಸ ಮಾಡಿದ್ದಾರೆ. ಅದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬಂದಿದ್ದಾರೆ. ವೈಯಕ್ತಿಕ ಜೀವನದಲ್ಲಿ ಪ್ರಾಮಾಣಿಕತೆ, ನಿಷ್ಠೆಗಳಿಗೆ ಹೆಸರಾಗಿದ್ದಾರೆ. ತಮ್ಮ ಜೀವನವನ್ನು ಗೃಹಕೃತ್ಯಕ್ಕೆ ಸೀಮಿತಗೊಳಿಸದೆ ಸಮಾಜ ಸೇವೆಯಲ್ಲಿ , ಸಮಾಜದ ಸಂಘಟನೆಯಲ್ಲಿತೊಡಗಿಸಿದ್ದಾರೆ. ಆ ನಿಟ್ಟಿನಲ್ಲಿ ಸಂಘಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಮುನಿಸಂದೇಶ ಮತ್ತು ಆರಾಧ್ಯಸಂಪದ ಎನ್ನುವ ಆಧ್ಯಾತ್ಮಿಕ ಮಾಸ ಪತ್ರಿಕೆಗಳನ್ನು ನಡೆಸಿ ಜನ ಜಾಗೃತಿ ಉಂಟುಮಾಡಿದ್ದಾರೆ. ವೃತ್ತಿ ಜೀವನದಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಪ್ರಶಸ್ತಿಯನ್ನು ಪಡೆದು ಕೀರ್ತಿ ಭಾಜನರಾಗಿದ್ದಾರೆ.

ಮೈಸೂರಿನ ಆರಾಧ್ಯ ಸಭಾಭವನದಲ್ಲಿ 13-7-1997 ರಂದು ಏರ್ಪಡಿಸಿದ್ದ ಸಮಾರಂಭದಲ್ಲಿ ಜನಾಂಗದ ಆಗುಹೋಗುಗಳನ್ನು ಕುರಿತಂತೆ ಮೂರು ವಿಚಾರಗೋಷ್ಠಿಗಳನ್ನು ಸಂಯೋಜಿಸಿದ್ದರು. ಅಲ್ಲಿ ಮಂಡಿತವಾದ ಜಗದ್ಗುರು ಪಂಚಾಚಾರ್ಯರ ಸಂಕ್ಷಿಪ್ತ ವಿವರಣೆ, ಆರಾಧ್ಯಪರಂಪರೆ, ಆರಾಧ್ಯ ಜನಾಂಗದ ಸಂಸ್ಕೃತಿ ಮತ್ತುಜೀವನ, ಆರಾಧ್ಯ ಶೈವದ ವೈದಿಕತೆ ಅಂದು-ಇಂದು ಹೀಗೆ ಹತ್ತು ಪ್ರಬಂಧಗಳನ್ನು ಒಳಗೊಂಡ 'ಆರಾಧ್ಯ ಪರಂಪರೆ' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ.

ಆರಾಧ್ಯ ಧರ್ಮಸಭಾ ಟ್ರಸ್ಟ್ (ರಿ.) ಮೈಸೂರು ಆಶ್ರಯದಲ್ಲಿ ಪ್ರಥಮ ಆರಾಧ್ಯ ಮಹಾಸಮ್ಮೇಳನವನ್ನು 8-4-2001ರಂದು ಮೈಸೂರು ಜಗನ್ಮೋಹನ ಅರಮನೆಯಲ್ಲಿ ಏರ್ಪಡಿಸಿದ್ದರು. ಅಲ್ಲಿ ಆರಾಧ್ಯ ಡೈರೆಕ್ಟರಿ-2001 ಬಿಡುಗಡೆಗೊಂಡಿತು.



**ಜಿ. ಜಿ. ಮಂಜುನಾಥನ್**

'ಗಂಧಕುಟಿ' 143/ಡಿ, 10ನೆಯ ಮುಖ್ಯರಸ್ತೆ, 4ನೆಯ ಅಡ್ಡರಸ್ತೆ,
ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಕುವೆಂಪುನಗರ,
ಮೈಸೂರು - 570 009
ದೂರವಾಣಿ : 2544232

ಸ್ನೇಹಕ್ಕಾರಣವಾಗಿ ಆ ಸಮಾರಂಭದಲ್ಲಿ ಪಾಲ್ಗೊಳ್ಳುವ ಅವಕಾಶ ನನ್ನದಾಗಿತ್ತು. ನನ್ನ ಪ್ರತ್ಯಕ್ಷಾನುಭವದಲ್ಲಿ ಆರಾಧ್ಯಜನಾಂಗದ ಆ ಸಭೆ ನ ಭೂತೋ ನ ಭವಿಷ್ಯತಿ ಎನ್ನುವಂತೆ ನಡೆಯಿತು. ಆರಾಧ್ಯಜನಾಂಗದ ಹಿರಿಮೆಗರಿಮೆಗಳನ್ನು ಕುರಿತು ವಿಚಾರ ಮಾಡುವ ಸಂದರ್ಭದಲ್ಲಿ ವೀರಸಿಂಹಾಸನ ಬಾಳೆಹೊನ್ನೂರು, ಸದ್ಧರ್ಮ ಸಿಂಹಾಸನ ಉಜ್ಜಯಿನಿ, ವೈರಾಗ್ಯ ಸಿಂಹಾಸನ - ಹಿಮವತ್ಕೇದಾರ, ಸೂರ್ಯಸಿಂಹಾಸನ ಶ್ರೀ ಶೈಲ ಮತ್ತು ಜ್ಞಾನಸಿಂಹಾಸನ -ಕಾಶಿ ಹೀಗೆ ಪಂಚಾಚಾರ್ಯರು ಸ್ಥಾಪಿಸಿದ ಪೀಠ ಪರಂಪರೆಯನ್ನು ಗೌರವಾದರಗಳೊಡನೆ ಸ್ಮರಿಸಲಾಯಿತು.

ಕಾಮಿಕಾದಿ ವಾತುಲಾಂತ 28 ಶಿವಾಗಮಗಳು, ಶಿವಸಂಬಂಧೀ ಅಖಿಲಪುರಾಣಗಳು ಮತ್ತು ವೇದ ಭಾಗವನ್ನು ಅಳವಡಿಸಿಕೊಂಡು ವೈದಿಕಮಾರ್ಗಕ್ಕೆ ವಿರೋಧವಾಗದ ಹಾಗೆ ಮತ್ತು ವೀರಶೈವ ವಿಶಿಷ್ಟವಾದ ಆಚಾರಗಳನ್ನು ಪ್ರತಿಪಾದಿಸಲೋಸುಗ ರಚಿತವಾದ, ವೀರಶೈವ ಸರ್ವಸ್ವಯೆಂದು ಪ್ರಸಿದ್ಧವಾದ "ಸಿದ್ಧಾಂತ ಶಿಖಾಮಣಿ "ಯನ್ನು ಆಧರಿಸಿದ ಆರಾಧ್ಯ ಜನಾಂಗದ ಸಂಸ್ಕೃತಿ ಸಮನ್ವಯ ಮಾರ್ಗದ್ದಾಗಿರುವುದನ್ನು ಗುರುತಿಸಲಾಯಿತು.

ಚಾರಿತ್ರಿಕವಾಗಿ ರಾಜಪೂಜಿತರಾದ ಆರಾಧ್ಯಪರಂಪರೆಯ ಮಹಾಪುರುಷರು ಅಂದರೆ ಹೊಯ್ಸಳರ ಆಸ್ಥಾನದಲ್ಲಿದ್ದ ಕೆರೆಯ ಪದ್ಮರಸ, ಕುಮಾರ ಪದ್ಮರಸ, ವಿಜಯನಗರ ಆಸ್ಥಾನದ್ಲಲಿದ್ದ ಜಕ್ಕಣಾರ್ಯ, ಮೈಸೂರು ಒಡೆಯರ ಆಸ್ಥಾನದಲ್ಲಿದ್ದ ಷಡಕ್ಷರಿದೇವ, ಉಮ್ಮತ್ತೂರು ಆಸ್ಥಾನದಲ್ಲಿದ್ದ ನೀಲಕಂಠ ಶಿವಾಚಾರ್ಯ, ಕಳಲೆಯ ಅರಸುಗಳ ಆಸ್ಥಾನದಲ್ಲಿದ್ದ ಹುಲ್ಲಹಳ್ಳಿ ಮಲ್ಲಾರಾಧ್ಯರುಗಳ ಸಾಧನೆ ಸಿದ್ಧಿಗಳನ್ನು ಅರಿತ ಸಭೆ ಪುಳಕಿತಗೊಂಡಿತು.

ಆರಾಧ್ಯ ಜನಾಂಗದವರು ರಚಿಸಿದ ಸಾಹಿತ್ಯ ಪ್ರಪಂಚ ವಿಸ್ತಾರವೂ ಉದ್ಬೋಧಕವೂ ಆಗಿರುವ ಸಂಗತಿಯನ್ನು ಶ್ರೀಪತಿ ಪಂಡಿತರ ಶ್ರೀಕರ ಭಾಷ್ಯ , ಶ್ರೀಕಂಠ ಶಿವಾಚಾರ್ಯರ ಶ್ರೀ ಕಂಠಭಾಷ್ಯ, ಕೆರೆಯಪದ್ಮರಸರ ದೀಕ್ಷಾಬೋಧೆ, ಕುಮಾರ ಪದ್ಮರಸರ ಸಾನಂದ ಚರಿತ್ರೆಗಳಲ್ಲದೆ ಆರಾಧ್ಯ ಚಾರಿತ್ರ, ಚತುರಾಚಾರ್ಯ ಚಾರಿತ್ರ, ಏಕೋರಾಮೇಶ್ವರ ಪುರಾಣ, ಚತುರಾಚಾರ್ಯ ಪ್ರಬಂಧಗಳ ಮೂಲಕ ವಿಶದಪಡಿಸಲಾಯಿತು. ·

ಎಲ್ಲಕ್ಕಿಂತ ಮಿಗಿಲಾಗಿ ಸಿದ್ಧಾಂತ ಶಿಖಾಮಣಿಗೆ ರಚಿತವಾಗಿರುವ ಪ್ರಾಚೀನ ಟೀಕುಗಳಾದ ಗೊರಕೋಡು ಉಜ್ಜನೀಶನ ಸಿದ್ಧಾಂತ ಶಿಖಾಮಣಿ ವ್ಯಾಖ್ಯಾನ, ಅಜ್ಞಾತವಿರಚಿತ ಸಿದ್ಧಾಂತ ಶಿಖಾಮಣಿ ವ್ಯಾಖ್ಯೆ, ಮರಿತೋಂಟದಾರ್ಯರು ಸಿದ್ಧಾಂತಶಿಖಾಮಣಿಗೆ ಬರೆದಿರುವ ತತ್ತ್ವಪ್ರದೀಪಿಕಾ ಸಂಸ್ಕೃತ ಟೀಕು ಮತ್ತು ಅವರು ಕನ್ನಡದಲ್ಲಿ ಬರೆದಿರುವ ಸಿದ್ಧಾಂತ ಶಿಖಾಮಣಿಯ ಸುಪ್ರಬೋಧಿನೀ ಟೀಕುಗಳ ಪರಿಚಯವನ್ನು ಸಭಿಕರು ಪಡೆದು ಹರ್ಷಿಸಿದರು.

ಸಿದ್ಧಾಂತ ಶಿಖಾಮಣಿಗೆ ಎಸ್. ಆರ್. ಕರಿಬಸವಶಾಸ್ತ್ರಿ, ಪಂಡಿತ ಕಾಶೀನಾಥಶಾಸ್ತ್ರಿ, ಶ್ರೀ 1008ಕಾಶೀಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಬಿಜಾಪುರದ ಶ್ರೀ ಸಿದ್ಧೇಶ್ವರ ಸ್ವಾಮಿಗಳು ರಚಿಸಿರುವ ಹೊಸಗನ್ನಡ ಗ್ರಂಥಗಳ ಪರಿಚಯವನ್ನು, ಅಭ್ಯಾಸವನ್ನು ಮಾಡಬೇಕಾದ ಅವಶ್ಯಕತೆಯನ್ನು ತಿಳಿಹೇಳಲಾಯಿತು.

ಆರಾಧ್ಯ ಜನಾಂಗದ ಜನಸಂಖ್ಯೆ 1881ರ ಜನಗಣತಿಯ ಪ್ರಕಾರ 5912ಇದ್ದು ಈಗ ಪ್ರಕಟವಾಗುತ್ತಿರುವ ಆರಾಧ್ಯ ಡೈರೆಕ್ಟರಿ -2001ರ ಪ್ರಕಾರ 7871 ಇದೆ. ಇದನ್ನು ಮುಂದು ಮಾಡಿಕೊಂಡು ನಾವು ಅಲ್ಪಸಂಖ್ಯಾತರು, ನಮ್ಮ ಸಮಾಜ ಅಳಿವಿನ ಅಂಚಿನಲ್ಲಿದೆ, ನಮಗೆ ಮೀಸಲಾತಿ ಬೇಕು ಎನ್ನುವ ವಿಷಾದಯೋಗವನ್ನು ಕಳೆದುಕೊಂಡು ತಮ್ಮ ಸ್ವಸಾಮರ್ಥ್ಯದಿಂದ ಏಳಿಗೆ ಹೊಂದಬೇಕೆನ್ನುವ ಅಭಿಪ್ರಾಯ ಆ ಸಮಾರಂಭದಲ್ಲಿ ಮೂಡಿಬಂದಿತು. ಕರ್ನಾಟಕದ 5 ಕೋಟಿ ಜನರ ಗೌರವಾದರಗಳಿಗೆ ಪಾತ್ರವಾಗಿರುವ ಈ ಜನಾಂಗ ಒಗ್ಗಟ್ಟಾಗಬೇಕು. ಒಂದಾಗುವುದು ನಮ್ಮ ಜನಾಂಗದ ಹಿತರಕ್ಷಣೆಗಾಗಿ ವಿನಃ, ಇತರರ ಮೇಲಿನ ಅಸಹನೆಗಾಗಿ ಅಲ್ಲ. ಸಂಕುಚಿತಭಾವವನ್ನು ತೊರೆದು ಸಮಾಜದ ಮುಖ್ಯವಾಹಿನಿಯಲ್ಲಿ ಒಂದಾಗಬೇಕು. ಆ ಮೂಲಕ ಆರಾಧ್ಯಜನಾಂಗ ಪುನರುಜ್ಜೀವನಗೊಳ್ಳಬೇಕು, ಅದಕ್ಕಾಗಿ ಆರಾಧ್ಯ ಧರ್ಮ ಮಹಾಸಭಾದ ಪ್ರಥಮ ವಾರ್ಷಿಕೋತ್ಸವ ಸ್ಪೂರ್ತಿ ನೀಡಲಿ ಎಂದು ಹಾರೈಸಲಾಯಿತು.

- 2-

ಮೈಸೂರು ಜಿಲ್ಲೆ ತಿರುಮಕೂಡಲು ನರಸೀಪುರ ತಾಲ್ಲೂಕಿನ ಸೋಸಲೆ ಪ್ರಾಚೀನಕಾಲದಿಂದಲೂ ಸಾಂಸ್ಕೃತಿಕ ಹಿರಿಮೆಗೆ ಪಾತ್ರವಾಗಿದೆ. ಈ ಊರಿನಲ್ಲಿ ಕ್ರಿ. ಶ. 1623ರ ಸುಮಾರಿನಲ್ಲಿದ್ದ ಸೋಸಲೆ ರೇವಣಾಚಾರ್ಯರು ಕವಿಯಾಗಿ, ವ್ಯಾಖ್ಯಾನಕಾರರಾಗಿ ಪ್ರಸಿದ್ಧರು. ಮುದಿಗೆರೆಯ ರಘುವಪ್ಪನಾಯಕ ಮತ್ತು ಚಿಕ್ಕನಾಯಕನಹಳ್ಳಿಯ ಮುದಿಯಪ್ಪಗೌಡಸಿಂದ ಪೂಜಿತರಾಗಿದ್ದರು. ವೀರಶೈವವೇದಾಂತ ಮತ್ತು ಆಗಮಗಳಲ್ಲಿ ಪ್ರಕಾಂಡಪಂಡಿತರಾಗಿದ್ದ ಸೋಸಲೆ ರೇವಣಾಚಾರ್ಯರು ಶಾರೀರಿಕ ಪ್ರಕಾಶಿಕೆ, ಪರಮಾತ್ಮಪ್ರಕಾಶಿಕೆ, ನಿಜದೀಪ್ತಿ ಪ್ರಕಾಶಿಕೆ, ಪರಮುಕ್ತಿ ಪ್ರದೀಪಿಕೆ ಎನ್ನುವ ಕೃತಿಗಳನ್ನು ರಚಿಸಿದ್ದರು. ಶಿವಾಧಿಕ್ಯಚಿಂತಾಮಣಿ ಟೀಕು ಮತ್ತು ಸಿದ್ಧಾಂತ ಶಿಖಾಮಣಿಗೆ ಸುಬೋಧಿನೀ ಟೀಕನ್ನು ರಚಿಸಿದ್ದಾರೆ. ಹೀಗೆ ವೀರಶೈವ ಪರಂಪರೆಯಿಂದ ಉದ್ದೀಪ್ತವಾದ ಸೋಸಲೆಯಿಂದ ಆರಾಧ್ಯಮನೆತನವೊಂದು ಹೆಗ್ಗಡದೇವನಕೋಟೆ ತಾಲ್ಲೂಕು ಜಿನ್ನಹಳ್ಳಿಗೆ ಬಂದು ನೆಲೆಸಿತು. ಅಲ್ಲಿನ ದೇವತಾಕಾರ್ಯಗಳನ್ನು ನಡೆಸಿಕೊಂಡು ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿತು. ಕೆರೆಯನ್ನು ಕಟ್ಟಿಸು, ಬಾವಿಯನ್ನು ತೆಗೆಸು, ದೇವಾಲಯವನ್ನು ಮಾಡು, ಕಷ್ಟದಲ್ಲಿರುವವರ ಕೈಹಿಡಿ ಎನ್ನುವ ಮಾತಿಗನುಗುಣವಾಗಿ ಈ ಮನೆತನದವರು ಜೀವನ ನಿರ್ವಹಣೆ ಮಾಡಿದರು. ಅಂತಹ ಪರಂಪರೆಯುಳ್ಳ ಮನೆತನದ ಶಿವಸ್ವರೂಪಿ ರೇವಣಾರಾಧ್ಯರು ಮತ್ತು ಬಸವಾಜಮ್ಮನವರಿಗೆ 21-7-1885ರಂದು ಶ್ರೀ ಆರ್. ಕುಮಾರಾರಾಧ್ಯರು ಜನಿಸಿದರು. ಕೈಯಿ, ಬಾಯಿ, ಕಚ್ಚೆ ಶುದ್ಧವಾಗಿರುವವನನ್ನು ಬ್ರಹ್ಮನೂ ಅಲುಗಾಡಿಸಲಾರ ಎನ್ನುವ ಮಾತುಂಟು. ಆ ಮಾತಿಗೆ ಅನುಗುಣವಾಗಿ ಕುಮಾರಾರಾಧ್ಯರ ಜೀವನ ರೂಪುಗೊಂಡಿತು. ದೊಡ್ಡಬುದ್ಧಿಯವರು ಎಂದು ಜನಮನದಲ್ಲಿ ನೆಲೆಗೊಂಡರು.

ಕುಮಾರಾರಾಧ್ಯರ ತಂದೆ ರೇವಣಾರಾಧ್ಯರು ಹಂಪಾಪುರ ಮಲ್ಲಾರದ ಹುಂಡಿ ಎಲ್ಲೆಕಟ್ಟೆನಲ್ಲಿ ಮಹದೇಶ್ವರನ ಗುಡಿಯನ್ನು ನಿರ್ಮಿಸಿದರು. ನಿತ್ಯ ಪೂಜೆ, ಜಾತ್ರೆ, ಆರಾಧನೆ,

ಕೊಂಡ, ಬ್ಯಾಯಿಬೀಗ ಮುಂತಾದ ಏರ್ಪಾಟುಗಳು ಅಲ್ಲಿ ನಡೆದುಕೊಂಡು ಬರುತ್ತಿವೆ. ಕೆಂಡಗಣ್ಣಸ್ವಾಮಿ ಗದ್ದಿಗೆಯ ಪೂಜಾಕೈಂಕರ್ಯಗಳಿಗಾಗಿ ಗದ್ದೆಯನ್ನು ದಾನವಾಗಿ ಬಿಟ್ಟಿದ್ದಾರೆ. ಇಂದಿಗೂ ಊರಿನ ಮಾರಿಹಬ್ಬ ಮುಂತಾದ ಧಾರ್ಮಿಕ ಕಾರ್ಯಗಳು ಈ ಮನೆತನದವರ ಮಾರ್ಗದರ್ಶನದಲ್ಲಿ ನಡೆದು ಬರುತ್ತಿವೆ.

ನಾಯಕತ್ವದ ಎಲ್ಲ ಲಕ್ಷಣಗಳೂ ಇದ್ದ ಕುಮಾರಾರಾಧ್ಯರು ಒಳ್ಳೆಯ ಸಂಘಟಕರು. ದಿಟ್ಟ ಎದೆಯವರು. ಮೈಸೂರಿನ ಮಹಾರಾಜರು, ಮಂತ್ರಿಗಳು, ಅಧಿಕಾರವರ್ಗದವರು ಹೀಗೆ ಎಲ್ಲರೊಡನೆಯೂ ವ್ಯವಹರಿಸಬಲ್ಲವರಾಗಿದ್ದರು. ದಾನಶೀಲರಾದ ಶ್ರೀಯುತರು ತಮ್ಮ ಕೊಡುಗೈತನ ಕಾರಣವಾಗಿ ಊರಿನ ಧಾರ್ಮಿಕ ಕಾರ್ಯಗಳಿಗೆ ಸಾಮಾಜಿಕ ಕಾರ್ಯಗಳಿಗೆ ಅನೇಕ ದಾನಧರ್ಮಗಳನ್ನು ಮಾಡಿದ್ದಾರೆ. ಹೆಗ್ಗಡದೇವನಕೋಟೆಯ ಗ್ರಾಮಾಂತರ ಪ್ರದೇಶದ ಜನತೆ ಇದರ ಪ್ರಯೋಜನ ಪಡೆದಿದ್ದಾರೆ.

ಮೂರು ವಿಧವಾದ ದಾನಗಳು ಎಂದರೆ - ಶಿವಲಿಂಗ, ಶ್ರೀಗುರು ಮತ್ತು ಜಂಗಮರಲ್ಲಿ ಭಕ್ತನು ಮಾಡುವ ದೇಹದಾನದಿಂದ ಸತ್ವಸಿದ್ಧಿಯಾಗುತ್ತದೆ. ಅರ್ಥದಾನದಿಂದ ಆನಂದ ಸಿದ್ಧಿಯಾಗುತ್ತದೆ. ಪ್ರಾಣದಾನದಿಂದ ಜ್ಞಾನಸಿದ್ಧಿಯಾಗುತ್ತದೆಯೆಂದು ಸಿದ್ಧಾಂತಶಿಖಾಮಣಿ ಪ್ರತಿಪಾದಿಸಿದೆ. ಈ ಮೂರು ವಿಧವಾದ ದಾನಗಳ ಚೌಕಟ್ಟಿನಲ್ಲಿ ಆರ್. ಕುಮಾರಾರಾಧ್ಯರು ನಡೆಸಿಕೊಂಡು ಬಂದ ದಾನಗಳು ನಿಲ್ಲುತ್ತವೆ.

ದಾನ ಕ್ರಿಯೆಯಲ್ಲಿ ಸೋಪಾಧಿಕ , ನಿರುಪಾಧಿಕ ಮತ್ತು ಸಹಜವೆನ್ನುವ ಮೂರು ಬಗೆಯ ದಾನಗಳಿವೆ. ಫಲಾಪೇಕ್ಷೆಯಿಂದ ಕೂಡಿದ ಸೋಪಾಧಿಕದಾನವನ್ನು ಮೋಕ್ಷಾರ್ಥಿಗಳು ತುಚ್ಛೀಕರಿಸಿದ್ದಾರೆ. ತುಚ್ಛಫಲೇಚ್ಛೆಯಿಲ್ಲದ, ಈಶ್ವರಾರ್ಪಣಬುದ್ಧಿಯಿಂದ ಮಾಡಿದದಾನ ನಿರುಪಾಧಿಕದಾನ, ಶಿವಸ್ವರೂಪವನ್ನು ದಾನಮಾಡುವವನು, ದಾನವನ್ನು ಸ್ವೀಕರಿಸುವವನು ಮತ್ತು ದಾನ ಮಾಡುವ ಪದಾರ್ಥಗಳಲ್ಲಿ ಕಲ್ಪಿಸಬೇಕು. ತನಗೆ ಅಕರ್ತೃತ್ವವನ್ನು ಎಂದರೆ ನಾನು ಮಾಡುತ್ತೇನೆ ಎನ್ನುವ ಭಾವನೆಯನ್ನು ನಿವಾರಿಸಬೇಕು. ಈ ಬಗೆಯದಾನ ಸಹಜದಾನ. ದಾನತ್ರಯಗಳಲ್ಲಿ ಶ್ರೇಷ್ಠವಾದದ್ದು. ಕುಮಾರಾರಾಧ್ಯರು ನಡೆಸಿದ ದಾನ ಸಹಜದಾನ. ಅದರ ಫಲ ಇಂದಿಗೂ ಕಂಡುಬರುತ್ತಿದೆ.

ಕುಮಾರಾರಾಧ್ಯರು ಜಿನ್ನಹಳ್ಳಿಯ ನಾಯಕಜನಾಂಗದ ಶ್ರೀ ರಾಮಮಂದಿರಕ್ಕೆ ಬೆಂಬಲವಾಗಿ ನಿಂತವರು. ಅಲ್ಲಿ ಇಂದಿಗೂ ನಿತ್ಯಪೂಜೆ, ಶನಿವಾರದ ಭಜನೆ, ರಾಮಪಟ್ಟಾಭಿಷೇಕ ಅದರ ಅಂಗವಾಗಿ ಅನ್ನದಾನಗಳು ನಡೆದುಕೊಂಡು ಬಂದಿವೆ. ಇವರ ಏರ್ಪಾಟಿನಿಂದ ಹಂಪಾಪುರದ ಬಸವೇಶ್ವರ ಮತ್ತು ಆಂಜನೇಯ ದೇವಾಲಯಗಳು ಒಂದೇ ಛಾವಣಿಯ ಅಡಿಯಲ್ಲಿದ್ದು ಅಲ್ಲಿ ವೀರಶೈವ ಮತ್ತು ವೈಷ್ಣವಪದ್ಧತಿಯ ಪೂಜೆಗಳು ನಡೆಯುತ್ತಿವೆ.

ಮೈಸೂರು ರಾಜ್ಯವನ್ನು ರಾಮರಾಜ್ಯವನ್ನಾಗಿ ಮಾಡಿದ ಶ್ರೀಮಾನ್ ನಾಲ್ವಡಿಕೃಷ್ಣರಾಜ ಒಡೆಯರು 1927ರಲ್ಲಿ ಕೆಂಡಗಣ್ಣಸ್ವಾಮಿ ಗದ್ದಿಗೆಗೆ ಸೇವೆಗಾಗಿ ಬಂದಿದ್ದಾಗ ಕುಮಾರಾರಾಧ್ಯರು ಅವರಲ್ಲಿ ಬಿನ್ನವಿಸಿಕೊಂಡು ಮೈಸೂರು ಮಾನಂದವಾಡಿ ರಸ್ತೆಯಿಂದ ಮೇಟುಕಲ್ಲುಗುಪ್ಪ

ಉತ್ತರದಲ್ಲಿ ಗದ್ದಿಗೆಗೆ ರಸ್ತೆ ಮಾಡಿಸಿದ್ದಾರೆ. ಶ್ರೀಮನ್ ನಾಲ್ವಡಿ ಕೃಷ್ಣರಾಜಒಡೆಯರು 1928ರಲ್ಲಿ ನಂಜನಗೂಡು ತಾಲ್ಲೂಕಿನ ಸಂಗಮಕ್ಷೇತ್ರಕ್ಕೆ ಸೇವೆಗಾಗಿ ಬಂದಾಗ ಆರಾಧ್ಯರು ಅವರಲ್ಲಿ ಬಿನ್ನವಿಸಿಕೊಂಡು ಹುಲ್ಲಹಳ್ಳಿಯಿಂದ ಮಾದನಹಳ್ಳಿವರೆಗೆ ರಸ್ತೆ ಮಾಡಿಸಿದ್ದಾರೆ. ಕೊಂಗಹಳ್ಳಿ ಗ್ರಾಮದ ಬಸವೇಶ್ವರದೇವಸ್ಥಾನದ ಜೀರ್ಣೋದ್ಧಾರಕಾರ್ಯದಲ್ಲಿ ಕೈ ಜೋಡಿಸಿದ್ದಾರೆ.

ಜಿನ್ನಹಳ್ಳಿ ಗುರುಮನೆ ಪಾರಂಪರಿಕವಾಗಿ ವಿದ್ಯಾಪಕ್ಷಪಾತಿಯಾಗಿದ್ದು ಹಲವಾರು ವಿದ್ಯಾರ್ಥಿಗಳನ್ನು ಮನೆಯಲ್ಲಿ ಇಟ್ಟುಕೊಂಡು ವಿದ್ಯಾಭ್ಯಾಸ ನೀಡುತ್ತಿತ್ತು. ಕುಮಾರಾರಾಧ್ಯರು ಈ ಪರಂಪರೆಯನ್ನು ಮುಂದುವರೆಸಿದರು. ಅವರ ಪತ್ನಿ ಪಾರ್ವತಮ್ಮನವರು ಆ ಮಕ್ಕಳನ್ನು ತಮ್ಮ ಮಕ್ಕಳಂತೆ ಕಂಡು ಪಾಲಿಸಿ ಪೋಷಿಸುತ್ತಿದ್ದರು. ಮೈಸೂರಿನ ವಿದ್ಯಾರಣ್ಯಪುರಂನಲ್ಲಿರುವ ಆರಾಧ್ಯ ಬ್ರಾಹ್ಮಣ ವಿದ್ಯಾರ್ಥಿ ನಿಲಯದಲ್ಲಿ ಭೋಜನವ್ಯವಸ್ಥೆಗಾಗಿ 25ಎಕರೆ ಭೂಮಿಯನ್ನು ದಾನ ಮಾಡಿದ್ದಾರೆ. ಜೈನಬ್ರಾಹ್ಮಣ ಸಂಘದ ವಿದ್ಯಾರ್ಥಿನಿಲಯ ಮತ್ತು ಮೂಗೂರು ಕರ್ನಾಟಕಬ್ರಾಹ್ಮಣ ಸಂಘದ ಶಾರದಾನಿಕೇತನ ವಿದ್ಯಾರ್ಥಿನಿಲಯಗಳಿಗೂ ಭೂಮಿಯನ್ನು ದಾನ ಮಾಡಿದ್ದು ಆರಾಧ್ಯರು ಜಾತಿ ಮತದ ಎಲ್ಲೆಕಟ್ಟನ್ನು ಮೀರಿದ್ದರು ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಹಂಪಾಪುರದಲ್ಲಿ 1928ರಲ್ಲಿ ಪ್ರಾರಂಭವಾದ ಆಸ್ಪತ್ರೆಗೆ ಬರುವ ಬಡರೋಗಿಗಳ ಉಪಚಾರಕ್ಕಾಗಿ, ಹಾಲು ಹಣ್ಣು ಹಂಚುವ ಸಲುವಾಗಿ ಆರಾಧ್ಯರು 15 ಎಕರೆ ಭೂಮಿಯನ್ನು ದಾನಮಾಡಿದ್ದಾರೆ. ಹಂಪಾಪುರದ ಸಂತೆ, ಪೋಲೀಸ್ ಠಾಣೆ, ಪ್ರವಾಸಿ ಬಂಗಲೆ, ಪಶು ವೈದ್ಯಶಾಲೆಗಳ ಏರ್ಪಾಟಿನಲ್ಲಿ ಇವರು ಶ್ರಮವಹಿಸಿದ್ದಾರೆ. ಬಡತನದ ಅರಿವಿದ್ದ ಶ್ರೀಯುತರು ಆಗಿನ ಕಾಲಕ್ಕೇನೆ ಸಾಮೂಹಿಕವಿವಾಹವನ್ನು ನಡೆಸಿದುದು ಇವರ ದೂರದೃಷ್ಟಿಯ ದ್ಯೋತಕವಾಗಿದೆ. ಈ ಬಗೆಯ ವಿವಾಹಗಳು ಹೆಚ್ಚು ಹೆಚ್ಚು ನಡೆಯಬೇಕಾಗಿರುವುದು ಇಂದಿನ ಅವಶ್ಯಕತೆಯೂ ಹೌದು.

*"ದ್ವೇ ಯಾಚಿತಾಯಾಚಿತಯೋರ್ಯಥಾಸಂಖ್ಯಂ ಮೃತಾಮೃತೇ"*ಎನ್ನುವ ಮಾತುಂಟು. ಇದರ ಪ್ರಕಾರ ಬೇಡುವುದು ಮೃತಜೀವನ, ಬೇಡದಿರುವುದು ಅಮೃತ . ಕುಮಾರಾರಾಧ್ಯರದು ಇತ್ತ ಕೈಯಲ್ಲದೆ ಬೇಡಿದ ಕೈಯಲ್ಲ. ದಾನ ಧರ್ಮಗಳ ಮೂಲಕ ಅವರು ಅಮೃತತ್ವವನ್ನು ಪಡೆದಿದ್ದಾರೆ.

- 3-

ದೇವಋಣ, ಪಿತೃಋಣ, ಋಷಿ ಋಣಗಳನ್ನು ಪರಿಹರಿಸುವುದು ಮಗನ ಕರ್ತವ್ಯ. ಜಿನ್ನಹಳ್ಳಿ ನಾಗಭೂಷಣರಾಧ್ಯರು ಗುರುಹಿರಿಯರಲ್ಲಿ, ದೈವದಲ್ಲಿ ಭಕ್ತಿಯುಳ್ಳವರಾಗಿದ್ದಾರೆ. ದೇವತಾಕಾರ್ಯಗಳಲ್ಲಿ ಆಗಮಿಕರಾಗಿ ದೇವಋಣವನ್ನು ತೀರಿಸುತ್ತಿದ್ದಾರೆ. ತಂದೆಯ ಋಣವನ್ನು ತೀರಿಸಿದವರು ಶ್ರೀ ರಾಮನಂತೆ, ಭೀಷ್ಮನಂತೆ ಕೀರ್ತಿವಂತರಾಗುತ್ತಾರೆ. ತಂದೆಯ ಭಾಷೆಯನ್ನು ತೀರಿಸಿದಲ್ಲಿ ತಂದೆಯು ಮಗನಾಗಿ ಅವತರಿಸುತ್ತಾನೆನ್ನುವ ಮಾತಿದೆ. ಆರಾಧ್ಯಸುರಭಿ ಗ್ರಂಥ

ಪ್ರಕಟಣೆಯ ಮೂಲಕ ನಾಗಭೂಷಣಾರಾಧ್ಯರು ಪಿತೃಋಣವನ್ನು ತೀರಿಸುತ್ತಿದ್ದಾರೆ

ತಾನು, ತನ್ನ ಮನೆಯೆನ್ನುವುದನ್ನು ಮೀರಿನಿಂತವರು ನಾಗಭೂಷಣಾರಾಧ್ಯರು. ಅವರದು ಆದರ್ಶದಲ್ಲಿ ಅಲೆಯುವ ಮನ. ಆರಾಧ್ಯಸುರಭಿ ಗ್ರಂಥದ ಯೋಜನೆ ಮತ್ತು ಪ್ರಕಟಣೆಯಲ್ಲಿ ಅವರ ನಿಸ್ವಾರ್ಥಮನೋಧರ್ಮ ಪ್ರಕಟವಾಗಿದೆ.

ಆರಾಧ್ಯಸುರಭಿ ಶ್ರೀ ಆರ್. ಕುಮಾರಾರಾಧ್ಯರ ಜೀವಿತವಿವರಗಳನ್ನು ಒಳಗೊಂಡು ಆ ಕಾಲದ ಚಾರಿತ್ರಿಕ, ಸಾಮಾಜಿಕ, ಧಾರ್ಮಿಕ ವಿಚಾರಗಳನ್ನು ಪುನರ್ರಚಿಸುವಲ್ಲಿ ವಿಶಿಷ್ಟವಾಗಿ ನಿಲ್ಲುತ್ತದೆ. ಕುಮಾರಾರಾಧ್ಯರನ್ನು ಕಂಡವರು, ಕೇಳಿದವರು, ಬಂಧುಗಳು, ಸ್ನೇಹಿತರು, ಹಿರಿಯರು ಕಿರಿಯರು ಹೀಗೆ ಭಿನ್ನಸ್ತರದ ಲೇಖನಗಳಿಂದ ಸುಪುಷ್ಟವಾಗಿದೆ. ಉದಾತ್ತವ್ಯಕ್ತಿತ್ವದ ಮಹನೀಯರಾದ ಕುಮಾರಾರಾಧ್ಯರ ಚಿತ್ರಣ ಹಲವು ಬಗೆಯಾಗಿ ಮೂಡಿಬಂದಿದೆ. ಉಪಕಾರವೀರ, ಧರ್ಮಭೀರು, ನಂದಾದೀಪ, ಭುವಿಯ ಭಾಗ್ಯ, ಸ್ನೇಹಜೀವಿ ಮುಂತಾದ ನೋಟಗಳು ಈ ಗ್ರಂಥದಲ್ಲಿ ಕಂಡು ಬರುತ್ತವೆ.

ಆರಾಧ್ಯ ಸಮಾಜದ ಏಳಿಗೆಗಾಗಿ ಕಟಿಬದ್ಧರಾಗಿದ್ದ ಕುಮಾರಾರಾಧ್ಯರ ಜೀವನ ಮತ್ತು ಆದರ್ಶಕ್ಕನುಗುಣವಾಗಿ ನಾಗಭೂಷಣಾರಾಧ್ಯರು ರೂಪಿಸಿರುವ ಆರಾಧ್ಯ ಸುರಭಿಯಲ್ಲಿ ಶಿವಾದ್ವೈತ ಸಿದ್ಧಾಂತ, ಆರಾಧ್ಯಸಮಾಜದ ಉದ್ಧಾರ ಮುಂತಾದ ಲೇಖನಗಳು ಎಡೆ ಪಡೆದಿವೆ. ಈ ಬಗೆಯ ಚಿಂತನ ಮಂಥನಗಳು ಕುಮಾರಾರಾಧ್ಯರಿಗೆ ಪ್ರಿಯವಾಗಿದ್ದುವು. ಆ ದೃಷ್ಟಿಯಿಂದ ಈ ಲೇಖನಗಳು ಈ ಸಂಪುಟದಲ್ಲಿರುವುದು ಸಾರ್ಥಕವಾಗಿದೆ. ಆರಾಧ್ಯಸಮಾಜ ಕೃಷಿಯ ಜೊತೆಗೆ ಆಯುರ್ವೇದ ಮತ್ತು ಜ್ಯೋತಿಷ್ಯಗಳ ಮೇಲೆ ಅವಲಂಬಿತವಾಗಿದ್ದ ಸಮಾಜ. ಆ ಮೂಲಕ ಸಮಾಜದಲ್ಲಿ ಗಣ್ಯಸ್ಥಾನವನ್ನು ಪಡೆದಿದೆ. ಆ ಕಾರಣಕ್ಕಾಗಿ ಈ ಗ್ರಂಥದಲ್ಲಿ ಕೃಷಿಲೋಕ, ದಿನನಿತ್ಯದಲ್ಲಿ ಆಯುರ್ವೇದ ಮತ್ತು ವೇದಾಂಗಜ್ಯೋತಿಷಮ್ ಮುಂತಾದ ಲೇಖನಗಳು ಸ್ಥಾನ ಪಡೆದಿರುವುದು ಉಚಿತವಾಗಿದೆ. ವಿವೇಕ ಶಕ್ತಿ, ವಿಶ್ವಮಾನವತೆ, ಅತಿಥಿ ಅಭ್ಯಾಗತರ ಸೇವೆ, ಸರಳ ಮದುವೆ ಮುಂತಾದ ಲೇಖನಗಳು ಇಂದಿನ ಅವಶ್ಯಕತೆಗನುಗುಣವಾಗಿದ್ದು ಪ್ರಸ್ತುತ ಸಂಪುಟದ ಘನತೆಗೆ ಕಾರಣವಾಗಿವೆ.

ಋಣತ್ರಯಗಳಲ್ಲಿ ಪಿತೃ ಋಣವನ್ನು ತೀರಿಸುವ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ 'ಆರಾಧ್ಯಸುರಭಿ' ಸ್ಮೃತಿಸಂಪುಟ ಶಿವಸ್ವರೂಪಿಗಳಾದ ಶ್ರೀ ಕುಮಾರಾರಾಧ್ಯರಿಗೆ ಪ್ರಿಯವಾಗುವುದರಲ್ಲಿ ಸಂಶಯವಿಲ್ಲ.

*"ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ"* ಎನ್ನುವುದು ಸರ್ವಜ್ಞನ ಮಾತು . ಆ ಮಾತಿನ ಅರ್ಥವಂತಿಕೆಯನ್ನು ನಾನು ಪ್ರಿಯಮಿತ್ರ ಶ್ರೀ ಜಿನ್ನಹಳ್ಳಿ ನಾಗಭೂಣಾರಾಧ್ಯರ ಒಡನಾಟದಲ್ಲಿ ಕಂಡಿದ್ದೇನೆ. ಅದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ. ಶ್ರೀಯುತರಿಗೆ, ಅವರ ಸಹಧರ್ಮಿಣಿ ಶ್ರೀಮತಿ ಲೀಲಾನಾಗಭೂಷಣ ಅವರಿಗೆ ಮತ್ತು ಅವರ ಕುಟುಂಬವರ್ಗದ ಎಲ್ಲರಿಗೆ ಈ ಸಂತಸದ ಸಂಭ್ರಮದ ಸಮಯದಲ್ಲಿ ದೇವರಲ್ಲಿ ಶ್ರೇಯಃಪ್ರಾರ್ಥನೆ ಮಾಡುತ್ತೇನೆ.

* * *

# ಸರಳ ಮದುವೆ : ಹೀಗೊಂದು ನಿಟ್ಟು

## ಹಿನ್ನೆಲೆಯ ನೀಲಿಪರದೆ

*ಭಾರತೀಯ ವಿವಾಹ ಪದ್ಧತಿಗಳಲ್ಲಿ ಇಂದು ನಾವುಗಳು ಕಾಣಬಹುದಾದ ಸರಳ ವಿವಾಹ ವರ್ಗಗಳು ಇಂತಿವೆ ಸರಳ ಸಂಪ್ರದಾಯ ವಿವಾಹ, ಸರಳವಿವಾಹ, ಸರಳ ಸಾಮೂಹಿಕ ವಿವಾಹ*

ಒಂದು ಕಾಲದಲ್ಲಿ ಮದುವೆ ಎಂಬುದು ಸಾಂಸ್ಕೃತಿಕವಾಗಿ, ಕೌಟುಂಬಿಕವಾಗಿ ಆರ್ಥಿಕವಾಗಿ ತುಂಬ ಅರ್ಥಪೂರ್ಣ ಆಚರಣೆ ಎನ್ನಿಸುವಂಥದಾಗಿತ್ತು. ಎರಡು ಕುಟುಂಬಗಳ ನಡುವಣ ಸೇತುವಾಗುತ್ತಿದ್ದುದು ಕೇವಲ ಅನಿವಾರ್ಯ ಅಂಗವಾಗಿದ್ದರೂ ಬದುಕಿನ ಎಲ್ಲ ಅಗತ್ಯಗಳಿಗೆ ಮದುವೆ ಒಂದು ಪೂರ್ವಭಾವಿ ಉದ್ಘಾಟನೆಯಾಗಿತ್ತು. ಮನೆ ನೋಡುವ ಶಾಸ್ತ್ರದಿಂದ ಪ್ರಾರಂಭವಾಗುತ್ತಿದ್ದ ಈ ಸಮಾರಂಭದ ಎಲ್ಲ ಘಟ್ಟಗಳಿಗೂ ನಾವು ಶಾಸ್ತ್ರದ ಚೌಕಟ್ಟನ್ನು ಹಾಕುತ್ತಿದ್ದೆವು. ಒಂದೊಂದು ಶಾಸ್ತ್ರಕ್ಕೂ ಒಂದೊಂದು ಅರ್ಥ ಇದ್ದೇ ಇರುತ್ತಿತ್ತು; ಮತ್ತು ಆ ಅರ್ಥವು ಆಚರಿಸುವವರಿಗೆ ಗೊತ್ತಿರುತ್ತಿತ್ತು. ಪ್ರತಿಯೊಂದು ಶಾಸ್ತ್ರದ ಪ್ರತಿಯೊಂದು ಘಟ್ಟವೂ. ಹಾಗಾಗಿ, ನಮ್ಮ ನಂಬಿಕೆಗೆ ಗ್ರಾಸವಾಗುತ್ತಿದ್ದುವು.



**ಕ್ಯಾತನಹಳ್ಳಿ ರಾಮಣ್ಣ**
ಅಜ್ಜಿಹೊತ್ತಿಗೆ
ಬೋಗಾದಿ ಗ್ರಾಮ
ಮೈಸೂರು
ದೂರವಾಣಿ - 2598399

ಕಾಲಕಳೆದಂತೆ ಆಚರಣೆಗಳು ಮಾತ್ರವೇ ಉಳಿಯುತ್ತ ಬಂದು ಅರ್ಥ ಹಿನ್ನೆಲೆಗೆ ಸರಿಯತೊಡಗಿತು. ಅರ್ಥ ಅಳಿದು 'ಅರ್ಥ' ಪ್ರಧಾನಪಾತ್ರವಹಿಸುತ್ತ ಬಂದಂತೆಲ್ಲ ಆ ಅರ್ಥಶೂನ್ಯ ಆಚರಣೆಗಳೆಲ್ಲ ಕೇವಲ 'ಕಾಟಾಚಾರಗಳಾಗುತ್ತ ಬಂದುವು; ಮತ್ತು ಅವೆಲ್ಲ ನಮ್ಮ ವೈಯಕ್ತಿಕ ಪರಿಸ್ಥಿತಿಗಳ ಅಸಹಾಯಕ ಅನಿವಾರ್ಯಗಳ ಕಾಲ್ತುಳಿತಕ್ಕೆ ಸಿಕ್ಕಿ ವಿರೂಪಗೊಳ್ಳತೊಡಗಿದುವು. ಹೆಚ್ಚಿನ ಆಚರಣೆಗಳೆಲ್ಲ ಅಪರೂಪವಾಗತೊಡಗಿದುವು.

ನಾವೇ ಹುಟ್ಟುಹಾಕಿಕೊಂಡ ಅನೇಕ ಆಚರಣೆಗಳೊಂದಿಗೆ ಪುರೋಹಿತರ ಪ್ರಭಾವದಿಂದ ಹುಟ್ಟಿಕೊಂಡಿರಬಹುದಾದ ಆಚರಣೆಗಳೂ ಕೂಡ ಅರ್ಥ

ಕಳೆದುಕೊಳ್ಳತೊಡಗಿದುವು; ಕಳಾಹೀನವಾಗತೊಡಗಿದುವು. ಈ ಕಾರಣಗಳಿಂದಾಗಿ ಸಹಜವಾಗಿಯೇ ಉಪೇಕ್ಷೆಗೆ ಒಳಗಾಗುತ್ತ ಬಂದುವು. ನಡೆದರೂ ಆದೀತು, ನಡೆಯದಿದ್ದರೂ ಆದೀತು, ಎಂಬ ಧೋರಣೆಗೆ ನಾವು ಒಳಗಾದೆವು.

ಈ ಘಟ್ಟದಲ್ಲಿ ಒಂದು ಆಚರಣೆ ನೆನಪಾಗುತ್ತಿದೆ. ಹಿಂದಿನಿಂದ ನಡೆದುಕೊಂಡು ಬಂದ ಶುದ್ಧ ಸಾಂಪ್ರದಾಯಿಕ ಮದುವೆಗಳಲ್ಲಿ ತಪ್ಪದೇ ಒಂದು ಆಚರಣೆ ಇರುತ್ತಿತ್ತು. ಅದು 'ಸೂರ್ಗುಳ್ಳು' ಎಂಬ ಆಚರಣೆ. ಎಷ್ಟೇ ಆದರೂ ಬಹುಪಾಲು ಎಲ್ಲ ಆಚರಣೆಗಳೂ ಕೇವಲ ಸಂಕೇತಗಳಷ್ಟೇ. 'ಸೂರ್ಗುಳ್ಳು' ಎಂದರೆ ಶಾಬ್ದಿಕವಾಗಿ 'ಶೂರರ ನೆಲೆ' ಎಂಬ ಅರ್ಥ ಸ್ಫುರಿಸಿದರೂ ವಾಸ್ತವವಾಗಿ ಅದೊಂದು ರಣಭೂಮಿ ; ಅಂದರೆ, ಯುದ್ಧರಂಗ. ಅಲ್ಲಿ ವೈರಿಗಳೊಡನೆ ಹೋರಾಡಿ, ವೈರಿಪಡೆಯನ್ನು ಛಿದ್ರಗೊಳಿಸಿ, ವಿಜಯೋತ್ಸಾಹದಿಂದ ಮರಳಿದ ಮೇಲೆಯೇ ಆ ಗಂಡು ನಮ್ಮ ಹೆಣ್ಣಿಗೆ ತಾಳಿ ಕಟ್ಟುವ ಅರ್ಹತೆಯನ್ನು ಗಳಿಸಬಲ್ಲನೆಂಬ ಒಂದು ಸಮೃದ್ಧ ಅರ್ಥಸಮೂಹ ಆ 'ಸೂರ್ಗುಳ್ಳು' ಎಂಬ ಆಚರಣೆಯ ಹಿನ್ನೆಲೆಯಲ್ಲಿ ನಮಗೆ ಕಾಣಸಿಗುತ್ತದೆ.

'ಸೂರ್ಗುಳ್ಳು' ಆಚರಣೆಯ ವಿವರಗಳನ್ನು ಹೇಳುತ್ತಾ ಹೋದರೆ ಅದು ಸಾಂಸ್ಕೃತಿಕ ನೆಲೆಗಟ್ಟಿನ ಕಡೆಗೆ ಪ್ರಯಾಣಮಾಡುವ ಸಾಧ್ಯತೆ ಇರುವುದರಿಂದ, ಮತ್ತೆ ಪ್ರಸ್ತುತ ವಿಚಾರದ ಹಾದಿ ಹಿಡಿಯಬಹುದಲ್ಲವೆ ? ಇವತ್ತಿನ ಸಂದರ್ಭದಲ್ಲಿ ಸೂರ್ಗುಳ್ಳು ಎಂಬ ಆಚರಣೆಯಿರಲಿ, ಆ ಹೆಸರು ಕೂಡ ಅನೇಕರಿಗೆ ಗೊತ್ತಿಲ್ಲ, ಅಥವಾ ಮರೆತುಹೋಗಿದೆ.

ಹೀಗೆ, ಸಾಂಪ್ರದಾಯಿಕ ಮದುವೆಗಳಲ್ಲಿ ಆಚರಿಸಲ್ಪಡುವ ಪ್ರತಿಯೊಂದು ಘಟ್ಟಕ್ಕೂ ತನ್ನದೇ ಆದ ಅರ್ಥ ಇರುತ್ತದೆ. ಆದರೆ, ಇವತ್ತು ಅಂಥ ಮದುವೆಗಳಲ್ಲಿ ಈಗಲೂ ಉಳಿದಿರುವ ಶಾಸ್ತ್ರಗಳಿಗೆ ಅಥವಾ ಆಚರಣೆಗಳಿಗೆ ಅರ್ಥ ಎಷ್ಟು ಜನಕ್ಕೆ ಗೊತ್ತಿದೆ ?

ಉದಾಹರಣೆಗೆ, ಧಾರೆಯ ಮಂಟಪದಲ್ಲಿ ಒಂದು ಸ್ತಂಭವನ್ನು ಸ್ಥಾಪಿಸುತ್ತೇವೆ. ಆಲ, ಅತ್ತಿ ಕಳ್ಳಿಯ ಕೊನೆಗಳನ್ನು ತಂದು, ಮಂಟಪದ ಹಿಂತುದಿಯಲ್ಲಿ ನಿಲ್ಲಿಸುತ್ತೇವೆ. ಈ ಗಿಡಗಳು ಏನನ್ನು ಸಂಕೇತಿಸುತ್ತವೆ ? ಅವುಗಳ ಅರ್ಥವೇನು ? ಇವನ್ನು ತಂದು ಸ್ಥಾಪಿಸಲು ಹೆಣ್ಣಿನ ಸೋದರಮಾವನೇ ಯಾಕೆ ಬೇಕು ? ಹೆಣ್ಣನ್ನು ಮಂಟಪಕ್ಕೆ ಕರೆತಂದು ನಿಲ್ಲಿಸಲು ಕೂಡ ಸೋದರಮಾವನೇ ಯಾಕೇ ಬೇಕು ? ಇವೆಲ್ಲ ಅಸಂಬದ್ಧನಾದ ಹಗುರರೂಪದ ಪ್ರಶ್ನೆಗಳಲ್ಲ. ವಾಸ್ತವವಾಗಿ ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳು. ಕುಟುಂಬ ಕುಟುಂಬಗಳ ನಡುವಿನ ಸಂಬಂಧಗಳು. ಕಾಲದ ಸುಳಿಗೆ ಸಿಕ್ಕಿ, ಪರಿಸ್ಥಿತಿಗಳ ಸುಳಿಗೆ ಸಿಕ್ಕಿ, ಸಂದರ್ಭಗಳ ಸುಳಿಗೆ ಸಿಕ್ಕಿ, ಹೇಗೆ ಬದಲಾಗುತ್ತ ಬಂದಿವೆಯೋ, ಹಾಗೆಯೇ, ಮೇಲಿನ ಪ್ರಶ್ನೆಗಳಿಗೆ ತುತ್ತಾಗಿರುವ ಆಚರಣೆಗಳು, ಶಾಸ್ತ್ರಗಳು ಕೂಡ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬರಬೇಕಿತ್ತು. ಆದರೆ, ಹಾಗಾಗಿಲ್ಲ ಎಂಬಲ್ಲಿಯೇ ನಮ್ಮೆಲ್ಲ ದೌರ್ಬಲ್ಯಗಳು ಪ್ರತಿಷ್ಠೆಗಳು ಅಡಗಿವೆ. ನಮ್ಮ ದೌರ್ಬಲ್ಯಗಳನ್ನು, ನಮ್ಮ ಪ್ರತಿಷ್ಠೆಗಳನ್ನು, ಗುರುತಿಸಿಕೊಂಡು, ವಾಸ್ತವ ಪರಿಸ್ಥಿತಿಯ

ಆಧಾರದಿಂದ ನಮ್ಮನ್ನು ನಾವು ಬದಲಾವಣೆಮಾಡಿಕೊಳ್ಳುವ, ತಿದ್ದಿಕೊಳ್ಳುವ, ತುಡಿತವು ಪ್ರಗತಿಶೀಲಮನಸ್ಸಿನ ಲಕ್ಷಣವಾಗುತ್ತದೆ.

**ಹೆಜ್ಜೆಗುರುತು**

ವಾಸ್ತವವಾದಿಗಳೆಲ್ಲ ಇವತ್ತು ಬಹುಶಃ ಮಹಾಕವಿ ಕುವೆಂಪು ಅವರತ್ತ ನೋಡುವ ಅಗತ್ಯವಿದೆ. ತಲೆತಲಾಂತರಗಳಿಂದ ಹೆಪ್ಪುಗಟ್ಟಿ ಹೋಗಿದ್ದ ಎಲ್ಲ ಸಂಕೋಲೆಗಳನ್ನೂ ಕಿತ್ತೊಗೆದು 'ಇದೋ ವಾಸ್ತವ' ಎಂದು ಹೇಳುವಂತೆ ತಮ್ಮ ಜೇಬಿನಿಂದ ತಾಳಿ ತೆಗೆದು ಮಗನ ಕೈಗೆ ಕೊಟ್ಟು ಆಶೀರ್ವದಿಸಿದ ಜಗತ್ತಿನ ಮೊದಲ ತಂದೆ ಅವರು. ಅವರು ಹಾಕಿಕೊಟ್ಟ ಆ ವಾಸ್ತವದ ಹಾದಿಯೇ ಇವತ್ತು ಶೀಘ್ರಗತಿಯಲ್ಲಿ ಹರಡಿಕೊಳ್ಳುತ್ತ ನಡೆದಿರುವ 'ಮಂತ್ರಮಾಂಗಲ್ಯ'. ಬರಹಗಾರರಾಗಿ ತಂದೆ ಕುವೆಂಪು ಅವರಿಗಿಂತ ಭಿನ್ನರೀತಿಯಲ್ಲಿ ಬೆಳೆದುನಿಂತಿರುವ ಕನ್ನಡದ ಅತ್ಯಂತ ಪ್ರಮುಖ ಲೇಖಕರದಲ್ಲಿ ಒಬ್ಬರಾದ ಪೂರ್ಣಚಂದ್ರ ತೇಜಸ್ವಿಯವರು ತಂದೆ ನೀಡಿದ ತಾಳಿಯನ್ನು ಪಡೆದು ಅಷ್ಟೇ ಸಂತೋಷದಿಂದ ತಾವು ಮೆಚ್ಚಿದ ಹೆಣ್ಣಿನ ಕೊರಳಿಗೆ ಕಟ್ಟಿ ಗೃಹಸ್ಥಾಶ್ರಮ ಪ್ರವೇಶಿಸಿದ ಸರಳೀಕೃತ ಮದುವೆಯ ಮೊಟ್ಟಮೊದಲ ವರ.

'ಮೂಢಸಂಪ್ರದಾಯವಿರೋಧಿಸಮ್ಮೇಳನ' ಎಂಬ ಅದ್ದೂರಿ ತಲೆಬರಹದಡಿಯಲ್ಲಿ ಏರ್ಪಾಡಾದ ಅದ್ದೂರಿ ಸಮಾರಂಭವೊಂದರಲ್ಲಿ ಲೇಖಕ ಕಾಳೇಗೌಡ ನಾಗವಾರ ಅವರು ಸರಳ ರೀತಿಯಲ್ಲಿ ಮದುವೆ ಮಾಡಿಕೊಂಡದ್ದು ಇನ್ನೊಂದು ಪ್ರಮುಖ ಘಟ್ಟ. 'ಊಟವಿಲ್ಲದ ಮದುವೆಯಂತೆ !' ಎಂಬ ಕುತೂಹಲವೇ ಭೂತಾಕಾರ ತಳೆದು ನಾಗವಾರದ ಬೀದಿಗಳಲ್ಲಿ ನಡೆದಾಡಲಾಗದಷ್ಟು ಜನಸಾಗರವನ್ನು ತಮ್ಮ ಹಳ್ಳಿಯತ್ತ ಆಕರ್ಷಿಸಿದವರು ಕಾಳೇಗೌಡರು.

ಕವಿ ದೊಡ್ಡರಂಗೇಗೌಡರಿಂದ ಒಮ್ಮೆ ಬಂದ ಒಂದು ಪತ್ರ ಇಲ್ಲಿ ನೆನಪಾಗುತ್ತಿದೆ. ಹತ್ತು ಪೈಸೆಯ ಕಾರ್ಡಿನಲ್ಲಿ ಅವರು ಬರೆದಿದ್ದರು : 'ಗೆಳತಿ ರಾಜೇಶ್ವರಿಯನ್ನು ಹದಿನೈದು ದಿನಗಳ ಹಿಂದೆ ಮದುವೆಯಾಗಿದ್ದೇನೆ. ಈಗ ನಾವಿಬ್ಬರೂ 'ಈ' ವಿಳಾಸದಲ್ಲಿ ವಾಸಿಸುತ್ತಿದ್ದೇವೆ. ನೀವು ಬೆಂಗಳೂರಿಗೆ ಬಂದಾಗ, ಬಿಡುವಿದ್ದರೆ ನಮ್ಮ ಮನೆಗೆ ಬಂದು, ನಮ್ಮ ಅತಿಥ್ಯ ಸ್ವೀಕರಿಸಬೇಕು.

ಬಹುಪಾಲು ಇದೇ ಒಕ್ಕಣೆಯನ್ನು ಒಳಗೊಂಡ ಇನ್ನೊಂದು ಪತ್ರ ವಿಚಾರವಾದಿ ಕೆ. ರಾಮದಾಸ್ ಅವರಿಂದಲೂ ಬಂದಿತ್ತು.

**ನೀಲಿಪರದೆಯ ಇನ್ನೊಂದು ಮುಖ**

ಒಂದು ಕಾಲದಲ್ಲಿ ಒಂಭತ್ತು ದಿನಗಳ, ಏಳು ದಿನಗಳ, ಮದುವೆಗಳು ಚಾಲ್ತಿಯಲ್ಲಿದ್ದುವು. ವಾಹನ ಸೌಲಭ್ಯ ಇಲ್ಲದ, ಕನಿಷ್ಟ ಪಕ್ಷ ಎತ್ತಿನ ಗಾಡಿಯೂ ಇಲ್ಲದ, ಕಾಲದಲ್ಲಿ ಅಂಥ ಮದುವೆಗಳು ನಡೆಯುತ್ತಿದ್ದಿರಬೇಕು. ಹತ್ತಾರು ಮೈಲು ದೂರದಿಂದ ಕುಟುಂಬ ಸಮೇತ

ನಡೆದು ಬರುವ ಬಂಧುಗಳನ್ನು ನಾಲ್ಕು ದಿನ ಉಳಿಸಿಕೊಂಡು ಸತ್ಕರಿಸುವ ಸಲುವಾಗಿಯೋ ಎಂಬಂತೆ ಆ ದಿನಗಳು ಉದ್ಭವಿಸುತ್ತಿದ್ದಿರಬೇಕು.

ಮದುವೆಯ ಅವಧಿ ಐದು ಮೂರು ದಿನಗಳಿಗೆ ಇಳಿಯತೊಡಗಿದುದು ವಾಸ್ತವ ಪರಿಸ್ಥಿತಿಯ ಪರಿಣಾಮವೇ ಇರಬೇಕು. ಅಂಥ ದಿನಗಳಲ್ಲಿ ನಡೆಯುತ್ತಿದ್ದ ಮದುವೆಗಳಲ್ಲಿ ಕೇವಲ ಸೌಹಾರ್ದಮನೋಭಾವದ ಪ್ರೀತಿಯ ಸಡಗರದ ವಾತಾವರಣ ಮಾತ್ರ ಇರುತ್ತಿತ್ತು. ಅಂದಮಾತ್ರಕ್ಕೆ ಅಲ್ಲಿ ವ್ಯಾವಹಾರಿಕ ಮನೋಭಾವವೇ ಇರುತ್ತಿರಲಿಲ್ಲ ಎಂದಲ್ಲ. ಹೆಣ್ಣಿನ ಮನೆಯವರ, ಗಂಡಿನ ಮನೆಯವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ, ವ್ಯವಹಾರ ಇಣಿಕುತ್ತಿತ್ತೇ ಹೊರತು, ಸುಲಿಗೆಯ ಮನೋಭಾವ ಖಂಡಿತವಾಗಿಯೂ ಪ್ರವೇಶಿಸುತ್ತಿರಲಿಲ್ಲ. ಖಚಿತವಾಗಿ ಪ್ರವೇಶ ಪಡೆದುಕೊಳ್ಳುತ್ತಿದ್ದ ಒಂದೇ ವ್ಯವಹಾರವೆಂದರೆ 'ತೆರ' ಎಂಬುದು. ಅದೂ ಕೂಡ ಹೆಚ್ಚಿನ ಮೊತ್ತದ್ದಲ್ಲವಾದ್ದರಿಂದ ಗಂಡಿನ ಕಡೆಯುವರಿಗೆ ಅದೆಂದೂ ಹೊರೆಯಾಗುತ್ತಿರಲಿಲ್ಲ.

ಹೀಗೆ ವಾಸ್ತವದ ಗೆರೆಯನ್ನು ದಾಟದೆ ನೆಮ್ಮದಿಕಾರಕವಾಗಿಯೇ ನಡೆಯುತ್ತಿದ್ದ ಸಾಂಪ್ರದಾಯಿಕ ಮದುವೆಗೆ ಭಯಂಕರ ಸೋಂಕುರೋಗವೊಂದು ತಗಲಿಕೊಂಡದ್ದು ಒಂದು ದೊಡ್ಡ ದುರಂತ. ಹಣವಂತರಲ್ಲಿ ಮನೆ ಮಾಡುವ ಎಷ್ಟೋ ರೋಗಗಳು ಬಹುಶಃ ಬೇರೆ ಯಾರಲ್ಲೂ ಅಷ್ಟಾಗಿ ಕಾಣಲಾರವು. ಯಾರೋ ಹಣವಂತರೇ ಸೃಷ್ಟಿ ಮಾಡಿರಬಹುದಾದ ಆ ಭಯಂಕರ ಸೋಂಕು ರೋಗವು 'ವರದಕ್ಷಿಣೆ' ಎಂಬ ಅನಿಷ್ಟ.

ಈ ಘಟ್ಟದಲ್ಲಿ ಒಂದು ಚಿತ್ರ ನೆನಪಾಗುತ್ತಿದೆ ; ಇಪ್ಪತ್ತು ವರ್ಷಗಳ ಹಿಂದೆ ನನ್ನ ಮದುವೆಯಾದ ಕೆಲವೇ ದಿನಗಳಲ್ಲಿ ಕರ್ತವ್ಯದ ಮೇಲೆ ಬೀದರ ಜಿಲ್ಲೆಯಲ್ಲಿ ಪ್ರವಾಸ ಮಾಡಬೇಕಾಗಿ ಬಂದಿತ್ತು. ಆಗ ಕೆಲವು ದಿನ ಬೀದರನಗರದಲ್ಲಿ ತಂಗಬೇಕಾದ ಅನಿವಾರ್ಯತೆ ಒದಗಿತ್ತು. ಅಂಥ ಒಂದು ದಿನ ರಾತ್ರಿಯ ಊಟ ಮುಗಿಸಿ ಬಂದು ಮಲಗಲು ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ, ಮುಖ್ಯಬೀದಿಯಲ್ಲಿ ಸಾಗುತ್ತಿದ್ದ ವಾದ್ಯಘೋಷ ಕಿವಿಗೆ ಬಡಿಯಿತು. ಪಕ್ಕದಲ್ಲೆ ಸ್ವಲ್ಪ ದೂರದಲ್ಲಿ ಕಂಬಳಿ ಹಾಸಿಕೊಳ್ಳುತ್ತಿದ್ದ ಗೆಳೆಯ ಬಂಡೆಪ್ಪನವರನ್ನು 'ಇದೇನ್ರಿ?' ಎಂದು ಕೇಳಿದೆ. 'ಪ್ರಸ್ತದ ಮೆರವಣಿಗೆ ಹೊಂಟೈತ್ರಿ' ಅಂದರು. ಕುತೂಹಲ ಎನ್ನೋಣವೆ, ರೋಮಾಂಚನ ಎನ್ನೋಣವೆ, ದಿಗ್ಭ್ರಮೆ ಎನ್ನೋಣವೆ ? ಈ ಮೂರು ಅನುಭವಗಳು ಒಮ್ಮೆಲೇ ನನ್ನ ಮೈಮೇಲೆ ಅದುಕಿಕೊಂಡಂತೆ ಭಾಸವಾಯಿತು. 'ಮದುವೆಯ ಮೆರವಣಿಗೆ, ದೇವರ ಮೆರವಣಿಗೆ, ದಸರಾ ಮೆರವಣಿಗೆ ಇತ್ಯಾದಿ ಮೆರವಣಿಗೆಗಳಷ್ಟೇ ನನಗೆ ಗೊತ್ತಿದ್ದುದು. ಹೊಸದಾಗಿ ಮದುವೆಯಾಗಿದ್ದವನು ನಾನು. ಪ್ರಸ್ತವೂ ಆಗಿತ್ತೆನ್ನಿ. ಆದರೆ 'ಮೆರವಣಿಗೆ'ಆಗಿರಲೇ ಇಲ್ಲ! ಹೀಗೆ ಕುತೂಹಲಾವಿಷ್ಟನಾಗಿ ಮಲಗದೆ ಕುಳಿತೇಬಿಟ್ಟನಲ್ಲ! 'ನೋಡ್ತೀರೇನ್ರಿ? ಬರ್ರಿ, ನೋಡುಣು' ಎಂದು ಹೇಳುತ್ತ ಬಂಡೆಪ್ಪನವರು ಎದ್ದು ಹೊರಟೇಬಿಟ್ಟರು.

ಮೆರವಣಿಗೆ, ನಾವು ನಿಂತ ಜಾಗವನ್ನು ಆಗತಾನೆ ಸಮೀಪಿಸುತ್ತಿತ್ತು. ಎರಡೂ ಮಗ್ಗಲುಗಳಲ್ಲಿ ಝಗಝಗಿಸುವ ವಿದ್ಯುದ್ದೀಪಗಳ ಸಾಲು. ಮುಂದುಗಡೆ ಬಣ್ಣಬಣ್ಣದ ಯೂನಿಫಾರಂ ತೊಟ್ಟು ಟಾಕೋಟೀಕಾಗಿ ಹೆಜ್ಜೆ ಹಾಕುತ್ತ ಬಗೆಬಗೆಯ ವಾದ್ಯಗಳನ್ನು ನುಡಿಸುತ್ತ ಹೊರಟ ವಾದ್ಯಗಾರರು. ಅವರ ಹಿಂದೆ ಸಾಲಾಗಿ ಬರುತ್ತಿರುವ ಮೈತೆರೆದ ಮೂರು ಲಾರಿಗಳು. ಒಂದು ಲಾರಿಯ ಮೇಲೆ ದೊಡ್ಡ ಗಾಡ್ರೆಜ್ ಬೀರು, ವಿಶಾಲವಾದ ಮಂಚ, ಇನ್ನಿತರ ಸ್ಟೀಲ್ ಫರ್ನಿಚರ್‌ಗಳು. ಎರಡನೆಯ ಲಾರಿಯಲ್ಲಿ ಡೈನಿಂಗ್ ಸೆಟ್, ಸೋಫಾ ಸೆಟ್, ರೇಡಿಯೋ, ಟೇಪ್‌ರೆಕಾರ್ಡರ್, ಫ್ಯಾನ್, ಇತ್ಯಾದಿ. ಮೂರನೆಯ ಲಾರಿಯಲ್ಲಿ ದೊಡ್ಡ ದೊಡ್ಡ ಹಿತ್ತಾಳೆಯ ತಾಮ್ರದ ಪಾತ್ರೆಗಳು, ಸ್ಟೀಲ್ ತಟ್ಟೆಗಳ ಗುಪ್ಪೆ, ಸ್ಟೀಲ್ ಲೋಟಗಳ ಗುಪ್ಪೆ, ಗಂಡಿನ ಬಟ್ಟೆಗಳ ಜೋಡಿಸಲ್ಪಟ್ಟ ರಾಶಿ, ಮಿರಿಮಿರಿ ಮಿಂಚುವ ಷೂಗಳು, ಇತ್ಯಾದಿ. ಹಿಂದುಗಡೆ, ನಡೆದು ಬರುತ್ತಿರುವ ಗಂಡಸರ, ಹೆಂಗಸರ ಗುಂಪುಗಳು.

ಈ ಅದ್ಭುತ ಮೆರವಣಿಗೆ ನೋಡಿ ವಾಪಸ್ಸು ಬರುತ್ತಿರುವಾಗ ನಾನು ಕೇಳಿದೆ. ಮೆರವಣಿಗೆಯೆಂದರೆ ಮೆರವಣಿಗೆಯೇ. ವಸ್ತುಗಳಾದರೇನು, ಜನಗಳಾದರೇನು, ದನಗಳಾದರೇನು. 'ಇದನ್ನು ಪ್ರಸ್ತದ ಮೆರವಣಿಗೆ ಅಂತ ಯಾಕೆ ಅಂದ್ರಿ?' ಇದು ನನ್ನ ಪ್ರಶ್ನೆ. ಉತ್ತರವಾಗಿ ಬಂಡೆಪ್ಪನವರು ಹೇಳಿದ ಮಾತುಗಳ ಸಾರಾಂಶ ಇಷ್ಟು ; ಈ ಮೂರು ಲಾರಿಗಳ ತುಂಬ ತುಂಬಿದ್ದ ವಸ್ತುಗಳು ಗಂಡಿನ ಮನೆ ತಲಪಿದ ಮೇಲೆಯೇ ಪ್ರಸ್ತ. ಹಾಗಾದರೆ ಮದುವೆಯ ಸಂದರ್ಭದಲ್ಲಿ ವರದಕ್ಷಿಣೆ ಕೊಟ್ಟಿಲ್ಲವೆ ? ಕೊಟ್ಟಿದ್ದಾರೆ, ಹೇರಳವಾಗಿ. ಆದರೆ ಅದು ಮದುವೆಗೆ ಮಾತ್ರ. ಪ್ರಸ್ತಕ್ಕೆಂದು ಈ ವಸ್ತುಗಳು ಪ್ರತ್ಯೇಕ ಕೊಡುಗೆ ! ಕೇಳಿ ಸುಸ್ತಾದೆ. ವರದಕ್ಷಿಣೆಯೂ ಇಲ್ಲ. ಇಂಥ ವೈಭವೋಪೇತ ವಸ್ತುಗಳೂ ಇಲ್ಲ, ಕೊನೆಗೆ ಒಂದು ಸಣ್ಣ ಮೆರವಣಿಗೆಯೂ ಇಲ್ಲ ! ಏನೂ ಇಲ್ಲದೆ ಮದುವೆ ಮಾಡಿಕೊಂಡ ನಾನೆಂಥ ದಡ್ಡ ! ಹೀಗೆನ್ನಿಸಿ ಫಕ್ಕನೆ ನಕ್ಕುಬಿಟ್ಟೆ. 'ಎದುಕ್ರೀ ನಗಲಾಕ ಹತ್ತೀರಿ?' ಎಂದರು ಬಂಡೆಪ್ಪ. 'ಪ್ರಸ್ತ ಅಂದಮ್ಯಾಲ ಖುಷಿ ಆಗಲಾಕ ಬೇಕಲ್ರಿ' ಎಂದು ಮತ್ತೊಮ್ಮೆ ನಕ್ಕೆ. ಈ ಸಲ ನನ್ನೊಂದಿಗೆ ಬಂಡೆಪ್ಪನವರೂ ನಕ್ಕುಬಿಟ್ಟರು.

ಒಬ್ಬಳು ಮಗಳ ಮದುವೆಗಾಗಿ ಮಾಡಿದ ಸಾಲವನ್ನು ತೀರಿಸಲು ಜೀವಮಾನ ಪರ್ಯಂತ ದುಡಿಯುವ ಅಥವಾ ಇರುವ ಚೂರುಪಾರು ಆಸ್ತಿಯನ್ನು ಮಾರಿಕೊಂಡು ಕೂಲಿಗಾರರಾಗಿ ಭಿಕಾರಿಗಳಂತೆ ಬದುಕುವ ಅನೇಕರು ನಮ್ಮ ನಡುವೆ ಇರಬಹುದು. ತಮ್ಮ ಮಗನಿಗೆ ಎಷ್ಟು ವರದಕ್ಷಿಣೆ ಪಡೆದೆವು ಎಂಬ ಅಂಶವೇ ಪ್ರತಿಷ್ಠೆಗೆ ವಸ್ತು ಎಂದು ಭಾವಿಸುವ ಮಹಾನುಭಾವರೂ ಇರಬಹುದು.

ಬೀದರ್‌ನಲ್ಲಿ ನಾನು ಕಂಡಂಥ ಚಿತ್ರ ಬೇರೆಬೇರೆ ರೂಪದಲ್ಲಿ ನಮ್ಮ ಸುತ್ತಮುತ್ತ ಆಗಾಗ ಕಾಣಿಸುವುದುಂಟು. ಸರಳಮದುವೆಯ ಬಗ್ಗೆ ಒಲವುಳ್ಳ ಅನೇಕರು ಸಾಂಪ್ರದಾಯಿಕ ಮದುವೆಗಳಲ್ಲಿ ಭಾಗವಹಿಸುವುದಿಲ್ಲ. ಆದರೆ ನಾನು ಎಲ್ಲ ಬಗೆಯ ಮದುವೆಗಳಲ್ಲೂ

ಭಾಗವಹಿಸುವುದಿದೆ - ಕೊನೆಗೆ ರಿಜಿಸ್ಟರ್ಡ್ ಮದುವೆಯಲ್ಲೂ !

ಸರಳಮದುವೆ ಮತ್ತು ನಾನು

ಸಾಂಪ್ರದಾಯಿಕ ಮದುವೆಗಳಲ್ಲಿ ಅನೇಕ ಸಲ ಕಂಡಿದ್ದೇನೆ. ಚಪ್ಪರದೊಳಗೆ ಒಂದು ಅಲಂಕೃತ ಸ್ಕೂಟರೋ, ಕುಟುಕುಟಿಯೋ, ಕಾರೋ ನಿಂತಿರುತ್ತದೆ. ಯಾರು ಬೇಕಾದರೂ ಸುಲಭವಾಗಿ ಊಹಿಸಿಬಿಡಬಹುದು. ಆ ಗಂಡಿನ ರೇಟು ಇಷ್ಟೆ ಎಂದು, 'ಗಂಡು' ಎಂಬ ಗಂಡಸಿನ ಯೋಗ್ಯತೆಯನ್ನು ಹೆಣ್ಣಿನ ಕಡೆಯುವರು ಬಹಿರಂಗವಾಗಿ ಹರಾಜು ಹಾಕುವ ಪರಿ ಇದು. ಹರಾಜಿಗೊಳಪಡುವ ನಾಯಿಪಾಡನ್ನೇ ಪ್ರತಿಷ್ಠೇ ಎಂದು ಭಾವಿಸಿ ಬೀಗುವುದಿದೆಯಲ್ಲ, ಅದು ಸಾಮಾನ್ಯರಿಂದ ಸಾಧ್ಯವಾಗುವ ಕೆಲಸವಲ್ಲ ; ಅದಕ್ಕಿಂತ ಹೆಚ್ಚಾಗಿ, ಮನುಷ್ಯರಿಂದ ಸಾಧ್ಯವಾಗುವ ಕೆಲಸ ಅಲ್ಲವೇ ಅಲ್ಲ !

ಹಸಿಯೋ ಬಿಸಿಯೋ, ಒಟ್ಟಿನಲ್ಲಿ. ಪ್ರತಿಷ್ಠೆ ಎಂಬುದು ಮನುಷ್ಯತ್ವವನ್ನು ನಾಶಮಾಡುವ ಒಂದು ರೋಗ.

ಸಾಂಪ್ರದಾಯಿಕ ಮದುವೆಗಳಲ್ಲಿ ನಡೆಯುವ ಅನೇಕ ಆಚರಣೆಗಳನ್ನು ಸೌಮ್ಯವಾಗಿ ಪ್ರಶ್ನಿಸುವುದರ ಮೂಲಕ, ಕುತೂಹಲ ವ್ಯಕ್ತಪಡಿಸಿ ಇಕ್ಕಟ್ಟಿಗೆ, ಉಭಯ ಸಂಕಟಕ್ಕೆ ಸಿಲುಕಿಸುವ ಮೂಲಕ ಅಂಥ ಆಚರಣೆಗಳೆಲ್ಲ ವ್ಯರ್ಥ ಎಂಬ ಭಾವನೆಯನ್ನು ಉಂಟುಮಾಡಲು ಸಾಧ್ಯ. ಸಂಪ್ರದಾಯಗಳನ್ನು ಸ್ಥಗಿತಗೊಳಿಸಬಹುದು. ಆಚರಣೆಗಳನ್ನು ತಡೆಯಬಹುದು. ಸರಳ ನಿರಾಡಂಬರ ಮದುವೆಯನ್ನಾಗಲಿ ವಾಸ್ತವಬದುಕನ್ನಾಗಲಿ ಪ್ರೀತಿಸುವವರು ಸಾಂಪ್ರದಾಯಿಕ ಮದುವೆಗಳಲ್ಲಿ ಭಾಗವಹಿಸಲೇಬೇಕು ಎಂಬ ಆಗ್ರಹ ನನ್ನದಲ್ಲ. ಆದರೆ ಅಂಥ ಕಾರ್ಯಕ್ರಮಗಳ ಹಿಂದೆ ಅಡಗಿರುವ ಮೌಢ್ಯವನ್ನಾಗಲಿ, ಅನಗತ್ಯತೆಯನ್ನಾಗಲಿ ತೋರಿಸಿಕೊಟ್ಟು ತಿಳಿಯಹೇಳುವವರು ಯಾರು ?

ಸಾಂಪ್ರದಾಯಿಕಮದುವೆಗಳಲ್ಲಿ ಜರಿಯುವ ಪದಗಳನ್ನು ಹಿಂದೆ ಹಾಡುತ್ತಿದ್ದರು. ಹೆಣ್ಣಿನ ಕಡೆಯುವರು ಗಂಡಿನ ಕಡೆಯವರನ್ನೂ, ಗಂಡಿನ ಕಡೆಯವರು ಹೆಣ್ಣಿನ ಕಡೆಯವರನ್ನೂ, ವಾಚಾಮಗೋಚರವಾಗಿ ಜರಿದು ಹಾಡುತ್ತಿದ್ದರು. ಕಲಾತ್ಮಕಹಾಡುಗಾರಿಕೆ, ಉಪಮೆಗಳ ರೂಪಕಗಳ ಹೋಲಿಕೆಗಳ ಬಳಕೆ, ಇತ್ಯಾದಿ ಗುಣಗಳನ್ನು ಆನಂದಿಸಿ ಖುಷಿಪಡುವ ಸೌಹಾರ್ದ ಮನೋಭಾವ ಇದ್ದಂಥ ಕಾಲವೊಂದಿತ್ತು. ಈಗ ಎಲ್ಲಿದೆ ಆ ಗುಣ ? ಅದು ಸಾಂಪ್ರದಾಯಿಕ ಮದುವೆಯೇ ಆಗಿರಲಿ, ಸರಳ ಮದುವೆಯೇ ಆಗಿರಲಿ, ಅಂಥ ವಿಶಾಲಗುಣದ, ಸೌಹಾರ್ದ ಮನೋಭಾವದ, ಕೊರತೆಯಿಂದಾಗಿ ನಾವೆಲ್ಲ ಕುಬ್ಜರಾಗುತ್ತ ನಡೆದಿದ್ದೇವೇನೋ ಎಂದು ಒಮ್ಮೊಮ್ಮೆ ನನಗನ್ನಿಸುತ್ತದೆ.

ಸರಳಮದುವೆಯೆಂದರೆ ಊಟವಿಲ್ಲದ ಮದುವೆ ಎಂಬ ತಿಳಿವಳಿಕೆ ಸಾಮಾನ್ಯಸ್ಥಾನ ಗಳಿಸಿಕೊಂಡಿದೆ. ಅಂದರೆ, ಊಟವೊಂದನ್ನು ಬಿಟ್ಟು, ಉಳಿದದ್ದೆಲ್ಲ ಅಲ್ಲಿ ಇದೆ - ಎಂಬ ಭಾವನೆ

ಅಲ್ಲಲ್ಲಿ ಕಂಡುಬರುತ್ತದೆ. ಇಲ್ಲಿಯೂ ಕೇವಲ ಪ್ರತಿಷ್ಠೆಯದೇ ಕಾರುಬಾರು. ಯಾರೋ ಒಬ್ಬಿಬ್ಬರ ಪ್ರತಿಷ್ಠೆಯಿಂದಾಗಿ ಸರಳ ಮದುವೆಯ ಆದರ್ಶ ಉದ್ದೇಶಗಳು ಕಲುಷಿತಗೊಳ್ಳುವ ಸಾಧ್ಯತೆಗಳಿರುತ್ತವೆ. ಸ್ವಾರ್ಥವೂ ಈಡೇರಬೇಕು, ಸಾಮಾಜಿಕ ಸ್ಥಾನಮಾನಗಳೂ ಲಭ್ಯವಾಗಬೇಕು - ಎಂಬ ಇಬ್ಬಗೆಯ ಇಬ್ಬಂದಿಗಳಿಂದಾಗಿ ಮಾನವೀಯಮೌಲ್ಯಗಳನ್ನುಳ್ಳ ಆದರ್ಶಗಳು ಅಳಿಸಿಹೋಗಬಾರದು.

ನನಗೆ ತಿಳಿದಂತೆ ಸರಳ ಮದುವೆಗಳು ಮಂಡ್ಯ ಜಿಲ್ಲೆಯಲ್ಲಿ ಮೊದಲು ಕಾಣಿಸಿಕೊಂಡದ್ದು ಮದ್ದೂರು ತಾಲ್ಲೂಕಿನ ವಳಗೆರೆಹಳ್ಳಿಯಲ್ಲಿ. ಕೆಲವು ಮದುವೆಗಳು ಅಲ್ಲಿ ನಡೆದುವು. ಆಮೇಲೆ ಹೆಚ್ಚಿನ ಸಂಖ್ಯೆಯಲ್ಲಿ ನಡೆದದ್ದು ನನ್ನ ಹಳ್ಳಿಯಲ್ಲಿ. ಪಾಂಡವಪುರ ತಾಲ್ಲೂಕು ಕ್ಯಾತನಹಳ್ಳಿಯಲ್ಲಿ ಇದುವರೆಗೆ ಸುಮಾರು ನೂರೈವತ್ತು ಸರಳ ಮದುವೆಗಳು ನಡೆದಿವೆ. ಎಲ್ಲವನ್ನೂ ಸಂಘಟಿಸಿದ್ದವರು ರೈತಸಂಘದ ಕಾರ್ಯಕರ್ತರೇ, ನನ್ನೂರಿನ ರೈತಸಂಘದವರು ಊರೆಲ್ಲ ಮೆಚ್ಚುವ ರೀತಿಯಲ್ಲಿ ಸಾಮಾಜಿಕಕಾರ್ಯಗಳಲ್ಲಿ ಆತ್ಮೀಯವಾಗಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. (ಇವರನ್ನು ದೂಷಿಸುವವರೋ ಕೇವಲ ರಾಜಕೀಯ ಸ್ಪರ್ಧಿಗಳಷ್ಟೇ) ಜನಸಾಮಾನ್ಯರ ಕಷ್ಟಸುಖಗಳಿಗೆ, ಭಾವನೆಗಳಿಗೆ, ಶೀಘ್ರಗತಿಯಲ್ಲಿ ಸ್ಪಂದಿಸುವ, ಸಹಾಯಹಸ್ತ ಚಾಚುವ, ವಿಶಾಲಮನೋಭಾವ ರೈತಸಂಘದ ಕಾರ್ಯಕರ್ತರಲ್ಲಿದೆ. ರಂಗಕಲಾವಿದರೂ, ಕ್ರೀಡಾಪಟುಗಳೂ, ಆಗಿದ್ದಾರೆ ನನ್ನೂರಿನ ರೈತಸಂಘದ ಕಾರ್ಯಕರ್ತರು. ನಡೆದಿರುವ ನೂರೈವತ್ತು ಮದುವೆಗಳಲ್ಲಿ ನೂರಕ್ಕೂ ಹೆಚ್ಚು ಮದುವೆಗಳು ಅತ್ಯಂತ ಪ್ರಾಮಾಣಿಕ ರೀತಿಯಲ್ಲಿ ಆದರ್ಶಪ್ರಾಯವಾದವು.

ಎರಡು ಬಗೆಯ ಸಂದರ್ಭಗಳಲ್ಲಿ ರೈತಸಂಘದ ಕಾರ್ಯಕರ್ತರು ತೊಡಕಿಗೆ ಒಳಗಾಗುವುದುಂಟು. ಗಂಡು ಮಕ್ಕಳಿಲ್ಲದ ಮನೆಯ ಹೆಣ್ಣಾದರೆ, ಅಲ್ಲಿ ಆಸ್ತಿಯ ಆಸೆಗೆ ಗಂಡಿನವರು ಒಪ್ಪಿದ್ದಾರೆ ಎಂಬ ಕುಹಕದ ಮಾತು ಕೇಳಿಬರುವುದು ಸಹಜ. ಈ ಕುಹಕವು ರೈತಸಂಘವನ್ನು ಹಾಯದೆ ಬಿಡುವುದಿಲ್ಲ. ಇನ್ನು ಕೆಲವು ಸಂದರ್ಭಗಳಲ್ಲಿ, ಹೆಣ್ಣಿನ ಕಡೆಯವರೂ ಗಂಡಿನ ಕಡೆಯವರೂ ಮೊದಲೇ ತಮ್ಮ ಎಲ್ಲ ವ್ಯಾವಹಾರಿಕ ಕಾರ್ಯಗಳನ್ನು ಮುಗಿಸಿಕೊಂಡು, ಕೇವಲ ಊಟದ ಹಾಗೂ ಶಾಸ್ತ್ರದ ವೆಚ್ಚವನ್ನು ಉಳಿಸುವ ಸಲುವಾಗಿ ರೈತಸಂಘದ ಆಶ್ರಯ ಕೋರುತ್ತಾರೆ. ಸಾಮಾಜಿಕ ಕಾರಣಗಳಿಗಾಗಿ ರೈತಸಂಘ ಇಂಥ ಮದುವೆಯನ್ನೂ ನೆರವೇರಿಸಿಕೊಡಬೇಕಾಗುತ್ತದೆ. ಈ ಸಂದರ್ಭವನ್ನಂತೂ ರಾಜಕೀಯ ಸ್ಪರ್ಧಿಗಳು ತಮ್ಮ ಅಸ್ತ್ರವಾಗಿಸಿಕೊಳ್ಳುವ ಅವಕಾಶವನ್ನು ತಪ್ಪಿಸಿಕೊಳ್ಳುವುದಿಲ್ಲ. ರೈತ ಸಂಘ ಇಂಥ ತೊಡಕುಗಳಿಂದ ಹಿಮ್ಮೆಟ್ಟದೆ. ಸರಳ ಮದುವೆಯ ಕಾರ್ಯಕ್ರಮಗಳನ್ನು ನಡೆಸುತ್ತಲೇ ಬರುತ್ತಿದೆ. ಇದು ಮಹಾಕವಿಗೆ ಅವರು ಸಲ್ಲಿಸುವ ಗೌರವವಾಗಿದ್ದರೂ, ಅವರೆಂದೂ ಹಾಗೆ ಪ್ರಚಾರಮಾಡಿಕೊಳ್ಳದೆ, ಸಾಮಾನ್ಯರಲ್ಲಿ ಸಾಮಾನ್ಯರಾಗಿ ಜನಸಮೂಹದಲ್ಲಿ ಲೀನವಾಗುತ್ತಾರೆ. ಅವರ ನಿಸ್ವಾರ್ಥತೆಯೇ ಅವರ ಶಕ್ತಿ, ಅವರ ಪ್ರಾಮಾಣಿಕತೆಯೇ ಅವರ ದೈವ.



# ವೇದಾಂಗಜ್ಯೋತಿಷಮ್

ಬ್ರಹ್ಮಾಂಡದ ಅಗಾಧತೆಯ ರಹಸ್ಯವನ್ನು ಅರಿಯುವ ಪ್ರಾಮಾಣಿಕ ಪ್ರಯತ್ನದ ಯಶಸ್ವೀ ಅನುಭವವು ವೇದವೆನ್ನಿಸಿದೆ. ಈ ಋತವನ್ನು ಅರಿತವರು ಋಷಿಗಳು. ಈ ಅಪೌರುಷೇಯ ಅನುಭವದ ಅಭಿವ್ಯಕ್ತಿಯೇ ವೇದ.

ಈಶ್ವರ ಪ್ರಣೀತವಾದ ವೇದಗಳು ನಾಲ್ಕು. ಋಗ್ವೇದವು 21, ಯಜುರ್ವೇದವು 11, ಸಾಮವೇದವು 1000, ಅಥರ್ವಣವೇದವು 9 ಭೇದವುಳ್ಳವಾಗಿವೆ. ಸಮಗ್ರವೇದವು 1041ಭೇದಗಳಿಂದ ಕೂಡಿರುತ್ತದೆ.

ಈ ಸಮಗ್ರವೇದವನ್ನು ವೇದಪುರುಷನೆಂದು ಕಲ್ಪಿಸಿ, ವೇದಪುರುಷನ ಆರು ಅಂಗಗಳನ್ನು ಈ ಕೆಳಕಂಡಂತೆ ನಿರ್ಣಯಿಸಿದ್ದಾರೆ.

1) ಪಾದ - ಛಂದಸ್ಸು (ಪದ್ಯರಚನಾಕ್ರಮ)
2) ಹಸ್ತ - ಕಲ್ಪ (ಯಜ್ಞಯಾಗಾದಿಗಳು)
3) ಮುಖ - ವ್ಯಾಕರಣ (ಭಾಷಾಶಾಸ್ತ್ರ)
4) ಪ್ರಾಣ - ಶಿಕ್ಷಾ (ಮಂತ್ರಗಳ ಉಚ್ಚಾರಣೆ)
5) ನೇತ್ರ - ಜ್ಯೋತಿಷ (ಗ್ರಹಗಣಿತ)
6) ಶ್ರೋತ್ರ - ನಿರುಕ್ತ (ಪದಗಳಶಬ್ದ ಅರ್ಥ)

ಈ ಷಡಂಗವೇದಪುರುಷನಲ್ಲಿ ಜ್ಯೋತಿಷವು ನೇತ್ರ ಸ್ವರೂಪದ್ದಾಗಿದೆ.

ವೇದಪುರುಷನ ದಿವ್ಯಪ್ರಕಾಶಮಯವಾದ ಜ್ಞಾನಚಕ್ಷುಃ ಸ್ವರೂಪವಾದ ಮತ್ತು ಜಗತ್ತಿಗೆ ಪ್ರಕಾಶವನ್ನು ಪ್ರಸರಿಸುವ ಶಾಸ್ತ್ರವು ಜ್ಯೋತಿಷಶಾಸ್ತ್ರ.

ಅಪ್ರತ್ಯಕ್ಷಾಣಿ ಶಾಸ್ತ್ರಾಣಿ ವಿವಾದಾಸ್ತೇಷು ಕೇವಲಮ್ |
ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿಣೌ||
ವಿಫಲಾನಿ ಹಿ ಶಾಸ್ತ್ರಾಣಿ ವಿವಾದಾಯ ಚ ಕೇವಲಮ್ |
ಸಫಲಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿಣೌ ||



ಸಿದ್ಧಾಂತಿ :

**- ಕೆ. ಜಿ. ಪುಟ್ಟಹೊನ್ನಯ್ಯ**

ಜ್ಯೋತಿರ್ವಿದ್ಯಾವಿಭೂಷಣ, ಜ್ಯೋತಿರ್ಗಣಿತವಿಶಾರದ

ತ್ರಿಸ್ಕಂದ ಜ್ಯೋತಿರ್ವಿದ್ವಾನ್, ಪಂಚಾಂಗಕರ್ತ

ನಂ. ಎಫ್ ೩೩, ಹೊಸ ಸಯ್ಯಾಜಿರಾವ್ ರಸ್ತೆ, ಪಿಲ್ಲೆ ಮೊಹಲ್ಲ, ಮೈಸೂರು - 04

☎ : 2441313

ಜ್ಯೋತಿಷಶಾಸ್ತ್ರ ಹೊರತು ಅನ್ಯಶಾಸ್ತ್ರಗಳು ಕೇವಲ ವಿವಾದಕ್ಕೆ ಇವೆ. ಜ್ಯೋತಿಷ ಶಾಸ್ತ್ರವು ಪ್ರತ್ಯಕ್ಷಪ್ರಮಾಣವಾದುದು. ಇದಕ್ಕೆ ನಿತ್ಯ ಸೂರ್ಯಚಂದ್ರರೇ ಸಾಕ್ಷಿ.

ಇತರ ಶಾಸ್ತ್ರಗಳು ಕಾಲಕ್ಷೇಪಕ್ಕಾಗಿ ಇವೆ. ಅವುಗಳ ಸಿದ್ಧಾಂತ ಫಲವು ಸಂಶಯಾಸ್ಪದವಾಗಿದೆ. ಆದರೆ ಜ್ಯೋತಿಷ್ಯ ಮತ್ತು ಈ ಶಾಸ್ತ್ರದ ಅಂಗಗಳಾದ, ವೈದ್ಯಸಾಮುದ್ರಿಕ, ಯಂತ್ರಮಂತ್ರ ಶಾಸ್ತ್ರ ತಮ್ಮ ವಿದ್ಯಾಶಕ್ತಿಯಿಂದ ಜನರಿಗೆ ಉತ್ತಮಫಲ ನೀಡುತ್ತಿವೆ ಎಂಬುದಾಗಿ ಶಾಸ್ತ್ರರಚನಾಕಾರರು ತಿಳಿಸಿದ್ದಾರೆ.

*ಯಥಾಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ |*
*ತದ್ವತ್‌ವೇದಾಂಗಶಾಸ್ತ್ರಾಣಿ ಜ್ಯೋತಿಷಂ ಮೂರ್ಧ್ನಿ ಸಂಸ್ಥಿತಮ್ ||*

ನವಿಲಿನ ತಲೆಯ ಜುಟ್ಟು, ಸರ್ಪಗಳ ಹೆಡೆಯ ಮಾಣಿಕ್ಯವು ಹೇಗೆ ಪ್ರಧಾನವೋ ಹಾಗೆ ಸಕಲವೇದಾಂಗಸ್ವರೂಪಿಯಾದ ವೇದಪುರುಷನಿಗೆ ಶಿಖಾಮಣಿಯಂತೆ ಈ ಜ್ಯೋತಿಷಶಾಸ್ತ್ರವು ಶಿರಸ್ಥಾನದಲ್ಲಿದ್ದು, "ವೇದಾಂಗಜ್ಯೋತಿಷ"ವೆಂದು ಕರೆಯಲ್ಪಟ್ಟಿದೆ.

ಜಗತ್ತಿನ ಸಕಲ ಚರಾಚರಗಳ ಗತಿವಿಧಾನಗಳನ್ನು ಗುರ್ತಿಸಲು ನಡೆದ ಸಂಶೋಧನೆಯ ಅದ್ಭುತ ಫಲವೇ ಜ್ಯೋತಿಷಶಾಸ್ತ್ರ. ನಮ್ಮ ಈ ಪೃಥ್ವಿ, ಅದರೊಂದಿಗಿರುವ ಗ್ರಹಗಳು, ನಕ್ಷತ್ರಗಳು, ಅವುಗಳ ಗತಿವಿಧಾನಗಳು, ಆಯಾ ಗ್ರಹಗಳ ಚಲನೆಯಿಂದ ಉಂಟಾಗುವ ಸ್ಥಿತ್ಯಂತರಗಳು, ದೈಹಿಕ-ಮಾನಸಿಕ ಪ್ರವೃತ್ತಿಗಳ ಸೂಕ್ಷ್ಮವಾದ ಅಧ್ಯಯನವೇ ಜ್ಯೋತಿಷಶಾಸ್ತ್ರವೆನಿಸಿದೆ.

*ವೇದಸ್ಯ ನಿರ್ಮಲಂ ಚಕ್ಷುಃ ಜ್ಯೋತಿಷ್ಶಾಸ್ತ್ರಮನುತ್ತಮಮ್*

ಕಿವಿ, ಮೂಗು ಇತ್ಯಾದಿ ಅವಯವಗಳಿದ್ದಾಗ್ಯೂ, ನೇತ್ರಹೀನನು ಜೀವನದಲ್ಲಿ ಪೂರ್ಣಯಶಸ್ಸು ಪಡೆಯುವುದು ದುಸ್ತರವಾಗುವಂತೆ, ಜ್ಯೋತಿಷ್ಶಾಸ್ತ್ರ ಸಹಾಯವಿಲ್ಲದೆ ಪ್ರಪಂಚದ ಸುಖಜ್ಞಾನಸಾಧನೆ ಕಠಿಣವಾಗುವುದೆಂದು ಶಾಸ್ತ್ರಕಾರರ ಉಕ್ತಿಯಾಗಿದೆ.

ಪೂರ್ವಜನ್ಮದ ಸಂಚಿತ, ಇಹಜನ್ಮದ ಪ್ರಾರಬ್ಧ, ಪರಜನ್ಮದ ಆಗಾಮಿ ಈ ಕರ್ಮತ್ರಯಗಳಿಂದ ಉಂಟಾಗಬಹುದಾದ ಫಲಗಳ ಅನುಭವಕಾಲವನ್ನು ತಿಳಿಯುವುದು, ಪ್ರತಿಯೊಂದು ಜೀವಿಯ ಜನನಮರಣಪರ್ಯಂತರ ಆಚರಿಸುವ ಕರ್ಮಗಳಿಗೆ ಶುಭಾಶುಭಕಾಲವನ್ನು ತಿಳಿಸಿ ಮಾರ್ಗದರ್ಶನ ನೀಡುವ ನಿತ್ಯೋಪಯೋಗಿ ಶಾಸ್ತ್ರವಾಗಿದೆ.

ಜ್ಯೋತಿಷ್ಯಶಾಸ್ತ್ರದಲ್ಲಿ, ಖಗೋಳಶಾಸ್ತ್ರ, ಭೌತಶಾಸ್ತ್ರ, ಗಣಿತ ಶಾಸ್ತ್ರಗಳ ಬಳಕೆ ಇರುವ ಕಾರಣ ಈ ಶಾಸ್ತ್ರವನ್ನು "ಜ್ಯೋತಿರ್ವಿಜ್ಞಾನ'ವೆಂದು ಕರೆದಿದ್ದಾರೆ. ಅಲ್ಲದೆ ಧರ್ಮಶಾಸ್ತ್ರ ರೀತ್ಯಾ ಆಚರಿಸಬೇಕಾದ ಕಾರ್ಯಗಳು, ದುಷ್ಫಲನಿವಾರಣೆಗಾಗಿ, ಆಗಮಶಾಸ್ತ್ರರೀತ್ಯಾ ಆಚರಿಸುವ ಶಾಂತಿಕಾರ್ಯಗಳಿಗೆ ಶುಭಕಾಲನಿರ್ಣಯ ಮಾಡಿ, ಮಾರ್ಗದರ್ಶನ ನೀಡುವ ಶಾಸ್ತ್ರವೆನಿಸಿದೆ.

ಸೂರ್ಯನು ತನ್ನ ಶಾಖದಿಂದ ಪ್ರಕೃತಿ ಮತ್ತು ಮಾನವನ ಮೇಲೆ ಸತ್ಪರಿಣಾಮಕಾರಿಯಾಗಿದ್ದಾನೆ. ವೈದ್ಯಕೀಯವಾಗಿ ಸೂರ್ಯನ ಶಾಖ ದೇಹಕ್ಕೆ ಒಳ್ಳೆಯದು. ಸೂರ್ಯನು ಪ್ರಕೃತಿಗೆ ಆರೋಗ್ಯಕಾರಣನು. ರವಿ ಇಲ್ಲದೆ ಜಗತ್ತಿಲ್ಲ. ಸೂರ್ಯ ರಶ್ಮಿಯು

ಭೂಮಿಯ ಎಲ್ಲ ಜೀವ-ಸಸ್ಯರಾಶಿಗೆ ಅತ್ಯವಶ್ಯಕ. ಶಾಖವಿಲ್ಲದಿದ್ದರೆ ಎಲ್ಲ ನಶ್ವರ. ಆದ್ದರಿಂದ ವೇದದಲ್ಲಿ ಸೂರ್ಯನನ್ನು *"ಸೂರ್ಯ ಆತ್ಮ ಜಗತಃ ತಥ್ಸುಶಶ್ಚ"*. ರವಿಯು ಜಗತ್ತಿನ ಆತ್ಮನೆಂದು ಕೊಂಡಾಡಿದ್ದಾರೆ.

ಚಂದ್ರನು ಮಾನವನ ಮನಸ್ಸಿನ ಮೇಲೆ ಅತೀವ ಪರಿಣಾಮ ಮಾಡುತ್ತಾನೆ. ವೇದವು ಚಂದ್ರನಿಗೆ *"ಚಂದ್ರಮಾ ಮನಸೋ ಜಾತಃ"* ಎಂಬುದಾಗಿ ಚಂದ್ರನು ಮನಸ್ಸಿನಲ್ಲಿ ಪ್ರತಿಪಾದಿಸುತ್ತಾನೆಂದು ತಿಳಿಸಿದೆ. ಸೂರ್ಯಚಂದ್ರರ ಪ್ರಭಾವವು ಪ್ರಕೃತಿಯಲ್ಲಿ ಕಾಣುವ ಎಲ್ಲದರ ಮೇಲೂ ವ್ಯಾಪಿಸಿದೆ ಎಂಬ ಅಂಶ ಸತ್ಯ. ಇದೇ ರೀತಿಯಲ್ಲಿ ಇತರ ಗ್ರಹಗಳೂ ಸಹ ಮಾನವನ ಮೇಲೆ ಪರಿಣಾಮ ಬೀರುವುದು ಖಚಿತವೆಂಬುದಾಗಿ ಶಾಸ್ತ್ರಕಾರರು ತಿಳಿಸಿದ್ದಾರೆ.

ಜ್ಯೋತಿಷಶಾಸ್ತ್ರವು ಕಾಲನಿರ್ಣಯ ಮಾಡುವಶಾಸ್ತ್ರವಾಗಿದೆ. ಕಾಲವು ಅಚಿಂತ್ಯವಾದದ್ದು. ಇದಕ್ಕೆ ರೂಪವಿಲ್ಲ, ಅವ್ಯಕ್ತವಾಗಿದೆ. ಗುಣತ್ರಯರಹಿತವಾಗಿದೆ. ಅಂತ್ಯವೇ ಇಲ್ಲದ ಕಾಲ ಅನಂತ, ಕಾಲದ ಆರಂಭ ಯಾವಾಗ ಉಂಟಾಯಿತು, ಕಾಲಕ್ಕೆ ನಾಶ ಉಂಟೆ ಎಂಬುದು ನಮ್ಮ ಆಲೋಚನೆಗೆ ನಿಲುಕದ ಸಂಗತಿ. ಕಾಲವು ಸಮಸ್ತಪ್ರಪಂಚದ ಎಲ್ಲ ಕಾರ್ಯಗಳಿಗೂ ಆಧಾರವಾಗಿದೆ. ಬ್ರಹ್ಮ ಲಕ್ಷಣಮುಕ್ತವಾಗಿದೆ, ಶಾಸ್ತ್ರಜ್ಞರು ಕಾಲವನ್ನು ಬ್ರಹ್ಮವೆಂದೂ, ಕಾಲಪುರುಷನೆಂದೂ ಕರೆದಿದ್ದಾರೆ.

ಕಾಲದ ಪ್ರಾರಂಭವು ಯಾವಾಗ ಉಂಟಾಯಿತು? ಕಾಲವನ್ನು ಅಳೆಯಲು ಸಾಧ್ಯವೆ? ಖಂಡಿತ ಸಾಧ್ಯವಿದೆ. ಕಾಲಕ್ಕೂ ಮಾನವನ್ನು ನಿರ್ಣಯಮಾಡಿ, ಕಂಡುಹಿಡಿದ ಹಿರಿಮೆ ನಮ್ಮ ಪೂರ್ವಜರಿಗೆ ಸಲ್ಲುತ್ತದೆ. ಕಾಲವು 2 ವಿಧ. ಸ್ಥೂಲಕಾಲ ಮತ್ತು ಸೂಕ್ಷ್ಮಕಾಲ.

ಲೌಕಿಕ ಕಾಲವೇ ಸ್ಥೂಲಕಾಲ, ಆಧ್ಯಾತ್ಮಿಕ ಕಾಲವೇ ಸೂಕ್ಷ್ಮಕಾಲ. ಆಧ್ಯಾತ್ಮಿಕ ಕಾಲವು ನಮ್ಮ ನಿರ್ಣಯಕ್ಕೆ ಸಿಗುವಂತಹುದಲ್ಲ. ಹೀಗಾಗಿ ಸ್ಥೂಲಕಾಲವನ್ನು ಮಾತ್ರ ನಿರ್ಣಯಮಾಡಿ, ನಿತ್ಯಜೀವನವ್ಯವಹಾರಗಳಲ್ಲಿ ಉಪಯೋಗಿಸಲಾಗುತ್ತಿದೆ.

ಭಾರತೀಯ ಜ್ಯೋತಿಷಶಾಸ್ತ್ರಜ್ಞರು, ಸೂಕ್ಷ್ಮಾತಿಸೂಕ್ಷ್ಮಕಾಲದಿಂದ ಪ್ರಾರಂಭಿಸಿ, ಮಹಾಕ್ರಮದವರೆಗೂ ಎಣಿಸಬಹುದಾದ ಕಾಲವನ್ನು ನಿರ್ಣಯಮಾಡಿದ್ದಾರೆ. ಭಾರತೀಯ ಜ್ಯೋತಿಷತಜ್ಞರು, ಅಸ್ತಿತ್ವಕಾಲ ಹೆಚ್ಚಾಗಿರುವ ಸೂರ್ಯಚಂದ್ರಾದಿಗ್ರಹಗಳನ್ನು ಆಧಾರವಾಗಿಟ್ಟುಕೊಂಡರು. ಕಾರಣ ಇವುಗಳ ಚಲನೆಯು ಒಂದು ನಿಶ್ಚಿತನಿಯಮಕ್ಕೆ ಒಳಪಟ್ಟಿರುತ್ತೆ. ಸೂರ್ಯನನ್ನು ಕೇಂದ್ರವಾಗಿಟ್ಟುಕೊಂಡು ಅದನ್ನು ಭೂಕೇಂದ್ರದ ಲೆಕ್ಕಕ್ಕೆ ಹೊಂದಿಸಿಕೊಂಡು, ಗ್ರಹಗಳ ಚಲನೆಯ ಕಾಲಗಳನ್ನು ಗಣಿತಸೂತ್ರಗಳ ಮೂಲಕ ತಿಳಿಯುವ ವಿಧಾನವನ್ನು ಸ್ಪಷ್ಟವಾಗಿ ಜ್ಯೋತಿರ್ಗಣಿತಜ್ಞರು ತಿಳಿಸಿರುತ್ತಾರೆ.

ಮಾನವನು ಮೂಲಭೂತವಾಗಿ ಪಂಚಭೂತಾತ್ಮಕ ಶರೀರಿಯಾಗಿದ್ದಾನೆ. ಬ್ರಹ್ಮಾಂಡದಲ್ಲಿ ಗ್ರಹಗಳ ಪಂಚಭೂತಾತ್ಮಕ ಪ್ರಭಾವವು ಆವರಿಸಿ, ಭೂಮಿಯ ಮೇಲೆ, ಪಂಚಭೂತಾತ್ಮಕ ಸ್ವರೂಪರಾದ ಜೀವಿಗಳ ಮೇಲೆ, ಅಂದರೆ ಬ್ರಹ್ಮಾಂಡದ ಮೇಲೆ ತಮ್ಮದೇ ಆದ ಪ್ರಭಾವವನ್ನು ಅವುಗಳ ಕ್ರಮಬದ್ಧ ಚಲನೆಯಿಂದ ಬೀರುತ್ತವೆ.

ಕಾಲನಿರ್ಣಯಶಾಸ್ತ್ರವಾದ ಜ್ಯೋತಿಷಶಾಸ್ತ್ರದ ಆಧಾರದಿಂದ ಗ್ರಹಗಳ ಚಲನೆಯ-ಕಾಲಗಳನ್ನು ಸೂಕ್ಷ್ಮವಾಗಿ ತಿಳಿದು, ಗ್ರಹಸ್ಥಿತಿಯನ್ನು ರಾಶಿಚಕ್ರದಲ್ಲಿ ಅವಲೋಕಿಸಿ, ಅವುಗಳ ಪ್ರಭಾವವನ್ನು ವಿವರಿಸಲು ಜ್ಯೋತಿರ್ಗಣಿತಜ್ಞರು ನಾನಾ ಸೂತ್ರಗಳನ್ನು ತಿಳಿಸಿದ್ದಾರೆ.

ಸೂರ್ಯ -ಚಂದ್ರಾದಿಗಳ ಚಲನೆಯ ಆಧಾರದಿಂದ ಕಾಲಗಣನೆ ಮಾಡುವ ವಿಧಾನವನ್ನು ಜ್ಯೋತಿಷಶಾಸ್ತ್ರ ತಿಳಿಸುತ್ತಿದೆ. ಸಂವತ್ಸರ, ಅಯನ, ಋತು, ಮಾಸ, ಪಕ್ಷ, ವಾರಗಳ ಕಾಲನಿರ್ಣಯ, ಸೃಷ್ಟಿಯ ಆರಂಭ. ಪ್ರಸ್ತುತ ಕಾಲಮಾನದ ವಿವರವು ಜ್ಯೋತಿರ್ಗಣಿತದಿಂದ ವ್ಯಕ್ತವಾಗುತ್ತದೆ.

ಕ್ರಿಸ್ತಶಕೆ 2006 ಕ್ಕೆ ಈ ಸೃಷ್ಟಿಯಾಗಿ 1955885106ವರ್ಷಗಳಾಗಿವೆ ಎಂಬುದಾಗಿ ಜ್ಯೋತಿರ್ವಿದ್ವಾಂಸರು ಕಾಲ ನಿರ್ಣಯಿಸಿದ್ದಾರೆ. ಚತುರ್ಯುಗಗಳ ಕಾಲ ಮಾನವನ್ನು ಸಹ ತಿಳಿಸಿ. ಕೃತಯುಗದಲ್ಲಿ ಭಗವಂತನ 3ಅವತಾರಗಳಾದ, ಮತ್ಸ್ಯ, ಕೂರ್ಮ, ವರಾಹ ಅವತಾರಗಳು, ತ್ರೇತಾಯುಗದಲ್ಲಿ ನರಸಿಂಹ, ವಾಮನ, ಪರುಶುರಾಮ, ಶ್ರೀ ರಾಮ ಅವತಾರಗಳು, ದ್ವಾಪರಯುಗದಲ್ಲಿ ಶ್ರೀ ಕೃಷ್ಣಾವತಾರವು, ಪ್ರಸ್ತುತ ಕಲಿಯುಗದಲ್ಲಿ ಬೌದ್ಧಾವತಾರವೂ ಆಗಿದೆ.

ಇಂದಿಗೂ ಸಹ, ಭರತಖಂಡದಲ್ಲಿ ಈ ಎಲ್ಲ ಅವತಾರಗಳ ಜಯಂತಿಗಳ ಆಚರಣೆ ಇದೆ. ಯುಗಯುಗಾಂತರಗಳಲ್ಲಿ ಸಂಭವಿಸಿದ ಈ ಅವತಾರಗಳ ಆಚರಣೆಯ ಕಾಲವನ್ನು ಅರಿಯಲು ಜ್ಯೋತಿರ್ಗಣಿತದಿಂದ ಮಾತ್ರ ಸಾಧ್ಯ. ಅವತಾರಗಳ ಮಾಸ , ಪಕ್ಷ, ತಿಥಿ, ನಕ್ಷತ್ರಗಳು ಸಂಧಿಸುವ ಕಾಲವನ್ನು ಪ್ರತಿವರ್ಷ ತಿಳಿದು, ಈ ರೀತಿಯ ಜಯಂತಿ, ಹಬ್ಬಗಳು, ಇನ್ನಿತರ ಕಾರ್ಯಗಳನ್ನು ಧರ್ಮಶಾಸ್ತ್ರೋಕ್ತ ರೀತಿಯಲ್ಲಿ ಆಚರಿಸಲು ಸೂಕ್ತ ಕಾಲವನ್ನು ಜ್ಯೋತಿರ್ಗಣಿತವು ಆಯಾಯ ಅವಧಿಯಲ್ಲಿ ತಿಳಿಸುವ ಮೂಲಕ ಮಾರ್ಗದರ್ಶನ ನೀಡುತ್ತ ಬಂದಿರುತ್ತದೆ.



## ನಿಂದನೆ

ನಿಂದನೆಯನ್ನು ಮಾಡುವುದು ಪತನಕ್ಕೆ ಹಾದಿ. "ಎಲ್ಲರಲ್ಲಿಯೂ ಪರಮಾತ್ಮ ಇದ್ದಾನೆ. ಎಲ್ಲೆಲ್ಲೂ ಇದ್ದಾನೆ" ಎಂದು ಸಾರಿ ಹೇಳುತ್ತದೆ ನಮ್ಮ ಸನಾತನಧರ್ಮ. ಹೀಗಿರುವಾಗ ನಿಂದೆಗೆ ಅವಕಾಶವೆಲ್ಲಿದೆ? ಇತರರನ್ನು ನಿಂದಿಸುವುದಾಗಿ ತಿಳಿದವರು ನಿಜಕ್ಕೂ ತಮ್ಮನ್ನೇ ನಿಂದಿಸಿಕೊಳ್ಳುತ್ತಾರೆ! ಪರನಿಂದೆ ಮಾಡುವವನು ಮೃತ್ಯುವನ್ನು ಮೈಮೇಲೆ ಎಳೆದುಕೊಳ್ಳುತ್ತಾನೆ.

ನಿಂದಿಸುವವನಿಗೆ ಎಲ್ಲದರಲ್ಲಿಯೂ ತಪ್ಪೇ ಕಾಣುತ್ತದೆ. ಇಂತಹವರು ಬಹುಬೇಗ ಪತನ ಹೊಂದುತ್ತಾರೆ ಎಂದು ಅತ್ಯಂತ ಪ್ರಾಚೀನ ಸಾಹಿತ್ಯ ಋಗ್ವೇದ ತಿಳಿಸಿದೆ.

# ನಮನ ಶಿವಸ್ವರೂಪರಿಗೆ



**ಕಾಸರವಳ್ಳಿ ಕೃಷ್ಣಮೂರ್ತಿ,**
Retried Principal
M.A.,(Mys), M.A.,(BHU),
M.Ed.,(Karnataka).
B.A., (Hons). D.Ed., (Basic),
H. S., (Dip.),
P.G.D.T.ENG. (DIEFL),
R.B.P.,(DBHPS)

# 1299, 'VASUSHREE',
6th Cross, 3rd Main,
Vivekananda Nagar,
Mysore - 570 023
☎ : 0821-2560588

ಪರಮೇಶ್ವರನ
ಪಂಚಮುಖಗಳಿಂದ
ಹೊರ ಹೊಮ್ಮಿದರು
ಪಂಚಾಚಾರ್ಯರವರೆಂದು
ಭಾವಿಪರು ನಂಬುವರು
ಭಕ್ತಿಭಾವಪರರು
ನಂಬಿಕೆಯನೇಕೆ ಭಾವನೆಯನೇಕೆ
ಹೀಗಳೆಯಬೇಕು
ನಂಬದವರು
ನಂಬುವವರ ಭಾವಿಪರ
ಶ್ರದ್ಧೆಯನು ಪ್ರಶ್ನಿಸಲು
ಇವರು ಯಾರು?

ಋಷಿಸಮಾನರು ಅವರು
ಅಲ್ಲಲ್ಲ, ಋಷಿಗಳೇ ಆಗಿಹರು
ಸನ್ಯಾಸಿಗಳು ಅವರಲ್ಲ
ಸನ್ಯಾಸಚಿಹ್ನೆಗಳಿಲ್ಲ
ಕೇಶಮುಂಡನವಿಲ್ಲ
ಕಾಷಾಯವಸ್ತ್ರವಿಲ್ಲ
'ನೇತಿ-ನೇತಿ' ಜಪವಿಲ್ಲ
ಸಂಸಾರಸನ್ಯಾಸಿಗಳು ಅವರು
ವಿರಕ್ತರು ಪರಮಪವಿತ್ರರು
ಸ್ಥಾವರ-ಜಂಗಮ ಸಾಮರಸ್ಯಪರರು.

ಸಂತರವರು ಸಾಧುಗಳು
ಮಹಾತ್ಮರವರು ಆಚಾರ್ಯರು
ಆರಾಧ್ಯರಿಗೂ ಆರಾಧ್ಯರು
ಬ್ರಹ್ಮವನ್ನರಿತವರು
ಮಹಾಬ್ರಾಹ್ಮಣರು
ವೀರಭದ್ರಾನುಜರು
ವರವೀರಶೈವರು
ಅವರವತರಿಸಿಹುದು
ಲೋಕಕಲ್ಯಾಣಕ್ಕೆ;
ಜ್ಞಾನಪೀಯೂಷ
ಧರೆಯಲ್ಲಿ ಹರಿಸಲಿಕ್ಕೆ

ಅವರ ನುಡಿಗಳವು
ಅಮೃತವಾಣಿ
ಅವರ ನಡೆಯದು
ಶುದ್ಧ ಬಹುಶುದ್ಧ
ಯಾವುದೂ ಅಲ್ಲ ಅಬದ್ಧ
ಅವರ ನಡೆ ನುಡಿ ವೇದನಿಷ್ಠ
ಅದು ಬಹು ಸುಸ್ಪಷ್ಟ.

ನಮನ ನಮನ ಶಿವಸ್ವರೂಪರಿಗೆ
ಭವರೋಗವೈದ್ಯರಿಗೆ.
ಹರಸಲವರು ಹುಲುಮನುಜರನು
ನೀಡಿ ದಿವ್ಯಜ್ಞಾನವನು.

* * *

# ಸಜ್ಜನಿಕೆಯ ಸಾಕಾರಮೂರ್ತಿ



ಶ್ರೀಮಾನ್ ಆರ್. ಕುಮಾರಾರಾಧ್ಯರು ಚಿನ್ನಹಳ್ಳಿ ಗುರು ಮಠದ ಗುರುವಾಗಿದ್ದ ಶ್ರೀ ರೇವಣಾರಾಧ್ಯ ಮತ್ತು ಶ್ರೀಮತಿ ಬಸವಾಜಮ್ಮನವರ ಮೊದಲ ಗಂಡು ಮಗನಾಗಿ ಜನಿಸಿದರು. ಇವರ ವಿದ್ಯಾಭ್ಯಾಸವು ಗುರುಮಠದಲ್ಲೇ ನಡೆದಿತ್ತು. ಇವರು ಚಿಕ್ಕಂದಿನಿಂದಲೂ ಮುಗ್ಧತೆ, ಪ್ರೀತಿ, ಆತ್ಮೀಯತೆಯಿಂದ ಕೂಡಿದ ಸ್ನೇಹಶೀಲ ಸ್ವಭಾವವನ್ನು ಹೊಂದಿದ್ದವರು. ಅಂದು ಕೊಂಡದ್ದನ್ನು ತಾವು ಮಾಡಿ ತೋರಿಸುವ ಛಲವಂತರು. ಆಚಾರ ವಿಚಾರಶೀಲತೆಯನ್ನು ಬೆಳೆಸಿಕೊಂಡವರಾಗಿದ್ದರು. ಆಕರ್ಷಿಸುವ ಒಳ್ಳೆಯ ವ್ಯಕ್ತಿತ್ವ ಹಾಗೂ ಕ್ರಿಯಾಶೀಲಶಕ್ತಿತ್ವ ಅವರದು. ಇದರಿಂದಾಗಿ ತಮ್ಮಲ್ಲಿಗೆ ಬಂದಂಥ ಜನರಿಗೆ ಉತ್ತಮ ಮಾರ್ಗದರ್ಶಕರಾಗಿದ್ದರು. ಆದ್ದರಿಂದ ಇವರಲ್ಲಿ ಸಲಹೆ ಸಹಕಾರಗಳನ್ನು ಆ ಪ್ರದೇಶದ ಜನರು ಪಡೆದುಕೊಳ್ಳುತ್ತಲಿದ್ದರು. ಪ್ರಾರಂಭದಲ್ಲಿ ಇವರು ಜೀವನವೃತ್ತಿಗೆ ಸ್ಟಾಂಪ್‌ವೆಂಡರ್ ಆಗಿದ್ದರು. ಕಾಗದಪತ್ರಗಳ ಬರವಣಿಗೆಯೂ ಇವರ ವೃತ್ತಿಯಾಗಿತ್ತು. ಇದರ ಜೊತೆಗೆ ಜ್ಯೋತಿಷ್ಯ, ಪೌರೋಹಿತ್ಯ ಮತ್ತು ವ್ಯವಸಾಯವು ಸಹ ರೂಢಿಯಲ್ಲಿತ್ತು. ಪ್ರವೃತ್ತಿ ಎಂದರೆ ಸಮಾಜ ಸೇವೆ. ತಮ್ಮಲ್ಲಿಗೆ ನೊಂದು ಬಂದವರಿಗೆ ನೆಮ್ಮದಿಯ ಉತ್ತಮ ಮಾರ್ಗವನ್ನು ತೋರಿಸುವ ಬೆಳವಣಿಗೆಯನ್ನು ಹೊಂದಿದ್ದವರಾಗಿದ್ದರು. ಅದೆಂದರೆ ಗ್ರಾಮಾಂತರದಲ್ಲಿನ ಸಭೆ ನ್ಯಾಯನಿಖರತೆಯಲ್ಲಿ ಭಾಗವಹಿಸಿ ತಮಗೆ ತಿಳಿದ ನ್ಯಾಯವನ್ನು ಪಕ್ಷಪಾತವಿಲ್ಲದೆ ಅವರಿವರೆಂದು ಪರಿಗಣಿಸದೆ ವ್ಯಕ್ತಪಡಿಸಿ ಅದಕ್ಕೆ ಮುಂದಿನ ಕ್ರಮಗಳನ್ನು ಸೂಚಿಸುವುದು ಮತ್ತು ಸರಕಾರದಲ್ಲಿ ಆಗಬೇಕಾದ ಕೆಲಸಗಳಲ್ಲಿ ತಾವು ಬಂದು ಅವರ ಕೆಲಸ ಸುಗಮವಾಗಿ ಮಾಡಿಸಿಕೊಡುವುದು ಸಹ ಇವರಲ್ಲಿ ಇತ್ತು. ಆದ್ದರಿಂದ ತಾಲ್ಲೋಕಿನಾದ್ಯಂತ ಜನಆಭಾರಿಯಾಗಿದ್ದರು. ಇವರ ಮುಂದಾಳತ್ವದಲ್ಲಿ ಹೊರಟರೆ ಕೆಲಸ ನೀರು ಕುಡಿದಂತೆ, ಹೂವಿನ ಹಾರ ಎತ್ತಿದಂತೆ ಕೆಲಸ ಕಾರ್ಯಗಳು ಸಾಗುತ್ತಿದ್ದವು.



**- ದಿ|| ಕಂದಾಗಾಲ ಗುರುದೇವಾರಾಧ್ಯ**

(ನಿ.) ನ್ಯಾಯಾಂಗ ಇಲಾಖಾ ನೌಕರರು ಮತ್ತು ಪುರೋಹಿತರು,
ಮಾಜಿ ಕಾರ್ಯದರ್ಶಿಗಳು,
ಆರಾಧ್ಯಮಹಾ ಸಭಾ, ಮೈಸೂರು.
ದೂ. : 2431442.

ಆರಾಧ್ಯರ ಮನಸ್ಸು, ಮಾತು ಎರಡರಲ್ಲೂ ಸ್ಥಿರತೆಯುಳ್ಳವರಾಗಿದ್ದರು. ಎಂತಹ ಸಂದರ್ಭದಲ್ಲೂ ಸಹನೆ, ತಾಳ್ಮೆ ಕಳೆದುಕೊಳ್ಳದೆ ಶಾಂತ ಚಿತ್ತರಾಗಿ ಸಮಸ್ಯೆಗಳನ್ನು ಬಿಡಿಸುವ ಸಾಮರ್ಥ್ಯ ಹೊಂದಿದವರು. ಇವರ ಲೌಕಿಕಪ್ರಜ್ಞೆ ಇವರನ್ನು ಆಧ್ಯಾತ್ಮದ ಉತ್ತುಂಗಕ್ಕೆ ಕರೆದೊಯ್ದು, ಮುಂದಿನ ಪೀಳಿಗೆಗೆ ಇವರೊಬ್ಬ ಆದರ್ಶ ಪುರುಷರನ್ನಾಗಿಸುವುದರಲ್ಲಿ ಕಾಣದ ಕೈ ಸಹಕರಿಸಿತ್ತು. ಇಂತಹ ಆನಂದವೇ ಅವರ ಬಾಳಿನ ಗುರಿಯಾಗಿತ್ತು. ಒಳ್ಳೆಯ ತನದ ಶ್ರೀಮಂತಿಕೆಯನ್ನು ಹೊಂದಿದ್ದರು ಆರಾಧ್ಯರು. ಸಜ್ಜನಿಕೆಯ ಸಾಕಾರ ಮೂರ್ತಿಯಾಗಿ ಬೆಳೆದಿದ್ದರು.

ಮೈಸೂರಿನ ರಾಜಮನೆತನದಲ್ಲಿ ಇವರಿಗೆ ಬಹಳ ಪರಿಚಯ ಮತ್ತು ಗೌರವವಿತ್ತು. ಅರಸರು ಮನ್ನಣೆಯನ್ನು ಕೊಡುತ್ತಿದ್ದರು. ಮಹಾರಾಜರಿಂದ ಆಗಬೇಕಾದ ಕೆಲಸಗಳನ್ನು ಮಾಡಿಸಿರುತ್ತಾರೆ. ಕೆಂಡಗಣ್ಣಸ್ವಾಮಿ ಗದ್ದಿಗೆಗೆ ಮತ್ತು ದೇವಸ್ಥಾನಕ್ಕೆ ಮೈಸೂರಿನ ಮಹಾರಾಜರಿಂದ ಅಂದೇ ನವೀಕರಣ ಕೆಲಸ ಮಾಡಿಸಿ ಜನರು ತಿರುಗಾಡಲು ರಸ್ತೆ ಸಹ ಮಾಡಿಸಿರುತ್ತಾರೆ. ದೇವಾಲಯಗಳ ಕೆಲಸವೆಂದರೆ ಆರಾಧ್ಯರಿಗೆ ಬಲು ಆಸಕ್ತಿ ಹಾಗಾಗಿ ಆ ಪ್ರದೇಶದ ಬಹುಪಾಲು ದೇವಾಲಯಗಳಿಗೆ ಆಗಮಿಕರಾಗಿ ಸೇವೆ ಮಾಡಿರುತ್ತಾರೆ. ತಾವು ಕರಿಗಳದ ಬೇಚರಾಕ್ ಗ್ರಾಮವಾಗಿದ್ದ ಅಲ್ಲಿನ ಬಸವೇಶ್ವರ ದೇವರನ್ನು ಸುಮಾರು 1930ನೇ ಸಾಲಿನಲ್ಲಿ ಸರಕಾರದಿಂದ ವರ್ಗಾಯಿಸಿ ಮೈಸೂರು - ಮಾನಂದವಾಡಿ ರಸ್ತೆಯಲ್ಲಿ ಕರಿಗಳದ ಕೆಂಗೇಗೌಡ ದಂಪತಿಗಳಿಂದ ದೇವಸ್ಥಾನ ಕಟ್ಟಿಸಲು ಜಾಗ ಪಡೆದುಕೊಂಡು ಶ್ರೀ ಬಸವೇಶ್ವರ ದೇವಸ್ಥಾನ ಕಟ್ಟಿಸಿದ್ದರು. ಅದು ಶಿಥಿಲಗೊಂಡದ್ದರಿಂದ ಇವರ ಮಗ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ಸದರಿ ದೇವಸ್ಥಾನದ ಹೊಸಕಟ್ಟಡ ನಿರ್ಮಿಸಿದರು. ಆಗಿನ ತಹಸೀಲ್‌ದಾರ್ ಶ್ರೀಮಾನ್ ರಂಗಪ್ಪನವರ ಅಧ್ಯಕ್ಷತೆಯಲ್ಲಿ ವೃಷಭಪುರಿ ಮಠದ ಶ್ರೀ ವಿಶ್ವಾರಾಧ್ಯಸ್ವಾಮಿಗಳ ಸಮ್ಮುಖದಲ್ಲಿ, ಆರಾಧ್ಯಮಹಾಸಭಾ ಮೈಸೂರು ಇದರ ಅಧ್ಯಕ್ಷರಾದ ತಳಗವಾದಿ ಶ್ರೀ ಪುಟ್ಟಸೋಮಾರಾಧ್ಯರು ಮುಖ್ಯಅತಿಥಿಗಳಾಗಿಯೂ, ನನ್ನ ಪೌರೋಹಿತ್ಯದಲ್ಲಿ ಕಾರ್ಯವನ್ನು ನೆರವೇರಿಸಿರುತ್ತಾರೆ. ಇವರಿಗೂ ತಂದೆಯ ಗುಣ ಬಂದಿರುವುದು ಸಹಜವಾಗಿದೆ. ಇವರೂ ಸಹ ಸಮಾಜದ ಸೇವೆಯಲ್ಲಿ ನಿರತರಾಗಿ 2001ರಲ್ಲಿ ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಪ್ರಥಮ ಮಹಾಸಮ್ಮೇಳನವನ್ನು ವ್ಯವಸ್ಥೆ ಮಾಡಿ ಅದರಲ್ಲಿ ಆರಾಧ್ಯರ ಕೈಪಿಡಿ ಬಿಡುಗಡೆಗೊಳಿಸಿದರು. ಹಾಗೆಯೇ 2002ರಲ್ಲಿ ಮಂಡ್ಯದಲ್ಲಿ ಆರಾಧ್ಯರ ಎರಡನೇ ಸಮ್ಮೇಳನವನ್ನು ಮತ್ತು ಕೈಪಿಡಿಯನ್ನು ಶ್ರೀ ಕೃಷ್ಣರಾಜಒಡೆಯರ್ ಸಭಾಂಗಣದಲ್ಲಿ ಬಿಡುಗಡೆ ಮಾಡಿಸಿರುತ್ತಾರೆ. ಇವರು ಸ್ನೇಹ ಜೀವಿ ಎಂಬುದಕ್ಕೆ ಬಾಲ್ಯದಿಂದಲೂ ಹರಂಬಳ್ಳಿ ರೇಣುಕಾರಾಧ್ಯರು, ಸ್ನೇಹಿತರು ಮತ್ತು ಬಂಧುಗಳು ಅಷ್ಟೇ ಅಲ್ಲ, ಇಂದೂ ಸಹ ಅವರ ಸ್ನೇಹ ಗಾಢವಾಗಿ ಇರುತ್ತದೆ. ಇವರು ನಿವೃತ್ತಿಯ ನಂತರ ಪತ್ರಕರ್ತರಾಗಿ ನಾಡಿಗೆ ಎರಡು ಪತ್ರಿಕೆಗಳನ್ನು ಕೊಟ್ಟಿದ್ದಾರೆ. "ಮುನಿಸಂದೇಶ" ಮತ್ತು "ಆರಾಧ್ಯಸಂಪದ" ಪತ್ರಿಕೆಗಳು ಇವು ಆಧ್ಯಾತ್ಮಿಕ ನೈತಿಕ ಹಾಗೂ ಕೌಟುಂಬಿಕ ವಿಚಾರಗಳನ್ನು ಒಳಗೊಂಡು ಉತ್ತಮವಾಗಿದ್ದವು.

ಶ್ರೀ ಕುಮಾರಾರಾಧ್ಯರ ಜೀವನಾನುಭವ ಚಾಕಚಕ್ಯತೆ, ಜ್ಞಾನ, ವಿನಯ, ಉತ್ತಮ ನಡವಳಿಕೆ, ವ್ಯವಹಾರ ದಕ್ಷತೆಗಳನ್ನು ಕಂಡಂತಹ ಆಗಿನ ಸರಕಾರ ಹೆಚ್. ಡಿ. ಕೋಟೆ ತಾಲ್ಲೂಕು,

ಹಂಪಾಪುರ ಹೋಬಳಿಯಲ್ಲಿ ಒಂದು ವಿಲೇಜ್ ಮುನ್ಸೀಫ್ ಕೋರ್ಟ್ ಮುಂಜೂರು ಮಾಡಿ ಅದಕ್ಕೆ ಜಿನ್ನಹಳ್ಳಿ ಆರಾಧ್ಯರನ್ನೇ ನ್ಯಾಯಾಧೀಶರನ್ನಾಗಿ ನೇಮಿಸಿತು. ಆರಾಧ್ಯರು ಆ ಹುದ್ದೆಯಲ್ಲಿ ಸುಮಾರು ಹತ್ತು ವರ್ಷಗಳು ಕೆಲಸ ನಿರ್ವಹಿಸಿರುತ್ತಾರೆ. ಇವರು ಆ ವೇಳೆಗಾಗಲೇ ತಪಸ್ಸಿಗಿಂತ ಸತ್ಯವೇ ದೊಡ್ಡದು ಎಂದು ತಿಳಿದಿದ್ದರು. ಸತ್ಯ ಬಿಟ್ಟವರಲ್ಲ ಸತ್ಯವನ್ನು ತಮ್ಮ ಜೀವನದಲ್ಲಿ ನಿಷ್ಠೆಯಿಂದ ಪರಿಪಾಲಿಸಿದವರು. ತಮ್ಮ ಬದುಕಿನಲ್ಲಿ ಸಮಾಧಾನ, ಸಂತೃಪ್ತಿಯನ್ನು ಅನುಭವಿಸಿದವರೆಂದು ಹಿರಿಯರು ಹೇಳುತ್ತಿದ್ದರು. ಆದ್ದರಿಂದ ತಮಗೆ ಸರಕಾರ ನೀಡಿದ ಕೆಲಸವನ್ನು ಪ್ರಾಮಾಣಿಕವಾಗಿ ನಿರ್ವಹಿಸಿ ಸರಕಾರಕ್ಕೆ ಘನತೆಯನ್ನು ತಂದುಕೊಟ್ಟರು. ಇವರ ಆಡಳಿತದಲ್ಲಿ ನೆಮ್ಮದಿಯನ್ನು ಜನರು ಅನುಭವಿಸಿದರು. ಆದ್ದರಿಂದ ಇವರನ್ನು ಆಶಿಸಿ ಇವರ ಕಾರ್ಯದಕ್ಷತೆಯನ್ನು ಮೆಚ್ಚಿಹೊಗಳಿದರು. ಇವರು ಸರ್ವದಾ ಕ್ರಿಯಾಶೀಲ ವ್ಯಕ್ತಿತ್ವ ಹೊಂದಿದವರು ಹಾಗೂ ಅಧ್ಯಾತ್ಮ ಸಂಪತ್ತನ್ನು ಬೆಳೆಸಿಕೊಂಡವರು. ಇವರಲ್ಲಿ ವೈಜ್ಞಾನಿಕ ಮತ್ತು ವೈಚಾರಿಕ ಅರಿವಿತ್ತು. ಸದ್ಭಾವನೆ, ಸದಾಶಯ ಮತ್ತು ಸದಾಚಾರ ಇವರ ಮಿತ್ರರಾಗಿದ್ದವು. ಸಮಾಜಕ್ಕಾಗಿ, ಅದರ ಉನ್ನತಿಗಾಗಿ ದುಡಿದವರು. ಇವರು ನಿಜಕ್ಕೂ ಸಾರ್ಥಕ ಬದುಕು ನಡೆಸಿ ನಮಗೆ ದಾರಿ ತೋರಿಸಿದ ಮಹಾಪುರುಷರು.

ಶ್ರೀಯುತ ಆರಾಧ್ಯರು ಯಾರಾದರೂ ಬೇಡಿ ಬಂದಲ್ಲಿ ಅವರನ್ನು ಹಾಗೆಯೇ ಕಳುಹಿಸಿದವರಲ್ಲ. ಅವರು ಪ್ರತಿದಿನ ಯಾರಿಗಾದರು ಅನ್ನ ನೀಡದೆ ತಾವು ಊಟ ಮಾಡಿದವರಲ್ಲ ಎಂದು ಅವರನ್ನು ಬಲ್ಲವರು ಕೊಂಡಾಡುತ್ತಲಿದ್ದರು. ಇವರು ದರಖಾಸ್ತಿನಲ್ಲಿ ಪಡೆದ ಜಮೀನನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸದೆ ಅದೆಲ್ಲವನ್ನು ದಾನವಾಗಿ ನೀಡಿದ್ದಾರೆ. ಅವುಗಳೆಂದರೆ, ಕೆಂಡಗಣ್ಣಸ್ವಾಮಿ ಗದ್ದಿಗೆ, ಹಂಪಾಪುರದ ಆಸ್ಪತ್ರೆ, ಮೈಸೂರಿನ ಆರಾಧ್ಯ ಮಹಾಸಭೆ, ಶಾರದ ನಿಕೇತನ ಮತ್ತು ಜೈನ ವಿದ್ಯಾರ್ಥಿನಿಲಯಗಳಾಗಿವೆ. ಇವರು ಸಜ್ಜನರು, ವಿನಯಸಂಪನ್ನರು ದಾನಶೀಲರು. ಇವರ ಆತ್ಮಕ್ಕೆ ಶಾಂತಿ ಮತ್ತು ನೆಮ್ಮದಿಯನ್ನು ಭಗವಂತ ನೀಡಲೆಂದು ಪ್ರಾರ್ಥಿಸುವೆ. ಇವರು ಸಂಬಂಧದಲ್ಲಿ ಸೌಹಾರ್ದತೆ, ಸೌಜನ್ಯತೆ ಕಂಡು ಕೊಂಡವರು. ಇವರ ಕೌಟುಂಬಿಕ ಜೀವನಮಾರ್ಗ ನೋವು ನಲಿವಿನ ಮೇಲೋಗರ. ಜೀವನದ ವಾಸ್ತವಗಳಿಗೆ ಸ್ಪಂದಿಸುವ ಮನೋಭಾವ ಹೊಂದಿದ್ದರು. ಇವರು ಹಾಸ್ಯ ಪ್ರವೃತ್ತಿಯನ್ನು ಕೆಲವು ಸಂದರ್ಭಗಳಲ್ಲಿ ಉಪಯೋಗಿಸಿ ಜನರನ್ನು ನಗೆಗಡಲಿನಲ್ಲಿ ತೇಲಿಸುವ ಪ್ರವೃತ್ತಿಯುಳ್ಳವರಾಗಿದ್ದರು. ವ್ಯಕ್ತಿಯು ಶ್ರೇಯಸ್ಸಿಗಾಗಲಿ, ಸಮಾಜದ ಅಭ್ಯುದಯಕ್ಕಾಗಲಿ ತನ್ನ ಕರ್ಮವೇ ಮೂಲ. ಕರ್ಮವಿಲ್ಲದಾಗ ಇಡಿ ಪ್ರಪಂಚ ವಿನಾಶದ ಹಾದಿ ಹಿಡಿಯುತ್ತದೆ. ಎಂದು ತಿಳಿಸಿ ಕನ್ನಡದ ನಾಣ್ನುಡಿಯನ್ನು ಹೇಳುತ್ತಿದ್ದರು. "ಕರ್ಮವಿಲ್ಲದ ಗಂಡು, ಒನಕೆಯ ತುಂಡು" ಎಂದು ನಗೆಗಡಲನ್ನು ನಿರ್ಮಿಸುತ್ತಿದ್ದರು. ಇಂತಹವರ ಒಂದು ನೆನಪಿನ ಗ್ರಂಥವನ್ನು ನಾಡಿಗೆ ಅರ್ಪಿಸುವಾಗ, ಗುರುತಿಸಿ ಗೌರವಿಸುವಾಗ ನಾವುಗಳು ಸಹ ಅವರ ಸ್ಮರಣೆಗಾಗಿ ಒಂದು ಲೇಖನ ಕೊಡುವುದು ಕರ್ತವ್ಯವೆಂದು ಅರಿತು ನೀಡಿದ್ದೇನೆ.

ಜೈ ಗುರುದೇವ.

* * *

# ಆರೋಗ್ಯದರ್ಶನ

ಕ್ಯಾನ್ಸರ್ ಎಂಬ ರೋಗವು ಸಾಮಾನ್ಯ ಜನರ ಮನಸ್ಸಿನಲ್ಲಿ ಗುಣಪಡಿಸಲಾಗದಂತಹ ಒಂದು ನಿಗೂಢ ಕಾಯಿಲೆ ಎಂಬ ನಂಬಿಕೆಯಲ್ಲಿದೆ. ಆದರೆ ಇದನ್ನು ಸಂಪೂರ್ಣವಾಗಿ ಗುಣಪಡಿಸಬಹುದು.

ದುರದೃಷ್ಟವಶಾತ್, ಇದರ ಲಕ್ಷಣಗಳನ್ನು ಮೊದಲನೆ ಹಂತದಲ್ಲಿ ಕಂಡುಹಿಡಿಯುತ್ತಿಲ್ಲ. ಪತ್ತೆ ಹಚ್ಚಿದ ರೋಗಿಗೆ ಕೂಡ ಅಗತ್ಯವಾದ ಚಿಕಿತ್ಸೆಯು ಸಕಾಲಕ್ಕೆ ದೊರಕದೆ ಇರುವುದರಿಂದ ಈ ಕಾಯಿಲೆಯನ್ನು ಗುಣಪಡಿಸಲಾಗುವುದಿಲ್ಲ.

ಇದರಿಂದಾಗಿ ಕ್ಯಾನ್ಸರ್ ರೋಗವು ಗುಣಪಡಿಸಲಾಗದ ಕಾಯಿಲೆ ಎನ್ನುವುದು ಅಂಧವಿಶ್ವಾಸ.

**ಕ್ಯಾನ್ಸರ್ ಎಂದರೇನು ?**

ಶರೀರದ ಯಾವುದೇ ಭಾಗದಲ್ಲಿ ಬೆಳೆಯುವಂತಹ ದುರ್ಮಾಂಸಕ್ಕೆ ಟ್ಯೂಮರ್ ಅಥವಾ ಗೆಡ್ಡೆ ಎಂದು ಕರೆಯುತ್ತಾರೆ. ಶರೀರದಲ್ಲಿ ಹಲವು ಭಾಗಕ್ಕೆ ಹರಡುವ ಟ್ಯೂಮರ್‌ಗೆ ಕ್ಯಾನ್ಸರ್ ಎಂದು ಕರೆಯುತ್ತಾರೆ.

**ಕ್ಯಾನ್ಸರ್‌ಗೆ ಕಾರಣವೇನು ?**

ಶರೀರದ ಕಣಗಳ ನಿಯಂತ್ರಣ ಕೇಂದ್ರವನ್ನು ಜೀನ್(Gene) ಎಂದು ಕರೆಯುತ್ತಾರೆ. ಈ ಆಂಕೋ ಜೀನ್‌ಗೆ ಯಾವುದೇ ರೀತಿಯ ಪೆಟ್ಟಾದಾಗ ಕಣಗಳ ನಿಯಂತ್ರಣ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಈ ಸಂದರ್ಭದಲ್ಲಿ ಕಣಗಳು ಮಿತಿಯಿಲ್ಲದೆ ಬೆಳವಣಿಗೆಯಾಗಿ ಶರೀರದ ನಾನಾ ಭಾಗಗಳಿಗೆ ಹರಡುತ್ತವೆ. ಇದಕ್ಕೆ ಕ್ಯಾನ್ಸರ್ ಎಂದು ಕರೆಯಲಾಗುತ್ತದೆ.

ಆಂಕೋ ಜೀನ್ ಹಾಳಾಗುವುದಕ್ಕೆ ತಂಬಾಕು ಸೇವನೆಯು ಒಂದು ಮುಖ್ಯಕಾರಣ.

**ಕ್ಯಾನ್ಸರ್ ವಂಶಪಾರಂಪರಿಕವೇ ?**

ಅಲ್ಲ! ಇದು ಜೀನ್‌ಗಳ ತೊಂದರೆಯಿಂದಾಗಿ ಬರುವ ಕಾಯಿಲೆಯಾದರೂ ಕೂಡ ವಂಶಪಾರಂಪರಿಕವಲ್ಲ.



**- ಡಾ. ವಿಶ್ವೇಶ್ವರ**
ಕ್ಯಾನ್ಸರ್ ಆಸ್ಪತ್ರೆ,
ಹೆಬ್ಬಾಳು, ಮೈಸೂರು
ದೂ. 5280011, 2302302 (O)
2302302, 2302305 (H)

**ಕ್ಯಾನ್ಸರ್ ಅನ್ನು ಪತ್ತೆ ಹಚ್ಚುವುದು ಹೇಗೆ?**

ಈ ಕೆಳಗಿನ ವಿಧಾನದಿಂದ ಕ್ಯಾನ್ಸರ್ ಅನ್ನು ಪತ್ತೆ ಹಚ್ಚಬಹುದು

1. ತುಂಡುಪರೀಕ್ಷೆ (Biopsy)
2. ಸೂಕ್ಷ್ಮಸೂಜಿಪರೀಕ್ಷೆ (FNAC)

**ಕ್ಯಾನ್ಸರ್ ಸ್ಟೇಜ್ ಎಂದರೇನು?**

ಕ್ಯಾನ್ಸರ್ ಬೆಳವಣಿಗೆಯ ಹಂತಗಳನ್ನು ಸ್ಟೇಜ್ ಎಂದು ಕರೆಯಲಾಗಿದೆ . ಇದರಲ್ಲಿ ನಾಲ್ಕು ಹಂತಗಳಿವೆ.

ಮೊದಲನೆ ಹಂತ : **ಸುಲಭಚಿಕಿತ್ಸೆಯಿಂದ ಶೇಕಡ 80ರಷ್ಟು ಗುಣಪಡಿಸಬಹುದು**

ಎರಡನೆ ಹಂತ : **ಜಟಿಲಚಿಕಿತ್ಸೆಯಿಂದ ಶೇಕಡ 80ರಷ್ಟು ಗುಣಪಡಿಸಬಹುದು**

ಮೂರನೆ ಹಂತ : **ಜಟಿಲಚಿಕಿತ್ಸೆಯಿಂದ ಶೇಕಡ 30 ರಿಂದ 40ರಷ್ಟು ಗುಣಪಡಿಸಬಹುದು**

ನಾಲ್ಕನೆ ಹಂತ : **ಗುಣಮುಖರಾಗುವುದು ಕಷ್ಟಸಾಧ್ಯ ನಿರಾಶೆಗೊಳ್ಳಬಾರದು.**

ಹಿಂದೆ ಶಸ್ತ್ರ ಚಿಕಿತ್ಸೆಯಿಂದ ಮಾತ್ರ ಅನಂತರ ವಿಕಿರಣ ಚಿಕಿತ್ಸೆಯಿಂದ ಮಾತ್ರ ಕ್ಯಾನ್ಸರ್ ಅನ್ನು ಗುಣಪಡಿಸಲು ಪ್ರಯತ್ನ ಪಡುತ್ತಿದ್ದರು. ಫಲಕಾರಿಯಾಗುತ್ತಿರಲಿಲ್ಲ. ಹಿಂದೆ ಕ್ಯಾನ್ಸರ್ ತಜ್ಞವೈದ್ಯರ ಕೊರತೆಯಿಂದಾಗಿ, ಸಾಮಾನ್ಯಶಸ್ತ್ರತಜ್ಞರು ಶಸ್ತ್ರಚಿಕಿತ್ಸೆಯನ್ನು ಮಾಡಿ ರೇಡಿಯಾಲಜಿಸ್ಟ್‌ರವರು ವಿಕಿರಣ ಚಿಕಿತ್ಸೆಯನ್ನು ನೀಡುತ್ತಿದ್ದರು. ಸಾಮಾನ್ಯ ವೈದ್ಯರು ಔಷಧಿ ಚಿಕಿತ್ಸೆ, ಕಿಮೋಥೆರಪಿಯನ್ನು ನೀಡುತ್ತಿದ್ದರು. ಅಪೂರ್ಣವಾದ ಶಸ್ತ್ರಚಿಕಿತ್ಸೆ, ವಿಕಿರಣಚಿಕಿತ್ಸೆ ಮತ್ತು ಕಡಮೆ ಪ್ರಥಮಔಷಧಿಚಿಕಿತ್ಸೆ ವಿಧಾನದಿಂದಾಗಿ ರೋಗಿಗಳು ಗುಣಮುಖರಾಗುತ್ತಿರುತ್ತಾರೆ.

**ಕ್ಯಾನ್ಸರ್‌ಗೆ ದೊರಕುವ ಚಿಕಿತ್ಸೆಗಳು :**

ಶರೀರದ ಒಂದು ಭಾಗದ ಲಾಭಕ್ಕಾಗಿ ಚಿಕಿತ್ಸೆಗಳು:

ಅ. ಶಸ್ತ್ರಚಿಕಿತ್ಸೆ

ಆ. ವಿಕಿರಣಚಿಕಿತ್ಸೆ

**ಶರೀರದ ಹಲವು ಭಾಗಗಳ ಲಾಭಕ್ಕಾಗಿ ಚಿಕಿತ್ಸೆಗಳು:**

ಅ. ಔಷಧಿಚಿಕಿತ್ಸೆ (ಕಿಮೋಥೆರಪಿ)

ಆ. ಹಾರ್ಮೋನ್ ಚಿಕಿತ್ಸೆ

ಇತ್ತೀಚಿನ ದಿನಗಳಲ್ಲಿ ಕ್ಯಾನ್ಸರನ್ನು ಈ ಮೇಲೆ ತಿಳಿಸಿದ ಚಿಕಿತ್ಸೆಯಿಂದ 3 ಅಥವಾ 4 ವಿಧಾನಗಳನ್ನು ಅಳವಡಿಸಿ ಗುಣಪಡಿಸಬಹುದು.

ಇತರೆ ಖಾಯಿಲೆಯಂತೆ ಇದನ್ನು ಬೇಗ ಪತ್ತೆ ಹಚ್ಚಿದಲ್ಲಿ ಸರಿಯಾಗಿ ಸಕಾಲದಲ್ಲಿ ಚಿಕಿತ್ಸೆಯನ್ನು ಪಡೆದಲ್ಲಿ ಗುಣಪಡಿಸಬಹುದು.

**ಕ್ಯಾನ್ಸರ್‌ನ ಪ್ರಥಮ ಚಿನ್ಹೆಗಳು**

- ಸ್ತನದಲ್ಲಿ ಊತ, ಗಂಟು ಅಥವಾ ಶರೀರದ ಯಾವುದೇ ಭಾಗದಲ್ಲಿ ಗಡಸುತನ, ಊತ ಅಥವಾ ಗಂಟು

- ಶರೀರದ ಯಾವುದೇ ಭಾಗದಿಂದ ರಕ್ತಸ್ರಾವ
- ಮಲ, ಮೂತ್ರ, ತೊಂಟೆ, ವಾಂತಿ ಇವುಗಳಲ್ಲಿ ರಕ್ತ
- ಯೋನಿಯಿಂದ ಅಸ್ವಾಭಾವಿಕ ರಕ್ತಸ್ರಾವ
- ಒಂದು ತಿಂಗಳ ಮೇಲು ಬಾಯಿ, ಚರ್ಮ ಅಥವಾ ಶರೀರದ ಯಾವುದೇ ಭಾಗದಲ್ಲಿ ಗಾಯ ಅಥವಾ ಹುಣ್ಣು ವಾಸಿಯಾಗದೆ ಇರುವುದು
- ನುಂಗುವಾಗಿನ ತೊಂದರೆ ಅಥವಾ ತಡೆತ
- ಮಲಬದ್ಧತೆ ಅಥವಾ ಮಲವಿಸರ್ಜನೆ ಕಾಲದಲ್ಲಿ ರಕ್ತಸ್ರಾವ
- ಗಂಟಲಲ್ಲಿ ಉರಿತ, ನೋವು ಅಥವಾ ಧ್ವನಿ ಬದಲಾವಣೆ ಒಂದು ತಿಂಗಳ ಮೇಲೂ ಇದ್ದಲ್ಲಿ.

**ಬೇಗ ಪತ್ತೆ ಹಚ್ಚಿದರೆ ಕ್ಯಾನ್ಸರನ್ನು ಗುಣಪಡಿಸಬಹುದು.**

* * *

## ಸಚ್ಚಾರಿತ್ರ್ಯ

ಸಚ್ಚಾರಿತ್ರ್ಯಕ್ಕೆ ಮಿಗಿಲಾದದ್ದು ಮಾನವನ ಪಾಲಿಗೆ ಮತ್ತೊಂದಿಲ್ಲ. when character is lost, everything is lost. ಚಾರಿತ್ರ್ಯ ಕಳೆದುಕೊಂಡರೆ ಎಲ್ಲವನ್ನು ಕಳೆದುಕೊಂಡಂತೆ ಎಂಬ ಆಂಗ್ಲ ನಾಣ್ಣುಡಿಯಂತೂ ಚಾರಿತ್ರ್ಯದ ಮಹತ್ವವನ್ನು ಸೂತ್ರ ರೂಪದಲ್ಲಿ ನಮಗೆ ತಿಳಿಸಿದೆ. ಮನುಷ್ಯ ತನ್ನ ಜೀವಿತಾವಧಿಯಲ್ಲಿ ಅನುಸರಿಸಿದ ಧರ್ಮ ಬದ್ಧ, ನ್ಯಾಯಪೂರ್ಣ ಮತ್ತು ನೈತಿಕತೆಯ ನಡಾವಳಿಯೇ ನಮ್ಮನ್ನು ನಮ್ಮ ಸಾವಿನ ನಂತರವೂ ಲೋಕೋತ್ತರವಾದ ಕೀರ್ತಿಯತ್ತ ನಡೆಸುತ್ತದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಪ್ರತಿಯೊಬ್ಬ ಮಾನವನಿಗೂ ಆತನ ಸಚ್ಚಾರಿತ್ರ್ಯವೇ ಎಲ್ಲೆಲ್ಲೂ ಸಂಪತ್ತಾಗುತ್ತದೆ.

ಹಣವನ್ನು ಕಳೆದುಕೊಂಡರೆ ಮತ್ತೆ ಸಂಪಾದಿಸಬಹುದು, ಆರೋಗ್ಯ ಕೆಟ್ಟರೆ ಅದನ್ನು ಅನುಭವೀ ಉತ್ತಮ ವೈದ್ಯನ ನೆರವಿನ ಮೂಲಕ ಮತ್ತೆ ಪಡೆದುಕೊಳ್ಳಬಹುದು. ಆದರೆ ಚಾರಿತ್ರ್ಯವನ್ನೇ ಮನುಷ್ಯ ಕಳೆದುಕೊಂಡರೆ ಮನುಷ್ಯ ಮತ್ತೆ ಅದನ್ನು ಖಂಡಿತವಾಗಿಯೂ ಪುನಃ ಸಂಪಾದಿಸಲಾರ. ಆದ್ದರಿಂದಲೇ ಚಾರಿತ್ರ್ಯ ಎಂಬುದು ಅತ್ಯಮೂಲ್ಯ. ಅದೊಂದಿದ್ದರೆ ನಾವು ಎಲ್ಲೇ ಆಗಲಿ, ಯಾರ ನಡುವೆಯೇ ಆಗಲಿ, ಬದುಕಿ ಬಾಳಬಹುದು, ನಮ್ಮ ಬದುಕನ್ನು ಸಾರ್ಥಕಗೊಳಿಸಿಕೊಳ್ಳಬಹುದು.

# ಮನುಕುಲದ ದಾರಿದೀಪ



- ಜೆ. ಎಸ್.
ಪುಟ್ಟಸೋಮಾರಾಧ್ಯ
ಎಂ. ಎಂ., ಬಿ.ಎಸ್ಸಿ., ಬಿ.ಇಡ್
ಆರ್.ಬಿ.ವಿ.
ಪ್ರೌಢಶಾಲಾ ನಿವೃತ್ತ
ಮುಖ್ಯೋಪಾಧ್ಯಯರು
ನಂ. 738, ರಾಮಾನುಜ ರಸ್ತೆ,
ಜನೇ ತಿರುವು, ಮೈಸೂರು - 04

ಈಗ್ಗೆ ಐದಾರು ದಶಕಗಳ ಹಿಂದಿನ ಮಾತು, ಮೈಸೂರು ಜಿಲ್ಲೆಯಲ್ಲಿಯೇ ಅತಿ ಹಿಂದುಳಿದ ತಾಲ್ಲೂಕು ಎಂದು ಖ್ಯಾತಿ ಪಡೆದ ಹೆಗ್ಗಡದೇವನ ಕೋಟೆಯ ಒಂದು ಕುಗ್ರಾಮ ಜಿನ್ನಹಳ್ಳಿ. ಅಂದಿಗೆ ನಲವತ್ತು, ಐವತ್ತು ಸಂವತ್ಸರಗಳನ್ನು ಕಳೆದ ಆಚಾರ ವಿಚಾರಗಳಲ್ಲಿ ಅಗ್ರಗಣ್ಯ ಎಂಬ ಹೆಗ್ಗಳಿಕೆಯ ಆರಾಧ್ಯ ಜನಾಂಗದಲ್ಲಿ ಜನಿಸಿದ ಮಹಾನ್‌ಗುರು. ಶ್ಯಾಮಲವರ್ಣ, ಸಣಕಲು ಶರೀರದವರು. ಧ್ವನಿ ಮಾತ್ರ ಗಂಟೆಯ ಶಬ್ದವನ್ನು ನಾಚಿಸುವಂತಿತ್ತು. ಯಾವಾಗಲೂ ಹತ್ತಿಬಟ್ಟೆಯಿಂದ ತಯಾರಾದ ಕಚ್ಚೆಪಂಚೆ, ಒಂದು ಒಳಅಂಗಿ ಮೇಲೊಂದು ಶರಟು. ಇದು ತಮ್ಮ ಊರಿನಲ್ಲಿರುವಾಗ-ಕಾರ್ಯ ನಿಮಿತ್ತ ಬೇರೆ ಹಳ್ಳಿಗಳಿಗೆ ಹೋಗಬೇಕಾದಾಗ, ಕೋಟೆಯ ಕಛೇರಿಗೆ ಭೇಟಿ ಕೊಡುವಾಗ, ಅಮಲ್‌ದಾರ್, ಡೆಪ್ಯುಟಿ ಕಮಿಷನರ್ ಸಾಹೇಬರು ಮುಂತಾದ ಅಧಿಕಾರಿಗಳು ಊರಿಗೆ ಭೇಟಿ ಕೊಟ್ಟಾಗ ಅಥವಾ ಇವರೇ ಭೇಟಿ ಮಾಡುವ ಸಂದರ್ಭದಲ್ಲಿ ಕಚ್ಚೆ ಪಂಚೆ -ಶರಟು-ಕ್ಲೋಸ್ ಕಾಲರ್ ಕೋಟು ಅದಕ್ಕೆ ತೂಗಿ ಬಿಟ್ಟ ಪ್ಯಾಕೆಟ್ ವಾಚು ಮಂಡೆಗೆ ಬಿಳಿಯ ರುಮಾಲಿನ ಪೇಟ -ಇವೆಲ್ಲವೂ ಹತ್ತಿಯ ಬಟ್ಟೆಗಳೆ, ಎಲ್ಲವೂ ಶ್ವೇತವರ್ಣದ್ದು. ನೊಸಲ ತುಂಬ ತ್ರಿಪುಂಡ್ರ ಭಸ್ಮ-ಗಂಧ-ಅದರ ಮೇಲೆ ಕುಂಕುಮದ ಬೊಟ್ಟು. ಕೊರಳಲ್ಲಿ ರುದ್ರಾಕ್ಷಿ ಹಾಗೂ ತುಳಸಿ ಮಣಿಗಳ ಹಾರ. ಇದು ಅವರ ಶರೀರ ವ್ಯಕ್ತಿತ್ವದ ಗುರುತುಗಳು.

ಸಾಮಾನ್ಯ ರೈತನಿಂದ ಹಿಡಿದು -ಹಳ್ಳಿಗಳ ಮುಖಂಡರು -ಸರ್ಕಾರದ ಅಧಿಕಾರಿಗಳು -ರೋಗಪೀಡಿತ ಜನರು - ನಾಟಕವಾಡುವ -ಜಾನಪದ ಹೇಳುವ -ಕುದುರೆ ಸಾಕುವವರು, ವ್ಯಾಪಾರಿಗಳು-ಅನಂತನದಾರ, ಯಜ್ಞೋಪವೀತ ತಯಾರು ಮಾಡುತ್ತಿದ್ದ ಮುಸ್ಲಿಮ್ ಬಂಧುಗಳು - ಹೀಗೆ ಹತ್ತು ಹಲವು ವರ್ಗಗಳ ಜನರಿಂದ ಪುರಸ್ಕರಿಸಲ್ಪಡುತ್ತಿದ್ದ ವ್ಯಕ್ತಿ. ಈ ವ್ಯಕ್ತಿತ್ವ

ಆರಾಧ್ಯ ಜನಾಂಗದಲ್ಲಿ ಹುಟ್ಟಿದುದರಿಂದ ಅರ್ಧಭಾಗ ಬಂದಿದ್ದರೆ, ಇನ್ನರ್ಧ ಇವರ ಧರ್ಮ, ಪೂಜಾ ಕೈಂಕರ್ಯಗಳು. ಊರುಗಳಲ್ಲಿ ಉದ್ಭವಿಸುತ್ತಿದ್ದ ಜಗಳ ತಂಟೆ ತಕರಾರುಗಳನ್ನು ಹಂಸಕ್ಷೀರ ನ್ಯಾಯದಂತೆ. ಬೋಧನಾತ್ಮಕವಾಗಿ ಬಿಡಿಸುತ್ತಿದ್ದ ಅಮೋಘ. ಮುವತ್ತು ಮೂರು ಹಳ್ಳಿಗಳು ಇವರನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸುತ್ತಿದ್ದವು. ಇವರಲ್ಲಿದ್ದ ಅಪಾರವಾದ ಜ್ಞಾನ, ಶಿಸ್ತು, ದೇಹಿ ಎಂದು ಬಂದವರಿಗೆ ತಮ್ಮಿಂದಾದ ಎಲ್ಲ ಸಹಾಯ ಹಗಲಿರುಳು ಎನ್ನದೆ ಜನಸೇವೆ ಮಾಡುತ್ತಿದ್ದ ಮಹಾನ್ ಚೈತನ್ಯ. ಇಂದಿಗೂ ನನಗೆ ಆಶ್ಚರ್ಯದ ಸಂಗತಿ ಎಂದರೆ ಒಬ್ಬ ಬಡಕಲು ಶರೀರಿ ಸೂಜಿಗಲ್ಲಿನಂತೆ ಎಲ್ಲರನ್ನೂ ಆಕರ್ಷಿಸಿದ್ದ ರೀತಿ ಹೇಗೆ ? ಇವರಿಗೆ ಸಿಕ್ಕಿದ ಜನಮನ್ನಣೆ, ಪ್ರೀತಿ ವಿಶ್ವಾಸಗಳು ದೊರಕಿದುದು ಎಲ್ಲವೂ ಚಿದಂಬರ ರಹಸ್ಯವೆಂದೆ ನನ್ನ ಭಾವನೆ. ಇದಕ್ಕೆಲ್ಲ ನಾ ಕಂಡುಕೊಂಡಂತೆ ಉತ್ತರ -ಅವರ ಜೀವನ ಶೈಲಿ, ಸಕಲರಿಗೂ ಲೇಸನ್ನೇ ಬಯಸುವ ಬಯಕೆ -ದೈವದತ್ತವಾಗಿ ಹಾಗೂ ಹಿರಿಯರಿಂದ ಜನ್ಮದತ್ತವಾಗಿ ಬಂದಿದ್ದ ಗುರುಗಳ ಪಟ್ಟ-ಅಂದಿನ ಕಾಲದಲ್ಲಿ ಈಗಿನ ಹಾಗೆ ಎಲ್ಲ ವರ್ಗಗಳಿಗೂ ಗುರುಗಳು ಇರುತ್ತಿರಲಿಲ್ಲ. ಸಕಲರಿಗೂ ಗುರುವರ್ಗವೆಂದರೆ *"ಆರಾಧ್ಯ ಜನಾಂಗದವರು"*. ಆರಾಧ್ಯಜನಾಂಗದವರು ಅಂದು, ಇಂದೂ ಸಹ ಗುರುಪಟ್ಟಕ್ಕೆ ಅರ್ಹರೇ ಆಗಿರುತ್ತಾರೆ.

ಒಂದು ಕೊಂಪೆಯಲ್ಲಿ ಜನ್ಮತಾಳಿದ ಈ ವ್ಯಕ್ತಿ ಸರ್ವಗುಣ ಸಂಪನ್ನರಾದರು, ಜನಾನುರಾಗಿಗಳಾದರು, ಜೇನುಹುಳುಗಳು ಜೇನುಗೂಡಿಗೆ ಮುತ್ತುವಂತೆ, ಇವರನ್ನು ಯಾವಾಗಲೂ ಜನರು ಒಂದಲ್ಲಾ ಒಂದು ವಿಚಾರಕ್ಕಾಗಿ ಸುತ್ತುವರಿಯುತ್ತಿದ್ದರು. ಅಂತಹ ಜವಾಬ್ದಾರಿಯನ್ನು ನಿಭಾಯಿಸಲು ಅನುಸರಿಸಿದ ಮಾರ್ಗ ಯಾವುದು? ಯಾರು ಅವರಿಗೆ ಮಾರ್ಗದರ್ಶನ ನೀಡಿದರು ? ಯಾರನ್ನು ಅನುಕರಣೆ ಮಾಡಿದರು ? ಅದಕ್ಕಾಗಿ ಪಟ್ಟ ಶ್ರಮವೆಷ್ಟು? ಇದನ್ನೆ ಲೆಕ್ಕ ಹಾಕಲು ನಮ್ಮ ಬುದ್ಧಿ, ತಿಳಿವಳಿಕೆ ಸಾಕಾಗುವುದಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಈ ಮಹಾನ್ ಚೈತನ್ಯಕ್ಕೆ ಸ್ಫೂರ್ತಿ ಸತ್ಯಕ್ಕೆ -ಸತ್ಯ ಹರಿಶ್ಚಂದ್ರ, ಜ್ಞಾನಕ್ಕೆ ರಾಮಕೃಷ್ಣ ಪರಮಹಂಸರು, ಸ್ವಾತಂತ್ರ್ಯಕ್ಕೆ -ಮಹಾತ್ಮಗಾಂಧೀಜಿ, ಈ ಎಲ್ಲ ಮಹಾನುಭಾವರುಗಳ ಜೀವನ ಶೈಲಿ, ಚರಿತ್ರೆ -ಇವರ ಮೇಲೆ ಅಪಾರವಾದ ಛಾಪು ಮೂಡಿಸಿದ್ದವು ಎಂದು ಅವರ ಮಾತುಗಳಿಂದ ವೇದ್ಯವಾಗುತ್ತಿತ್ತು. ತುಲಸೀರಾಮಾಯಣ, ಭಗವದ್ಗೀತೆ, ಅಷ್ಟಾದಶಪುರಾಣ, ಉಪನಿಷತ್ತುಗಳು ಇವರಿಗೆ ಕರತಲಾಮಲಕವೇ ಆಗಿದ್ದವು. ಭರ್ತೃಹರಿಯ ನೀತಿಶತಕಗಳು, ಪಂಚಾಚಾರ್ಯರ ವಂಶದಲ್ಲಿ ಹುಟ್ಟಿದ್ದರಿಂದ ಅವರುಗಳ ಆಶೀರ್ವಾದ ಈ ವ್ಯಕ್ತಿಯನ್ನು ಯಾರೂ ಹತ್ತಲಾಗದ ಜ್ಞಾನದ ಶಿಖರವನ್ನೇರಿಸಿವೆ. ಪೂರ್ವಜರ ಅನುಕರಣೆ ಮಾಡುತ್ತಾ ಸಮಸ್ತರಿಗೂ ಒಳ್ಳೆಯದನ್ನು ಬಯಸುತ್ತಾ ಜೀವನೋದ್ಧಾರಕ್ಕಾಗಿ ಶ್ರಮಿಸಿ ತಮ್ಮ ತನು, ಮನ, ಧನವನ್ನು ಭೇದಭಾವ ಮಾಡದೆ ಹಂಚಿ, ಸಕಲರನ್ನು ಮಾನವೀಯತೆಯಿಂದ ಸಂತೈಸಿ ಉದ್ಧಾರಮಾಡಿದ ಎಲೆಮರೆಕಾಯಿ ಈ ಪುಣ್ಯ ಶರೀರಿ. ಇಲ್ಲಿ ಒಂದು ವಿಚಾರವನ್ನು ಹೇಳಲೇ ಬೇಕು -ಅದು ಪಂಚಾಚಾರ್ಯರೆಂದರೆ 1) ರೇಣುಕಾರಾಧ್ಯರು 2) ಮರುಳಾರಾಧ್ಯರು

3) ಪಂಡಿತಾರಾಧ್ಯರು 4) ಏಕೋರಾಮಾರಾಧ್ಯರು 5) ವಿಶ್ವಾರಾಧ್ಯರು - ಇವರೆಲ್ಲ ಲಿಂಗೋದ್ಭವಿಗಳು-ಈ ವಂಶದಲ್ಲಿ ಹುಟ್ಟಿದವರೆ ಆರಾಧ್ಯ ಜನಾಂಗದವರು. ಲೋಕದ ಮೊದಲಗುರುಗಳು. ಆದರೆ ಈಗ ಕಾಲ ಬದಲಾಗಿದೆ. ಏನೇ ಆದರೂ ಆರಾಧ್ಯಜನಾಂಗದವರೇ ಗುರುಪೀಠಕ್ಕೆ ಅರ್ಹರು. ಕಾಲಾಯ ತಸ್ಮೈ ನಮಃ, ಇರಲಿ.

ಮೇಲೆ ತಿಳಿಸಿದ ಸಕಲ ಸಂಪನ್ನ ಸದ್ಗುಣಗಳಿಂದ ಕೂಡಿ, ಚಿಕ್ಕ ಕುಡಿಕೆಯಲ್ಲಿ ಸಾಗರದಷ್ಟು ಮನುಕುಲದ ಉದ್ಧಾರಕ್ಕಾಗಿ ಚಿಂತನೆಗಳನ್ನು ತುಂಬಿಕೊಂಡಿದ್ದ ಮಹಾ ದಿವ್ಯಪುರುಷರೆ ಜಿನ್ನಹಳ್ಳಿ ಗುರುಮಠದ ಶ್ರೀ ಕುಮಾರಾರಾಧ್ಯರು.

ಇಷ್ಟೆಲ್ಲ ಶ್ರೀ ಕುಮಾರಾರಾಧ್ಯರ ಬಗ್ಗೆ ಹೇಳಲು ನನಗಿರುವ ಅಧಿಕಾರವೇನು ಎಂದರೆ - ಉತ್ತರ ಸ್ಪಷ್ಟ -ನಾನು ಆರಾಧ್ಯರ ತಮ್ಮನ ದೌಹಿತ್ರ. ಆದುದರಿಂದ ಕುಮಾರಾರಾಧ್ಯರಿಗೂ ದೌಹಿತ್ರನಾದೆ. ನಾನು ಚಿಕ್ಕವನಾದುದರಿಂದ ಅವರಿಗೆ ನನ್ನನ್ನು ಕಂಡರೆ ಬಲು ಪ್ರೀತಿ. ನನ್ನನ್ನು ಮನೆಯ ಯಾರಾದರೂ ಬೈದರೆ, ಗದರಿದರೆ ಇವರಿಗೆ ಭರ್ತಿ ಸಿಟ್ಟು ಬಂದುಬಿಡುತ್ತಿತ್ತು. ಇವರ ಮುಂದೆ ನಿಂತು ಮಾತಾಡಲು ಎಲ್ಲರೂ ಭಯಪಡುತ್ತಿದ್ದರು - ಕಾರಣ ಇವರಿಗೆ ಸುಳ್ಳು ಹೇಳುವುದು -ಇಲ್ಲಸಲ್ಲದ ಮಾತಾಡುವವರನ್ನು ಕಂಡರೆ ಕಡುಕೋಪ. ಇವರೊಂದಿಗೆ ಮಾತಾಡುವವರು ಬಹಳ ಎಚ್ಚರವಹಿಸಬೇಕಾಗುತ್ತಿತ್ತು. ಎಂಟೆದೆಯ ಧೈರ್ಯ. ಸತ್ಯ ವಾಕ್ಯಗಳೇ ಇವರಲ್ಲಿ ವ್ಯವಹರಿಸುವವರಿಗೆ ಇರಬೇಕಾಗಿದ್ದ ಅರ್ಹತೆಗಳು, ವಿಷಯಗಳಾಗಿರಬೇಕಿತ್ತು. ಇದನ್ನೆಲ್ಲ ನಾನು ಸಮೀಪದಿಂದ ನೋಡಿದ್ದೆ. ಕುಮಾರಾರಾಧ್ಯರು ಅಂದರೆ ನನ್ನ ದೊಡ್ಡ ತಾತನವರು ನನಗೊಬ್ಬನಿಗೆ ದಯಪಾಲಿಸಿದ್ದ ಸುಲುಗೆ ಪ್ರೀತಿಯಿಂದ ನನ್ನ ಆ ಅತಿ ಚಿಕ್ಕವಯಸ್ಸಿನಲ್ಲಿ ಎಷ್ಟನ್ನು ಅರಗಿಸಿಕೊಳ್ಳಬಹುದೋ ಅಷ್ಟನ್ನು ಅರಗಿಸಿಕೊಂಡು, ಈಗ ನನ್ನ ನೆನಪಿನ ಅಂಗಳದಿಂದ ಹೆಕ್ಕಿ ಹೆಕ್ಕಿ ತೆಗೆದು ಈ ಮೂಲಕ ಹಂಚಿಕೊಳ್ಳಲು ಪ್ರಯತ್ನಿಸಿದ್ದೇನೆ.

ಕುಮಾರಾರಾಧ್ಯರ ಬಗ್ಗೆ ಹೇಳಲು - ಬರೆಯಲು ಬಹಳಷ್ಟಿದೆ. ಅವರು ಒಂದು ಗಣಿ ಇದ್ದಂತೆ, ಅಗೆದು ತೆಗೆಯುತ್ತ ಹೋದರೆ ಬಹಳಷ್ಟು ದೊರೆಯುತ್ತದೆ. ಆದರೆ ಆ ದಿಶೆಯಲ್ಲಿ ಪ್ರಯತ್ನಿಸಿದವರು ಅತಿ ವಿರಳ. ಅವರಿಂದ ಪಡೆಯಬೇಕಾದುದೆಲ್ಲವನ್ನು ಪಡೆದು ಸುಮ್ಮನಾದವರೆ ಜಾಸ್ತಿ. ಆ ಮಹಾಪುರುಷ ಒಂದು ಕಲ್ಪವೃಕ್ಷವಿದ್ದಂತೆ. ಅದರ ಬೇರು, ನಾರು, ತೊಗಟೆ, ಎಲೆ, ಕಾಯಿಗಳು ಹೇಗೆ ಉಪಯುಕ್ತವೋ ಅದರಂತೆ ಇವರ ಬಗ್ಗೆ ತಿಳಿಯುತ್ತಾ ಹೋದರೆ ಅದಕ್ಕೆ ಕೊನೆಯೆಂಬುದೇ ಸಿಗುವುದಿಲ್ಲ. ಇಂತಹ ಒಬ್ಬ ಓಡಾಡುವ ದಿವ್ಯ ಶಕ್ತಿ ಹೊಂದಿದ್ದ ಮಹಾಪುರುಷ ತನ್ನ ಕೊನೆ ಉಸಿರಿನವರೆಗೆ ತನ್ನ ಜೀವನವನ್ನು ಗಂಧದ ಹಾಗೆ ತೇದು-ತಾನು ಕಷ್ಟಪಟ್ಟು ಇತರರಿಗೆ ಸುವಾಸನಾಯುಕ್ತ ಜೀವನಕ್ಕೆ ದಾರಿ ಮಾಡಿಕೊಟ್ಟ ದಿವ್ಯಜ್ಯೋತಿ ಮರೆಯಾದುದು -ಮನು ಕುಲಕ್ಕೆ, ಮಿಗಿಲಾಗಿ ಆರಾಧ್ಯ ಜನಾಂಗಕ್ಕೆ ಅಪಾರ ನಷ್ಟವಾಗಿದೆ. ಈ ಸ್ಥಾನ ತುಂಬಲು ಇನ್ನು ಯಾರಿಂದಲೂ ಸಾಧ್ಯವಾಗಿಲ್ಲವೆಂದೆ ನನ್ನ ಭಾವನೆ.

**ಚೂಡಾಕರ್ಮಮಹೋತ್ಸವ ಅಥವಾ ಮಂಡೆ ಚೌಲ:**

ನಾನು ಐದುವರ್ಷ ಪ್ರಾಯಕ್ಕೆ ಬಂದಾಗ ಮನೆತನದ ವಿಧಿ ವಿಧಾನಗಳಂತೆ ನನಗೆ ಚೂಡಾಕರ್ಮಮಹೋತ್ಸವವನ್ನು ಏರ್ಪಡಿಸಿದ್ದರು. ಆಗ ಮನೆಯಲ್ಲಿ ಇದ್ದ ಅತಿ ಮುದ್ದಿನ ಮೊಮ್ಮಗ. ಮಹೋತ್ಸವಕ್ಕೆ ದೂರದೂರಿನಿಂದ ನೆಂಟರಿಷ್ಟರನ್ನೆಲ್ಲ ಆಹ್ವಾನಿಸಿದ್ದರು. ಮೂರು ದಿನ ಮುಂಚೆ ಲಾಡು, ಕಜ್ಜಾಯಗಳು ತಯಾರಾದವು. ಕಜ್ಜಾಯಗಳನ್ನು ದೊಡ್ಡ ದೊಡ್ಡ ಹಂಡೆಗಳಲ್ಲಿ ತುಂಬಿಟ್ಟಿದ್ದುದ್ದು ನನಗೆ ಜ್ಞಾಪಕವಿದೆ. ಮಹೋತ್ಸವದ ದಿನ ಶುಭ ಮುಹೂರ್ತದಲ್ಲಿ ನನ್ನ ಮಂಡೆಯನ್ನು ಬಾದಾಮಿ ಆಕಾರಕ್ಕೆ ಕ್ಷೌರಮಾಡಿಸಿದರು. ಹೋಮ ಹವನಾದಿಗಳು ನಡೆದವು. ಸಂಜೆಯವರೆಗೆ ಊಟ ನಡೆದೆ ಇತ್ತು. ಅಂದು ಸಂಜೆ ಗೋಧೂಳಿ ಲಗ್ನಕ್ಕೆ ನನಗೆ ಅಲಂಕಾರಮಾಡಿ ಹಸೆಯ ಮೇಲೆ ಕೂರಿಸಿ ಆರತಿ ಬೆಳಗಿದರು. ನನಗೆ ಮಕಮಲ್‌ನಿಂದ ಹೊಲಿಸಿದ ಶರಾಯಿ, ಕೋಟು, ತಲೆಗೆ ಚಿತ್ರ ಬಿಡಿಸಿದ್ದ ಟೋಪಿ ಹಾಕಿ ಕುಮಾರಾರಾಧ್ಯರ ಮೆಚ್ಚಿನ ಬಿಳಿ ಕುದುರೆ ಮೇಲೆ ಕೂರಿಸಿ, ಲಗಾಮನ್ನು ಸ್ವತಃ ಹಿಡಿದು ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿದರು. ಇವೆಲ್ಲವೂ ಆರಾಧ್ಯರ ನೇತೃತ್ವದಲ್ಲಿ ನಡೆದುದು ಜೀವನ ಪರ್ಯಂತ ಮರೆಯಲಾರದ ವಿಷಯ. ಅವರ ಆದರ್ಶ - ಪ್ರೀತಿಸಿದರೆ ಮಕ್ಕಳು, ಪೂಜಿಸಿದರೆ ದೇವರು, ಮಕ್ಕಳೇ ಮನೆಗೆ ಮಾಣಿಕ್ಯ ಎಂಬ ನಿತ್ಯಸತ್ಯ.

**ಕವಿಮನಸ್ಸಿನ ಹಾಸ್ಯಗಾರ :**

ಶ್ರೀಮರ್ಾ ಕುಮಾರಾರಾಧ್ಯರ ತಮ್ಮ ಶ್ರೀಮಾನ್ ರೇವಣಾರಾಧ್ಯರು. ಇವರಿಬ್ಬರೂ ಒಂದೇ ಆದರ್ಶ ಹೊಂದಿದ್ದ ಒಂದೇ ನಾಣ್ಯದ ಎರಡು ಮುಖಗಳು. ಮಳೆಗಾಲದ ಒಂದು ದಿನ ಯಾವುದೋ ವಿಷಯದಲ್ಲಿ ಇವರಿಬ್ಬರಿಗೂ ಸ್ವಲ್ಪ ಮನಸ್ತಾಪವಾಗಿತ್ತಂತೆ. ಏರು ಕಟ್ಟಿ ಕುಮಾರಾರಾಧ್ಯರು ಮುಂದೆ ಉಳುತ್ತಾ ಹೋದರೆ, ಹಿಂದೆ ಹಿಂದೆ ರೇವಣಾರಾಧ್ಯರ ನೇಗಿಲು ಸಾಗುತ್ತಿತ್ತು. ಉಳುಮೆ ಮಾಡುವಾಗ ಸಾಲುಗಳು ನೇರವಾಗಿ ಬರಬೇಕಿತ್ತು ಆದರೆ ಕುಮಾರಾರಾಧ್ಯರ ಸಾಲು ನೇರವಾಗಿರಲಿಲ್ಲ. ಇದನ್ನು ಕಂಡು ತಮ್ಮ ರೇವಣಾರಾಧ್ಯರು ಕುಪಿತರಾದರಂತೆ. ಆದರೆ ಹಿಂದಿನ ದಿನದ ಮನಸ್ತಾಪದಿಂದ ಒಬ್ಬರೊನ್ನಬ್ಬರು ಮಾತಾಡಿಸುತ್ತಿರಲಿಲ್ಲ-ಉಳುಮೆಯ ಸಾಲು ಸರಿಯಾಗಿಲ್ಲವೆಂದು ಅಣ್ಣನಿಗೆ ಹೇಗೆ ತಿಳಿಸುವುದು? ಅದಕ್ಕೆ ರೇವಣಾರಾಧ್ಯರು ಒಂದು ಉಪಾಯ ಮಾಡಿ ಜೋರಾಗಿ *"ದಪ್ಪಡಿ ದಿಪ್ಪಡಿ ಧಾನ್"* ಎಂದು ಕೂಗಿದರಂತೆ. ಅದನ್ನು ಕೇಳಿದ ಕುಮಾರಾರಾಧ್ಯರು ಹೊಲದ ಸಮೀಪದಲ್ಲಿ ಯಾರೂ ಇಲ್ಲದೆ ಇರುವುದರಿಂದ, ನನಗೆ ನನ್ನ ತಮ್ಮ ಸೂಚಿಸುತ್ತಿದ್ದಾನೆ ಎಂದು ಅರಿತು ಉತ್ತರವನ್ನು ಹೀಗೆ ಹೇಳಿದರಂತೆ *"ಆದಂಗೆ ಆಗಲಿ ಧೀನ್"*- ನೋಡಿ ಇಬ್ಬರ ಕವಿಹೃದಯಗಳು ಹೇಗೆ ವರ್ತಿಸಿದವು. ಕೊನೆಗೆ ಮನೆಗೆ ಬಂದು ಒಂದು ದಿನ ಉಳುಮೆ ಮಾಡದಿದ್ದರೆ ಏನಾಗ್ತಿತ್ತು? ಎಂದು ರೇವಣಾರಾಧ್ಯರು ತಮ್ಮ ಅತ್ತಿಗೆಯವರಲ್ಲಿ ಹೇಳಿದಾಗ -ಕುಮಾರಾರಾಧ್ಯರಿಗೆ ತಮ್ಮ ತಪ್ಪು ಅರ್ಥವಾಯ್ತಂತೆ. ಎಲ್ಲರೂ ಇವರೀರ್ವರ ಹೈಟೆಕ್ ಚಿಂತನೆಯ ಬುದ್ಧಿಗೆ ನಕ್ಕು ನಲಿದರಂತೆ.

**"ಸಾಧ್ವಿ"ಸಂಗ :**

ತಮ್ಮ ಊರು, ತಾಲ್ಲೂಕಿನ ವಿಷಯಗಳ ಜೊತೆಗೆ ರಾಜ್ಯ, ರಾಷ್ಟ್ರಗಳ ವಿಚಾರವಾಗಿ ಬಹಳ ಆಸಕ್ತಿ ತಳೆದಿದ್ದರು. ಅಂದಿನ ದಿನಗಳಲ್ಲಿ ಮೈಸೂರು ನಗರದಿಂದ ಹೊರಡುತ್ತಿದ್ದ ಸಂಜೆ ದಿನ ಪತ್ರಿಕೆ "ಸಾಧ್ವಿ". ಶ್ರೀಮಾನ್ ಅಗರಂ ರಂಗಯ್ಯನವರು ಸಂಪಾದಕರು. ಅವರು ಕಟ್ಟಾ ಕಾಂಗ್ರೆಸ್ಸಿಗರು, ಖಾದಿಧಾರಿಗಳು, ಅವರು ಮತ್ತು ಕುಮಾರಾರಾಧ್ಯರು ಬಹು ಆತ್ಮೀಯರು. ಅವರಿಬ್ಬರ ಭಾವನೆ, ಆಲೋಚನೆ, ದೇಶದ ಬಗ್ಗೆ ಚಿಂತನಾಶೈಲಿ ಒಂದೇ ತೆರನಾಗಿತ್ತು. ಪತ್ರಿಕೆಯನ್ನು ಪ್ರತಿದಿನ ಕುಮಾರಾರಾಧ್ಯರ ಊರಿನ ವಿಳಾಸಕ್ಕೆ ಅಂಚೆ ಮೂಲಕ ಅಗರಂರವರು ಕಳುಹಿಸಿಕೊಡುತ್ತಿದ್ದರು. ಇದು ಸುಮಾರು 25-30ವರ್ಷಗಳವರೆಗೆ ನಡೆದಿರಬಹುದು. ಏನಾದರೊಂದು ಹೊಸವಿಚಾರದಲ್ಲಿ ಚಿಂತನೆ ನಡೆಸಬೇಕಾದಲ್ಲಿ ಅಗರಂರವರೇ ಆರಾಧ್ಯರ ಊರಿಗೆ ಬಂದು ಬಿಡುತ್ತಿದ್ದರು. ಅಥವಾ ಆರಾಧ್ಯರನ್ನೇ ಮೈಸೂರಿಗೆ ಕರೆಸಿಕೊಳ್ಳುತ್ತಿದ್ದರು. ಹೀಗೆ ಅವರಿಬ್ಬರ ಸಂಬಂಧ ಗಾಢವಾಗಿದ್ದ ಕಾರಣ ಆರಾಧ್ಯರು ಸಾಧ್ವಿಯ ಬಾಳ್ವೆಯಲ್ಲಿ ಸಹಭಾಗಿಗಳಾಗಿದ್ದರು.



**ಹುಟ್ಟು ಸ್ವಾತಂತ್ರ್ಯ ಪ್ರೇಮಿ:**

ಮಹಾತ್ಮ ಗಾಂಧೀಜಿಯ ಬಗ್ಗೆ ಆರಾಧ್ಯರಿಗೆ ಉತ್ಕಟ ವಿಶ್ವಾಸ. ಆ ವಿಶ್ವಾಸವೇ ಆರಾಧ್ಯರನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿತ್ತು ಮಹಾತ್ಮಾಜಿಯ ಮಾತುಗಳೆಂದರೆ, ಭಾಷಣವೆಂದರೆ ಇವರಿಗೆ ಮೈನವಿರೇಳುತ್ತಿತ್ತು ಗಾಂಧೀಜಿಯ ಪ್ರತಿ ಭಾಷಣದ ಕನ್ನಡ ಅವತರಿಣಿಕೆ ಇವರ ಕೈಸೇರುತ್ತಿತ್ತು. ಅದು ಯಾವ ಮೂಲದಿಂದ ಎಂದು ನನಗೆ ತಿಳಿಯದು. ಆ ಕನ್ನಡ ಅವತರಣಿಕೆಗಳು ಇವರ ಖಾಸಾಕೊಠಡಿಯಲ್ಲಿ ಕ್ರಮಬದ್ಧವಾಗಿ ದಿನಾಂಕಗಳ ಅನುಕ್ರಮಣಿಕೆಯಂತೆ ಜೋಡಿಸಿಟ್ಟಿದ್ದವು . 1942ರ ಚಳವಳಿಯಲ್ಲಿ ಆರಾಧ್ಯರೇ ಖುದ್ದು ಭಾಗವಹಿಸಲು ಮುಂದಾದಾಗ, ಜನರು ಮನೆ ಮಂದಿಯೆಲ್ಲಾ ಗೋಗರೆದು ಊರಿನ ವ್ಯವಹಾರ ನಿಭಾಯಿಸಲು ಆಗದೆಂಬ ಅಸಹಾಯಕತೆ ತೋಡಿಕೊಂಡಾಗ, ಆರಾಧ್ಯರು ಯಾರಿಗೂ ತಿಳಿಯಗೊಡದೆ ತಮ್ಮ ಅಳಿಯಂದಿರಾದ ಶ್ರೀಮಾನ್ ಸಾಗರೆ ಚಂದ್ರಶೇಖರಾರಾಧ್ಯರನ್ನು ಹುರಿದುಂಬಿಸಿ, ಅವರು ಮಾಡುತ್ತಿದ್ದ ಸರ್ಕಾರಿ ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ಕೊಡಿಸಿ ಪೂರ್ಣ ಪ್ರಮಾಣದ ಕಾರ್ಯಕರ್ತನಾಗಲು ಸಿದ್ಧಗೊಳಿಸಿ ಕಳುಹಿಸಿಕೊಟ್ಟರಂತೆ. ಶ್ರೀಮಾನ್ ಚಂದ್ರಶೇಖರಾರಾಧ್ಯರು ಚಳವಳಿ ನಡೆಸುತ್ತಿದ್ದಾಗ ಪೋಲೀಸರಬಂಧನಕ್ಕೆ ಒಳಗಾಗಿ ಸೆರೆ ಮನೆ ಸೇರಿದರು. ಭಾರತ ಸ್ವತಂತ್ರವಾದಾಗ ಜೈಲಿನಲ್ಲಿದ್ದ ಚಳವಳಿಗಾರರನ್ನು ಮುಕ್ತಗೊಳಿಸಿದರು. ಕೋಟೆ ತಾಲ್ಲೂಕಿನಿಂದ ಚಳವಳಿಯಲ್ಲಿ ಭಾಗವಹಿಸಿ, ಜೈಲುಶಿಕ್ಷೆ ಅನುಭವಿಸಿ, ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟವರು ಮರಳಿ ತಮ್ಮ ಊರಿಗೆ ಹಿಂದಿರುಗಿದಾಗ, ಆರಾಧ್ಯರು ಅವರಿಗೆಲ್ಲ ಭವ್ಯಸ್ವಾಗತ ನೀಡಿದರು. ಹಂಪಾಪುರದ ಪೋಲೀಸ್ ಠಾಣೆಯ ಎದುರು ಹಸಿರು ಚಪ್ಪರ ಹಾಕಿಸಿ,

ಚಳುವಳಿಗಾರರಿಗೆಲ್ಲ ಹೂವಿನಮಾಲೆ, ಗಾಂಧೀಹಾರ (ಚರಕದಿಂದ ತಯಾರಿಸಿದ ಹತ್ತಿದಾರದ ಹಾರ) ಹಾಕಿ, ಪ್ರತಿಯೊಬ್ಬರಿಗೂ ಎಳನೀರು ನೀಡಿ ಸನ್ಮಾನಿಸಿದ್ದನ್ನು ಆ ಭಾಗದ ಜನರು ಬಹಳ ದಿನಗಳವರೆಗೆ ಹಾಡಿ ಹೊಗಳಿದ್ದನ್ನು ನಾನು ಕೇಳಿದ್ದೇನೆ. ಇಂತಹ ಅಪ್ಪಟ ದೇಶಾಭಿಮಾನಿ, ಹುಟ್ಟು ಸ್ವಾತಂತ್ರ್ಯ ಹೋರಾಟಗಾರ, ಯಾರು ತಾನೆ ಮರೆಯಲು ಸಾಧ್ಯ? ಆದರೆ ಮರೆತಿದ್ದಾರೆ -ದುರ್ದೈವ.

**ಅಶ್ವಪ್ರಿಯ :**

ಕುಮಾರಾರಾಧ್ಯರು ಮತ್ತು ಇವರ ಸಹೋದರ ರೇವಣಾರಾಧ್ಯರು ಸಹಬಾಳ್ವೆ ನಡೆಸುತ್ತಿದ್ದರು. ಇಬ್ಬರೂ ಕುದುರೆಗಳನ್ನು ಸಾಕಿದ್ದರು. ಕುದುರೆ ಸವಾರಿ ಎಂದರೆ ಈರ್ವರಿಗೂ ಮೋಜು. ವಿಶೇಷತೆ ಎಂದರೆ ಕುಮಾರಾರಾಧ್ಯರು ತೆಳ್ಳಗಿದ್ದರು, ಆದರೆ ಅವರು ಏರುತ್ತಿದ್ದ ಕುದುರೆ ಅತಿ ಎತ್ತರವಾದದ್ದು, ರೇವಣಾರಾಧ್ಯರು ಸ್ಥೂಲ ಶರೀರಿ. ಅವರು ಏರುತ್ತಿದ್ದ ಕುದುರೆ ಬಹಳ ಚಿಕ್ಕದು ಹಾಗೂ ಮರಿಯಂತೆ ಕಾಣುತ್ತಿತ್ತು. ಈ ವಿರೋದಾಭಾಸಕ್ಕೆ ಕಾರಣವೇನಿತ್ತೊ ತಿಳಿಯದು. ಆರಾಧ್ಯರಿಗೆ ಕುದುರೆಗಳ ಬಗ್ಗೆ, ಅವು ಹಾಕುವ ಮರಿಗಳ ಬಗ್ಗೆ, ಅವುಗಳಲ್ಲಿ ಇರಬೇಕಾದ ಸುಳಿಗಳ ಬಗ್ಗೆ, ಅವುಗಳಿಗೆ ಬರುತ್ತಿದ್ದ ರೋಗದ ಬಗ್ಗೆ ವಿಶೇಷ ಜ್ಞಾನವಿತ್ತು. ಕೋಟೆಯ ಸುತ್ತಮುತ್ತಲ ಊರಿನಲ್ಲಿ ಕೆಲವರು ಕುದುರೆಗಳನ್ನು ಸಾಕಿದ್ದರು. ಅವರು ಬಂದು ಇವರಿಂದ ಕುದುರೆಗಳ ಬಗ್ಗೆ ತಿಳಿಯುತ್ತಿದ್ದರು. ಕೆಲವರು ಪುಕ್ಕಟೆಯಾಗಿ ಕುದುರೆ ಮರಿಗಳನ್ನು ಪಡೆದಿದ್ದರು, ಕೆಲವರು ಖರೀದಿಸಿದ್ದರು. ಒಂದು ಬಾರಿ ಆಶ್ಚರ್ಯದ ಸಂಗತಿಯೊಂದು ನಡೆಯಿತು. ಚಿನ್ನಹಳ್ಳಿಯಿಂದ 15 (ಮೈಲಿ ಅಂತರದಲ್ಲಿದ್ದ' ಹಳ್ಳಿಯವನೊಬ್ಬ ಕುದುರೆ ಖರೀದಿಸಿಕೊಂಡು ಹೋಗಿದ್ದ. ನಾಲ್ಕಾರು ದಿನ ಕಳೆದ ಬಳಿಕ ಆ ಖರೀದಿದಾರ ಆರಾಧ್ಯರ ಬಳಿ ಬಂದು ನನ್ನ ಕುದುರೆ ತಪ್ಪಿಸಿಕೊಂಡಿದೆ ಎಂದು ಅರುಹಿದ. ಆರಾಧ್ಯರು ಅನೇಕ ಗಂಟೆಗಳವರೆಗೆ ಒಂದು ತೆರನಾದ ಶಬ್ದವನ್ನು ಬಾಯಿಂದ ಹೊರಡಿಸಲು ಪ್ರಾರಂಭಿಸಿದರು ಈ ಕ್ರಿಯೆ ಸುಮಾರು ಎರಡು ದಿನಗಳವರೆಗೆ ನಡೆಯಿತಂತೆ. ಆಶ್ಚರ್ಯವೋ, ಕಾಕತಾಳೀಯವೋ ಅಥವಾ ತಪ್ಪಿಸಿಕೊಂಡ ಕುದುರೆಗೆ ತನ್ನ ಒಡೆಯನ ಮೇಲಿದ್ದ ಪ್ರೀತಿಯೋ ಎರಡು ದಿನ ಕಳೆದು ಮಾರನೆ ದಿನ ಆ ಕುದುರೆ ಓಡೋಡಿ ಬಂದು ಆರಾಧ್ಯರ ಮುಂದೆ ನಿಂತಿತಂತೆ. ಇದನ್ನು ನೋಡಿದ ಊರಿನವರೆಲ್ಲ ಬೆಚ್ಚಿ ಬೆರಗಾದರಂತೆ. ಅಂತಹ ಪ್ರೇಮ ಅಥವಾ ಮೋಡಿ ಅವರಲ್ಲಿತ್ತು.

**ಪಂಡಿತೋತ್ತಮ:**

ವಿಶೇಷ ಪೂಜಾಕಾರ್ಯಕ್ರಮಗಳಾದ ಅಭಿಷೇಕ, ಸಹಸ್ರನಾಮಾರ್ಚನೆ, ಹೋಮ ಹವನಾದಿಗಳಲ್ಲಿ, ವಟುದೀಕ್ಷಾ, ಮದುವೆ ಕಾರ್ಯಗಳಲ್ಲಿ ಪುರೋಹಿತರು ಕರಾರುವಾಕ್ಕಾಗಿ ಮಂತ್ರೋಚ್ಚಾರ,ಪೂಜಾ ವಿಧಾನವನ್ನು ನಡೆಸಿದರೆ ಇವರು ಹಸನ್ಮುಖರಾಗಿರುತ್ತಿದ್ದರು. ಅದರಲ್ಲಿ ಲೋಪ ಕಂಡುಬಂದರೆ, ಆ ಸಭೆಯಿಂದ ಮುಖ ಗಂಟಿಕ್ಕಿಕೊಂಡು ಹೊರ ನಡೆದು ಬಿಡುತ್ತಿದ್ದರಂತೆ.

ಕಾರ್ಯಕ್ರಮ ಮುಗಿದ ಬಳಿಕ ಪುರೋಹಿತರನ್ನು ತಮ್ಮ ಮನೆಗೆ ಕರೆಸಿಕೊಂಡು ಆತ ಮಾಡಿದ ತಪ್ಪುಗಳು ಏನು? ಯಾವ ಕ್ರಮ ಅನುಸರಿಸಬೇಕಾಗಿತ್ತು? ಮಂತ್ರೋಚ್ಚಾರದಲ್ಲಿ ಅಕ್ಷರಗಳು, ಉದಾತ್ತ - ಅನುದಾತ್ತಗಳು ಇವುಗಳಲ್ಲಿ ಆದ ತಪ್ಪು, ಅದರಿಂದ ಆಗುವ ಅನರ್ಥಗಳೇನು? ಇದೆಲ್ಲಾ ವಿವರವಾಗಿ ಗ್ರಂಥ, ಸಂಹಿತೆಗಳ ಆಧಾರ ಪೂರ್ವಕವಾಗಿ ವಿವೇಕ ನೀಡುತ್ತಿದ್ದರು. ತಮ್ಮ ಮನೆಯಲ್ಲೇ ಎರಡು ಮೂರು ದಿನಗಳವರೆಗೆ ಅಂತಹ ಪುರೋಹಿತ ವೃತ್ತಿ ಹಿಡಿದಿರುವವರನ್ನು ಇಟ್ಟುಕೊಂಡು ಅವರಿಗೆ ಅಶನ, ವಸನಗಳನ್ನು ನೀಡಿ, ಕಡೆಯಲ್ಲಿ ಅವರಿಗೆ ಬೇಕಾದ ಉಪಯುಕ್ತ ಗ್ರಂಥಗಳನ್ನು ಪುಕ್ಕಟೆಯಾಗಿ ನೀಡಿ, ಅವರುಗಳು ತಮ್ಮ ಊರಿಗೆ ಪ್ರಯಾಣ ಮಾಡಲು ಬಸ್‌ಛಾರ್ಜನ್ನೂ ಸಹ ಕೊಟ್ಟು ಕಳುಹಿಸುತ್ತಿದ್ದರು. ಪ್ರತಿಫಲಾಪೇಕ್ಷೆಯಾಗದೆ ತಮ್ಮ ವೃತ್ತಿಯನ್ನುಮುಂದುವರಿಸಿಕೊಂಡು ಹೋಗಲು, ಅದರಿಂದ ತಮ್ಮ ಸಂಸಾರ ಸುಸೂತ್ರವಾಗಿ ನಡೆಯಲು ಮಾರ್ಗದರ್ಶನ ನೀಡುತ್ತಿದ್ದ ಮಹಾನ್ ಪಂಡಿತೋತ್ತಮ ಕುಮಾರಾರಾಧ್ಯರಿಂದ ಮಾರ್ಗದರ್ಶನ ಪಡೆದು ಹೆಸರುವಾಸಿಯಾಗಿದ್ದ ಮಾದನಹಳ್ಳಿ ಗ್ರಾಮದ ಎಂ. ಗುರುದೇವಾರಾಧ್ಯರಿಗೆ ಪ್ರೋತ್ಸಾಹಿಸಿ, ಭಾಮಿನೀಷಟ್ಪದಿಯಲ್ಲಿ "ಪಂಪಾಶತಕಂ"ಎಂಬ ಪುಸ್ತಕವನ್ನು ಬರೆಸಿ, ಮುದ್ರಿಸಿ, ಪುಕ್ಕಟೆಯಾಗಿ ಹಂಚಿದ್ದರಂತೆ.

ಇದರಿಂದ ವ್ಯಕ್ತವಾಗುವ ವಿಷಯವೆಂದರೆ ಅವರಿಗಿದ್ದ ಭಾಷಾಜ್ಞಾನ, ಉಚ್ಚಾರಣೆ, ಸಾಹಿತ್ಯಾಸಕ್ತಿ ವ್ಯಾಕರಣಬದ್ಧವಿಚಾರಗಳ ಬಗ್ಗೆ ಯಾರಿಗಾದರೂ ಅಚ್ಚರಿ ಮೂಡಿಸುತ್ತಿತ್ತು. ಇಂತಹ ವ್ಯಕ್ತಿಗಳನ್ನು ಹುಡುಕಿದರೂ ಈಗ ಸಿಗುವುದಿಲ್ಲವೆಂದೆ ನನ್ನ ಭಾವನೆ.

**ಗ್ರಂಥಭಂಡಾರಿ:**

ಆರಾಧ್ಯರು ವಾಸಿಸುತ್ತಿದ್ದುದು 16 ಕಂಬದ ವಿಶಾಲವಾದ ತೊಟ್ಟಿಮನೆ. ಅದರಲ್ಲಿ ಅಡುಗೆ ಮನೆ, ಬಚ್ಚಲು ಮನೆ, ಪೂಜಾ ಕೋಣೆ, ಹಜಾರ, ಮಕ್ಕಳ ಆಟಕ್ಕಾಗಿ ತೂಗು ಹಾಕಿದ್ದ ತೊಟ್ಟಿಲು ಮನೆ, ಸಾಮಗ್ರಿಗಳನ್ನು ಇಡಲು ಕೋಣೆ, ಹೀಗೆ ಅನೇಕ ಭಾಗಗಳಿದ್ದವು, ಇವರ ಜೊತೆಗೆ ಒಂದು ವಿಶಾಲವಾದ ಕೋಣೆ ಆರಾಧ್ಯರಿಗೆ ಮೀಸಲಾಗಿತ್ತು. ಈ ಮೀಸಲು ಕೋಣೆಯಲ್ಲಿ ಆರಾಧ್ಯರು ಸಂಗ್ರಹಿಸಿದ್ದ ಓಲೆಗರಿ, ಗ್ರಂಥಗಳು, ವಿವಿಧ ರೀತಿಯ, ಭಾಷೆಯ ಪುಸ್ತಕಗಳು, ಪೂರ್ವೀಕರಿಂದ ಬಳುವಳಿಯಾಗಿ ಬಂದಿದ್ದ ಆಯುರ್ವೇದ ಓಲೆಗರಿ ಕಡತಗಳು, ಓಲೆಗರಿಯಲ್ಲಿ ಬರೆಯಲು ಕಬ್ಬಿಣದ ಲೇಖಣಿ, ಮರದ ಪೆಟಾರಿ, ಕುರ್ಚಿ, ಮೇಜುಗಳು ಇದ್ದವು. ಇವರ ಪ್ರತ್ಯೇಕ ಕೋಣೆಗೆ ಯಾರನ್ನೂ ಬಿಡುತ್ತಿರಲಿಲ್ಲ. ವರ್ಷದಲ್ಲಿ ಒಂದು ದಿನ ಮಾತ್ರ ಮನೆಯುವರಿಗೆಲ್ಲ ಈ ಕೋಣೆಯ ದರ್ಶನ ಲಾಭ ಸಿಗುತ್ತಿತ್ತು. ಆ ಪುಣ್ಯದ ದಿನವೆಂದರೆ ನವರಾತ್ರಿಕಾಲದಲ್ಲಿ ಬರುವ ಸರಸ್ವತೀ ಪೂಜಾ ದಿನ. ಅಂತಹ ಸಂದರ್ಭದಲ್ಲಿ ನಾವು ಕಂಡದ್ದು ನೂರಾರು ಓಲೆಗರಿಗ್ರಂಥಗಳು, ಸಾವಿರ ಸಂಖ್ಯೆಯನ್ನೂ ಮೀರಿಸಿದ್ದ ಪುಸ್ತಕಗಳು ಅದರಲ್ಲಿ ಭಾಗವತ, ರಾಮಾಯಣ, ಭಗವದ್‌ಗೀತೆ, ಉಪನಿಷತ್ ಗ್ರಂಥಗಳೂ ಸೇರಿದ್ದವು. ಅವುಗಳ

ಜೊತೆಗೆ ಒಂದು ಪಿಟೀಲು, ಮೃದಂಗ ಅದರ ಪಕ್ಕದಲ್ಲಿ ಒಂದು ತಂಬೂರಿ, ಇನ್ನೊಂದು ಕಡೆ ಭಾರತದ ಅನೇಕ ಮಹನೀಯರುಗಳು ಬರೆದ ಓಲೆಗಳು, ಅದರ ಪಕ್ಕದಲ್ಲಿ ಹತ್ತಾರು ವರ್ಷಗಳ ಸಾಧ್ವೀ ಪತ್ರಿಕೆಗಳು. ಎಲ್ಲಾ ಉದ್ಗ್ರಂಥಗಳ ಮಹಾಪೂರವೇ ಅಲ್ಲಿ ಅಡಕಗೊಂಡಿದ್ದವು. ಅವುಗಳೆಲ್ಲವನ್ನೂ ಒಪ್ಪ ಓರಣಗಳಿಂದ ಜೋಡಿಸಿಟ್ಟಿದ್ದರು. ಅದಕ್ಕೆಲ್ಲ ಅರಿಶಿನ, ಕುಂಕುಮದ ಬೊಟ್ಟುಗಳು, ಹೂಮಾಲೆ ಧರಿಸಿ ಪೂಜಿಸಿ ಶಾರದಾಪೂಜೆಯ ಕೊನೆಹಂತ ಮಂಗಳಾರತಿ ಸಮಯದಲ್ಲಿ ಮನೆ ಮಂದಿಯನ್ನೆಲ್ಲಾ ಕೋಣೆಯ ಒಳಗಡೆಗೆ ಬರಹೇಳುತ್ತಿದ್ದರು. ಮತ್ತೆ ಆ ಕೋಣೆಯ ಪ್ರವೇಶ ಪಡೆಯಬೇಕಾದರೆ ನಾವುಗಳು ಮತ್ತೊಂದು ವರ್ಷದ ಆ ಸುದಿನಕ್ಕಾಗಿ ಚಾತಕಪಕ್ಷಿಯಂತೆ ಕಾಯಬೇಕಾಗಿತ್ತು. ಅವರು ಗಳಿಸಿದ್ದ ಜ್ಞಾನ, ದೇಶ ಕಾಲಗಳ ವಿದ್ಯಮಾನ ಎಲ್ಲವನ್ನೂ ಅದೆಷ್ಟು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದರೆಂಬುದಕ್ಕೆ ಮೇಲಿನ ವಸ್ತುಸಂಗ್ರಹಾಲಯ, ಗ್ರಂಥಭಂಡಾರವೇ ಮೂಕ ಸಾಕ್ಷಿಗಳಾಗಿದ್ದವು. ಕಲಾಸೇವೆಯಲ್ಲೂ ಸಹ ಅವರು ಮುಂಚೂಣಿಯಲ್ಲಿದ್ದರೆಂಬುದಕ್ಕೆ ಜಿನ್ನಹಳ್ಳಿಯಲ್ಲಿ ಆಡುತ್ತಿದ್ದ "ಐರಾವತ" ಎಂಬ ಪೌರಾಣಿಕ ಯಕ್ಷಗಾನ ನಾಟಕಕ್ಕೆ ಅವರು ನೀಡುತ್ತಿದ್ದ ಸಹಕಾರ, ಸಹಾಯದಿಂದ ವೇದ್ಯವಾಗುವ ಸಂಗತಿ.

ಇಲ್ಲಿ ಒಂದು ವಿಚಾರ-ಅವರಲ್ಲಿದ್ದ ಓಲೆಗರಿ ಗ್ರಂಥಗಳನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕೊಡುಗೆ ನೀಡಬಯಸಿದ್ದರು - ಆ ವಿಚಾರ ಏನಾಯ್ತು? ಅಥವಾ ಆರಾಧ್ಯರು ಅನಾರೋಗ್ಯ ಪೀಡಿತರಾದಾಗ ಕಂಡವರ ಪಾಲಾಯಿತೋ? ತಿಳಿಯದು.

**ಧನ್ವಂತರಿಗಳ ಧನ್ವಂತರಿ:**

ತಮ್ಮ ಪೂರ್ವೀಕರಿಂದ ಬಂದಿದ್ದ ಕೆಲವು ಆಯುರ್ವೇದ ಔಷಧಗಳನ್ನು ತಯಾರುಮಾಡುತ್ತಿದ್ದರು. ಬೆಳ್ಳಿಭಸ್ಮ, ಚಿನ್ನದಭಸ್ಮ ಹೆಸರಾದವು. ಇವುಗಳನ್ನು ಸಿದ್ಧಪಡಿಸುವುದರಲ್ಲಿ ಪಡುತ್ತಿದ್ದ ಶ್ರಮ ಅಷ್ಟಿಷ್ಟಲ್ಲ. ತಮ್ಮ ಊರಿನ ಶ್ಯಾನುಭೋಗರ ಸಂಬಂಧಿ ಶಂಕರನಾರಾಯಣರವರು ಕಾರಣಾಂತರದಿಂದ ಕಾಲಿಗೆ ಗಾಯಮಾಡಿಕೊಂಡಿದ್ದರು. ಆರಾಧ್ಯರು ತಮಗೆ ತಿಳಿದ ಔಷದೋಪಚಾರ ನೀಡಿದರೂ ಸಹ ಗಾಯ ಮಾಯಲಿಲ್ಲ. ಕೀವು, ರಸಕು, ರಕ್ತ ಹರಿಯುತ್ತಲೇ ಇತ್ತು. ಮಂಡಿಯ ಕೆಳಭಾಗದ ಕಾಲು ಪೂರ್ತಿ ಗಾಯದ ಮಯವಾಗಿ, ಊದಿತ್ತು. ಕಾಲಿಡಲು ದುಸ್ತರವಾಗಿತ್ತು. ಒಂದು ದಿನ ಬೆಳಿಗ್ಗೆ ಅವರ ಕಾಲನ್ನು ಬೇವಿನ ಕಡ್ಡಿಗಳ ಬ್ರಷ್‌ನಿಂದ ಶುಚಿಗೊಳಿಸಿ, ತಾವೇ ತಯಾರಿಸಿದ ಮುಲಾಮು ಹಚ್ಚಿ ಕುಡಿಯಲು ಹಸಿರು ಔಷಧಕೊಟ್ಟು - ಇನ್ನು 21ದಿವಸಗಳು ಬೇಳೆ ಕಟ್ಟಿನ ಖಾರ ಹಾಕದ ಸಾರು ಅನ್ನ, ಮಜ್ಜಿಗೆ ಅನ್ನ ಮಾತ್ರ ಉಪಯೋಗಿಸಬೇಕು. ಯಾವ ಕಾರಣದಿಂದಲೂ ಸಿಹಿ, ಖಾರ, ಎಣ್ಣೆಯಲ್ಲಿ ಕರಿದ ಪದಾರ್ಥ ತಿನ್ನಬೇಡ -ಒಂದು ಪಕ್ಷ ನನಗೆ ಸುಳ್ಳು ಹೇಳಿ ತಿಂದರೆ ನಿನ್ನ ಕಾಲು ಕೊಳೆತು ಹೋಗಿ -ಕಾಲನ್ನು ಕಳೆದು ಕೊಳ್ಳುವಿ ಎಂದು ಎಚ್ಚರಿಸಿದರು. ಇದರಿಂದ ಆರಾಧ್ಯರ ಧನ್ವಂತರಿ ಬುದ್ಧಿ ಎಷ್ಟು ಚುರುಕುತನದಿಂದ ಕೂಡಿತ್ತು ಎಂಬುದು ವೇದ್ಯವಾಗುತ್ತದೆ. ಖಾರ ತಿಂದರೆ ಕರುಳಿನಲ್ಲಿ ಹುಣ್ಣಾಗಿ ತಿಂದ ಆಹಾರ ಜೀರ್ಣವಾಗುವುದಿಲ್ಲ. ಸಿಹಿ ತಿಂದರೆ ರಕ್ತದಲ್ಲಿ ಸಕ್ಕರೆ ಅಂಶ ಜಾಸ್ತಿಯಾಗಿ

ಗಾಯ ಮಾಯುವುದಿಲ್ಲ ಎಂಬುದನ್ನು ತಿಳಿದು ತಮ್ಮ ಧನ್ವಂತರಿ ಬುದ್ಧಿಯಿಂದ ರೋಗಿಯನ್ನು ಎಚ್ಚರಿಸುತ್ತಿದ್ದರು. ಈಗಿನ ಅಲ್ಸರ್ ಹಾಗೂ ಡಯಾಬಿಟೀಸ್ ಖಾಯಿಲೆ ಬಗ್ಗೆ ಪೂರ್ಣಪ್ರಮಾಣದ ಜ್ಞಾನ ಹೊಂದಿದ್ದರು. ಈ ವಿಚಾರದಲ್ಲಿ ಇವರ ಒಡನಾಡಿಗಳು ಮೈಸೂರು ಅರಮನೆ ವೈದ್ಯರಾಗಿದ್ದ ಸಿಂಗಾಪಂಡಿತರು. ಇವರಲ್ಲಿ ಅನೇಕ ಬಗೆಯ ಔಷಧೋಪಚಾರ, ವಿವಿಧ ಚೂರ್ಣ, ಭಸ್ಮ, ಲೇಪ್ಯ, ಗಿಡಮೂಲಿಕೆಗಳ ಸಂಸ್ಕರಣೆ ಬಗ್ಗೆ ಧೀರ್ಘ ಸಮಾಲೋಚನೆ ನಡೆಸುತಿದ್ದರು.

**ಅನ್ನದಾಸೋಹಿ :**

*"ಗುಟುಕು ಇದ್ದರೆ ಮೆಟಕು-ಮೆಟಕಿದ್ದರೆ ಮೆಡಗಾರಿಕೆ" ಅನ್ನತೋ ಪ್ರಾಣಾಃ -ಪ್ರಾಣತೋ ಪರಾಕ್ರಮಃ* ಎಂದು ಆಗಾಗ ಉಚ್ಚರಿಸುತ್ತಿದ್ದರು. ಮೇಲಿನ ವಾಕ್ಯಗಳನ್ನು ಜೀವನದಲ್ಲಿ ಅನುಷ್ಠಾನಗೊಳಿಸಿದ್ದರು. ಪ್ರತಿನಿತ್ಯ ನಾಲ್ಕಾರು ಜನರು ಊಟ ಮಾಡುತ್ತಿದ್ದರು. ಆ ಗುಂಪಿನಲ್ಲಿ ವಿದ್ಯಾರ್ಥಿಗಳು, ಸಂದರ್ಶನಕ್ಕೆ ಬಂದವರು, ಲೆಕ್ಕ ಪತ್ರ ಬರೆಸಲು ಬಂದವರು, ವ್ಯಾಜ್ಯ ಪರಿಹಾರಕ್ಕೆ ಬಂದವರು, ಹೀಗೆ ಅನೇಕ ರೀತಿಯ ಜನರು ಆರಾಧ್ಯರ ಮನೆಯ ಊಟಕ್ಕೆ ಭಾಜನವಾಗುತ್ತಿದ್ದರು. ಇದಿಷ್ಟು ಸಾಲದೆಂಬಂತೆ ರಕ್ತ ಸಂಬಂಧಿಗಳು ಯಾವಾಗಲೂ ಇರುತ್ತಿದ್ದರು. ಕುಮಾರಾರಾಧ್ಯರು ಮತ್ತು ಅವರ ಧರ್ಮ ಪತ್ನಿ *"ಅತಿಥಿದೇವೋ ಭವ"* ಭಾವನೆಯಲ್ಲಿ ಮುಂಚೂಣಿ ತಲುಪಿದ್ದರು. ಎಷ್ಟೋ ದಿನಗಳು ರಾತ್ರಿವೇಳೆ ಬಂದ ಅತಿಥಿಗಳಿಗೆ ಉಣಬಡಿಸಿ ಆರಾಧ್ಯರ ಧರ್ಮಪತ್ನಿ ಹಸಿದು ಮಲಗಿರುವುದೂ ಉಂಟು. ಮನೆಗೆ ಬಂದವರು ದೇವರ ಸಮಾನ, ಯಾರೂ ಅನ್ನ ಕಾಣದೆ ನಮ್ಮ ಮನೆಗೆ ಬರುವುದಿಲ್ಲ. ನಾವು ನೀಡುವುದು ಈಶ್ವರನಿಗೆ ಸಲ್ಲುತ್ತದೆ ಎಂಬ ಧೃಡನಂಬಿಕೆ ಅವರೀರ್ವರಲ್ಲೂ ಬೇರೂರಿತ್ತು.

ಈ ಸಮಯದಲ್ಲಿ ಮತ್ತೊಂದು ವಿಚಾರ ವಿಷದಪಡಿಸಲಿಚ್ಛಿಸುತ್ತೇನೆ. ಆರಾಧ್ಯರು ತಾವೇ ದುಡಿದು ಸಂಪಾದಿಸಿದ 25 ಎಕರೆ ಗದ್ದೆಯನ್ನು, ಮೈಸೂರು ಝಾನ್ಸಿಬಾಯಿ ರಸ್ತೆಯಲ್ಲಿರುವ ಆರಾಧ್ಯಮಹಾಸಭೆಗೆ ದಾನವಾಗಿ ಕೊಟ್ಟು ಅದರಿಂದ ಬರುವ ಆದಾಯದಲ್ಲಿ ಬಡವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡುವಂತೆ ತಿಳಿಸಿದರು. ಸ್ವಾರ್ಥದ ಈ ಕಾಲದಲ್ಲಿ ಅಂತಹ ತ್ಯಾಗಬುದ್ಧಿ, ಸಕಲರಿಗೂ ಲೇಸನ್ನೇ ಬಯಸುವ ಉದಾರ ನೀತಿ ನಿಜಕ್ಕೂ ಮೆಚ್ಚತಕ್ಕದ್ದೇ. ಈಗ ದುರ್ಬಿನ್ ಹಾಕಿ ಹುಡುಕಿದರೂ ಅಂತಹ ಪ್ರಜ್ಞಾವಂತ ಪುರುಷ ದೊರೆಯಬಲ್ಲರೆ?

**ಮೈಸೂರು ಮಹಾರಾಜರ ಸಂಬಂಧ :**

ಹಿಂದೆ ಹೆಗ್ಗಡದೇವನಕೋಟೆ ತಾಲ್ಲೂಕು "ಕಾರಾಪುರ"ದಲ್ಲಿ ಕಾಡಾನೆಗಳನ್ನು ಹಿಡಿಯಲು "ಖೆಡ್ಡಾ"ಕಾರ್ಯಕ್ರಮವನ್ನು ಪ್ರತಿ ವರ್ಷವೂ ಏರ್ಪಡಿಸುತ್ತಿದ್ದರು, ಒಂದು ಬಾರಿ ಆರಾಧ್ಯರೂ ಸಹ ತಮ್ಮ ಕುದುರೆ ಏರಿ ಖೆಡ್ಡಾ ವೀಕ್ಷಿಸಲು ತೆರಳಿದರು. ಅಂದು ಮೈಸೂರು ಮಹಾರಾಜರಾದ

ಕೃಷ್ಣರಾಜಒಡೆಯರ್ ಬಂದಿದ್ದರಂತೆ. ಆರಾಧ್ಯರು ತಮ್ಮ ಅಶ್ವವನ್ನು ಸ್ವಲ್ಪ ದೂರದ ಮರಕ್ಕೆ ಕಟ್ಟಿ ತಮ್ಮ ನಶ್ಯದ ಡಬ್ಬಿಯಿಂದ ನಶ್ಯ ತೆಗೆದು ಸೇವಿಸುತ್ತಿದ್ದರಂತೆ. ಕೃಷ್ಣರಾಜ ಒಡೆಯರ್ ಮಹಾ ಪ್ರಭುಗಳಿಗೂ ನಶ್ಯದ ಚಟವಿತ್ತಂತೆ, ಆದರೆ ಮಹಾರಾಜರ ನಶ್ಯದ ಡಬ್ಬಿ ಖಾಲಿಯಾಗಿತ್ತು. ನಶ್ಯ ಹಾಕಲು ಮನಸ್ಸು. ಆದರೆ ಡಬ್ಬ ಖಾಲಿ, ಅಟ್ಟಣಿಗೆಯ ಮೇಲಿದ್ದ ಮಹಾರಾಜರ ಕಣ್ಣಿಗೆ ಅದೃಷ್ಟವಶಾತ್ ನಶ್ಯ ಹಾಕುತ್ತಿದ್ದ ಆರಾಧ್ಯರು ಬಿದ್ದರು. ತಕ್ಷಣ ಮಹಾರಾಜರು ತಮ್ಮ ಅಧಿಕಾರಿಯನ್ನು ಇವರ ಬಳಿಗೆ ಕಳುಹಿಸಿ ಕರೆತರಲು ಆಜ್ಞಾಪಿಸಿದರಂತೆ. ಆರಾಧ್ಯರು ಮಹಾರಾಜರ ಸಮ್ಮುಖಕ್ಕೆ ಬಂದಾಗ ಇವರ ಪೂರ್ಣಪರಿಚಯ ಪಡೆದುಕೊಂಡು ನಮಗೆ ನಶ್ಯವನ್ನು ಕೊಡಬಲ್ಲಿರಾ? ಎಂದು ನಿವೇದಿಸಿದರಂತೆ. ಬಹಳ ಖುಷಿಯಿಂದ, ರಾಜಭಕ್ತಿಯೊಡನೆ ತಕ್ಷಣ ನಶ್ಯ ಸಿದ್ಧಮಾಡಿ ಅರ್ಪಿಸಿದರಂತೆ. ಇದು ಬಹಳ ಸ್ವಾದಿಷ್ಟವಾಗಿದೆ ಎಂದು ಹೇಳಿ ಮಾರನೆಯ ದಿನ ಅರಮನೆಗೆ ಬರಲು ಆಣತಿ ಇತ್ತರಂತೆ . ರಾಜಾಜ್ಞೆಯಂತೆ ಮಾರನೆಯ ದಿನ ಮಹಾರಾಜರನ್ನು ಭೇಟಿಯಾದಾಗ - ನಿಮಗೆ ಏನುಬೇಕು? ಕೇಳಿ ಎಂದರಂತೆ. ಆಗ ಆರಾಧ್ಯರು ನಿಮ್ಮ ದರ್ಶನ ಭಾಗ್ಯ, ನಿಮ್ಮೊಡನೆ ಸಂಭಾಷಿಸಿದ್ದೆ ನನಗೆ ಸಾಕು. ನಾನು ನಿಮ್ಮನ್ನು ನೋಡಬೇಕೆಂದಾಗ ಅಡೆತಡೆ ಇಲ್ಲದೆ ದರ್ಶನಭಾಗ್ಯವನ್ನು ನೀಡಿ ಎಂದು ಕೇಳಿಕೊಂಡರಂತೆ. ಇದನ್ನು ಕೇಳಿ ಮಹಾರಾಜರು ಆಶ್ಚರ್ಯಚಕಿತರಾಗಿ, ಎಂಥಾ ಸ್ವಾಭಿಮಾನ ನಿಮ್ಮದು ಎಂದು ಹೊಗಳಿದರಂತೆ. ಅಂದಿನ ವರ್ಷದಿಂದಲೇ ಶ್ರೀಮಾನ್ ಮಹಾರಾಜ ಭೂಪಾಲರು ಪ್ರತಿ ಕಾರ್ತೀಕಮಾಸದಲ್ಲಿ ಬರುವ ಎಲ್ಲ ಸೋಮವಾರಗಳಲ್ಲಿ ಆರಾಧ್ಯಜನಾಂಗದವರಿಗೆ ಪ್ರತ್ಯೇಕವಾಗಿ ತೊಂಬಾರ ಬಿಡದಿಯ ಮೇಲಿನ ಕೋಣೆಯಲ್ಲಿ ಭೋಜನ ಏರ್ಪಾಡುಮಾಡಿದರಂತೆ. ಈ ದಾಸೋಹದ ಹೆಗ್ಗಳಿಕೆ - ಮೊನೆ ಬಾಳೆಎಲೆಯಲ್ಲಿ 21ಬಗೆಯ ಭಕ್ಷ್ಯ ಭೋಜ್ಯಗಳು-ಕುಳಿತುಕೊಳ್ಳಲು ಹೊಳೆಯುವ ಕರಿಮರದ ಮಣೆಗಳು. ಮಹಾರಾಜರೇ ಬಂದು ಆರಾಧ್ಯಗುರುಸಮೂಹದಿಂದ ಮಂತ್ರಾಕ್ಷತೆ ಆಶೀರ್ವಾದ ಪಡೆಯುತ್ತಿದ್ದರು. ಕೊನೆಯಲ್ಲಿ ಪ್ರತಿಯೊಬ್ಬರಿಗೂ ತಾಂಬೂಲ ಹಾಗೂ ಉದಾರವಾಗಿ ದಕ್ಷಿಣೆ ನೀಡುತ್ತಿದ್ದರು. ಈ ಸತ್‌ಸಂಪ್ರದಾಯ, ಗುರುಭೋಜನ ಲೇಟ್ ಜಯಚಾಮರಾಜ ಒಡೆಯರ್ ಬಹದ್ದೂರ್ ಕಾಲದವರೆಗೂ ನಡೆದು ಬಂದು, ರಾಜಧನ ರದ್ದಾದ ಮೇಲೆ, ಅರಮನೆ ಅಧಿಕಾರಿಗಳು ಈ ಸಂಪ್ರದಾಯವನ್ನು ನಿಲ್ಲಿಸಿದರು...

**ರಾತ್ರಿಚಾವಡಿ:**

ಊರಿನ ಹಿರಿಯರು ಹಾಗೂ ಮುಖಂಡರುಗಳು -ರಾತ್ರಿವೇಳೆ ಊಟ ಮುಗಿಸಿದ ಮೇಲೆ ಆರಾಧ್ಯರ ಮನೆಯ ಜಗಲಿಯ ಮೇಲೆ ಅಥವಾ ರಾಮಮಂದಿರಲ್ಲಿ ಲೋಕಾಭಿರಾಮವಾಗಿ ಕುಳಿತು ತಮ್ಮ ತಮ್ಮ ಅಭಿಪ್ರಾಯಗಳನ್ನು ಸೂಚಿಸುತ್ತಿದ್ದರು. -ಹಾಗೂ ತಮ್ಮ ಊರಿನ ಬಗ್ಗೆ ಜಾತ್ರೆಗಳ ಬಗ್ಗೆ ಮತ್ತು ದೇಶದಲ್ಲಿ ಏನು ನಡೆಯುತ್ತಿದೆ ಎಂಬುದರ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು. ಊರಿನ ಪ್ರಮುಖರಾದ ಶಂಕರನಾರಾಯಣರವರು, ಉಪಾಧ್ಯಾಯ ಶ್ರೀನಿವಾಸಮೂರ್ತಿ, ಕೃಷ್ಣಮೂರ್ತಿ, ಅಂಚೆ ಇಲಾಖೆಯ ಬಂಗಾರು, ಪಟೇಲ್ ಬಸಪ್ಪ,

ಶ್ಯಾನುಭೋಗರಾದ ನರಸಿಂಹಮೂರ್ತಿ, ಸಣ್ಣಯ್ಯ, ತೋಪನಾಯ್ಕ ಮುಂತಾದವರು ಸಾಮಾನ್ಯವಾಗಿ ಭಾಗವಹಿಸುತ್ತಲೇ ಇದ್ದರು. ಯಾವುದೇ ವಿಚಾರವಾಗಲಿ, ಅರ್ಥವಾಗದ ಬಗೆ ಹರಿಯದ ಸಂಗತಿಗಳಾಗಲಿ ಇವರೆಲ್ಲರೂ ಒಕ್ಕೊರಲಿನಿಂದ ಹೇಳುತ್ತಿದ್ದ ವಿಷಯವೆಂದರೆ - ಆರಾಧ್ಯರ ತೀರ್ಮಾನಕ್ಕೆ ಬಿಡಿರಿ. ಅವರು ಆದಿಶಂಕರಾಚಾರ್ಯರಿಗೆ ಚಂದ್ರಮೌಳೇಶ್ವರ ಲಿಂಗವನ್ನು ಕೊಟ್ಟು ದೀಕ್ಷೆ ನೀಡಿದ ಮಹಾ ಗುರುಗಳಪ್ಪ, ಎಂದು ಕೀಟಲೆ ಮಾಡಿ ನಂತರ ಆರಾಧ್ಯರೊಬ್ಬರೆ ಕಗ್ಗಂಟನ್ನು ಬಿಡಿಸಲು ಸಮರ್ಥರೆಂದು ತೀರ್ಮಾನಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಆರಾಧ್ಯರು ವಿಚಾರಮಂಥನ ನಡೆಸಿ, ಅದಕ್ಕೆ ಸಂಬಂಧ ಪಟ್ಟ ಅನುಭವಿಗಳನ್ನು ಕಂಡು ವಿಚಾರಿಸಿ, ವಿವರಣೆ ಪಡೆದು ಮತ್ತೆ ಸಭೆ ಸೇರಿದಾಗ ಮಾರ್ಗದರ್ಶನ ಮಾಡುತ್ತಿದ್ದರು. ಅವರು ತೀರ್ಮಾನ ತೆಗೆದುಕೊಂಡರೆ ಅದು ನೂರಕ್ಕೆ ನೂರರಷ್ಟು ಸರಿಯಾಗಿರುತ್ತಿತ್ತು.

**ಆರಾಧ್ಯರ ಕೊನೆಯ ದಿನಗಳು:**

ಎಲೆಮರೆಯ ಕಾಯಿಯಂತೆ, ಬಲಗೈಲಿ ಮಾಡಿದ ದಾನ ಎಡಗೈಗೆ ತಿಳಿಯದ ರೀತಿ ಸಕಲರಿಗೂ ಒಳ್ಳೆಯದನ್ನೇ ಬಯಸುತ್ತಿದ್ದ ಈ ಮಹಾನ್ ಚೈತನ್ಯ ವಿಧಿಯ ಆಟಕ್ಕೆ ಒಳಗಾದುದು ಒಂದು ವಿಶೇಷವೇ ಸರಿ. ಆ ಸಂಗತಿ ರೋಚಕ. ಒಂದು ಮಧ್ಯಾಹ್ನ ಊಟಮಾಡಿ ಕುಳಿತು ತಮ್ಮ ಶಿಷ್ಯರ ಅಹವಾಲುಗಳನ್ನು ಕೇಳುತ್ತ ಕುಳಿತಿದ್ದರು. ಪರಿಚಿತರೊಬ್ಬರು ಬಂದು ತಮ್ಮ ಮನೆಗೆ ನೆಂಟರು ಬಂದಿದ್ದಾರೆ, ತರಕಾರಿ ಏನಾದರೂ ಕೊಡಿ ಎಂದು ಆರಾಧ್ಯರನ್ನು ಕೇಳಿಕೊಂಡರು. ಆರಾಧ್ಯರ ಮನೆಯಲ್ಲಿ ತರಕಾರಿ ಮುಗಿದಿದ್ದು-ಸದ್ಯದಲ್ಲಿ ಯಾವ ತರಕಾರಿಯೂ ಇಲ್ಲವಲ್ಲ ಎಂದು ಚಿಂತಿಸಿ ತಮ್ಮ ಹೊಲದಲ್ಲಿ ಬೆಂಡೆಕಾಯಿ ಇದೆ ಮತ್ತು ಹಲಸಿನ ಮರದಲ್ಲಿ ಹಲಸಿನ ಕಾಯಿಗಳು ಇವೆ , ಬಾ ಕೊಡುತ್ತೇನೆಂದು ಹೇಳಿ ಆ ಆಗಂತುಕರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಆರಾಧ್ಯರೇ ಸ್ವತಃ ಹಲಸಿನ ಮರವೇರಿ ಕಾಯಿ ಕೊಯ್ದಿದ್ದಾರೆ, ಆದರೆ ವಿಧಿವಿಲಾಸ ಏನಿತ್ತೋ ತಿಳಿಯದು-ಕಾಯಿ ಸಮೇತ ಆರಾಧ್ಯರು ನಿಂತಿದ್ದ ಟೊಂಗೆಯೂ ಸಹ ಮುರಿದುದರಿಂದ ಅವರು ಕೆಳಕ್ಕೆದೊಪ್ಪನೆ ಬಿದ್ದರು-ಕಾಲು ಮುರಿಯಿತು . ಎತ್ತಿನಗಾಡಿಯಲ್ಲಿ ಆರಾಧ್ಯರನ್ನು ಮನೆಗೆ ಕರೆ ತಂದರು, ಈ ವಿಚಾರ ಕಾಳ್ಗಿಚ್ಚಿನಂತೆ ಎಲ್ಲ ಊರಿಗೂ ಹಬ್ಬಿತು. ಜನಸಾಗರವೇ ಇವರ ಮನೆ ಮುಂದೆ ಸೇರಿತು. ಅದೊಂದು ವರ್ಣಿಸಲಾಗದ ಸನ್ನಿವೇಶ. ಜನರ ಕಣ್ಣೀರು ಧಾರಾಕಾರವಾಗಿ ಸುರಿಯಿತು. ಆರಾಧ್ಯರೇ ತಮಗೆ ತಿಳಿದ ವೈದ್ಯಮಾಡಿದರು. ಜಟ್ಟಿಯಿಂದ ಪಟ್ಟು ಕಟ್ಟಿಸಿದರು. ಉಪಯೋಗವಾಗಲಿಲ್ಲ. ನಡೆದಾಡಲಿಲ್ಲ. ಕಡೆಗೆ ಮೈಸೂರಿನ ದೊಡ್ಡಾಸ್ಪತ್ರೆ (ಕೃಷ್ಣರಾಜೇಂದ್ರ ಆಸ್ಪತ್ರೆ)ಯಲ್ಲಿ ಕಾಲಿಗೆ ಮೂರು ತಿಂಗಳ ಕಾಲ ಅಲುಗಾಡದಂತೆ ಪ್ಲಾಸ್ಟರ್ ಮಾಡಿದರು - ಅನಂತರ ಬಿಚ್ಚಿದಾಗಲೂ ಕಾಲು ನೆಟ್ಟಗಾಗಿ ಬಗ್ಗಲಿಲ್ಲ. ಈಗಿನ ರೀತಿ ವೈದ್ಯ ವಿಜ್ಞಾನ ಮುಂದುವರೆದಿರಲಿಲ್ಲ. ವಿಧಿಯ ಮನದಲ್ಲಿ ಏನಿತ್ತೊ-ಒಬ್ಬ ಸಾಮಾನ್ಯ ಮನುಷ್ಯ ಇಷ್ಟೊಂದು ಕೆಲಸ ಮಾಡುವುದು, ಜನಾನುರಾಗಿಯಾಗಿದ್ದುದು ಆ ದೈವಕ್ಕೂ ಅಸೂಯೆ ಬಂದಿರಬೇಕು.

ಆರಾಧ್ಯರ ಚಟುವಟಿಕೆ ಪೂರ್ಣಪ್ರಮಾಣದಲ್ಲಿ ನಿಂತಿತು, ನಿತ್ಯಕರ್ಮಕ್ಕೂ ಬೇರೆಯವರನ್ನು ಅವಲಂಬಿಸುವ ಪರಾವಲಂಬಿಯಾಗಿಬಿಟ್ಟರು. ಕೊನೆಯ 5-6 ವರ್ಷಗಳನ್ನು ಮೈಸೂರಿನಲ್ಲಿರುವ ಆರಾಧ್ಯರ ಭಾವಮೈದುನರ ಮನೆ ಮತ್ತು ತಮ್ಮನ ಮಗಳ ಮನೆಯಲ್ಲಿ -ಹಾಸಿಗೆ ಹಿಡಿದು ಮಲಗಿ ಕಳೆಯಬೇಕಾಯಿತು. ಆದರೆ ಎಲ್ಲರೂ ಪ್ರೀತಿಯಿಂದಲೇ ಅವರ ಸೇವೆ ಮಾಡಿ ತಮ್ಮ ಪಾಪಗಳನ್ನು ತೊಳೆದುಕೊಂಡರು.

ಇಂತಹ ಮಹಾನ್‌ಶಕ್ತಿ, ವ್ಯಕ್ತಿಯಾಗಿ ಮತ್ತೆ ಉದಯಿಸಲಿ.ಎ ಜಿನ್ನಹಳ್ಳಿ ಮಠದ ಆರಾಧ್ಯ ಜನಾಂಗದ ಮಹಾಗುರು ಮತ್ತೊಮ್ಮೆ ಹುಟ್ಟಿ ಬಂದು ಮನುಕುಲಕ್ಕೆ ದಾರಿದೀಪವಾಗಲಿ ಎಂದು ನನ್ನ ಒಳಮನಸ್ಸು ಬಯಸುತ್ತಿದೆ. ಇವರ ಬಗ್ಗೆ ಬರೆಯುತ್ತಾ ಹೊರಟರೆ ಸಾವಿರ ಪುಟಗಳೂ ಸಾಲದು. ಆರಾಧ್ಯರು ಮಾಡಿದ ಜನಸೇವೆಯ ಮ್ಯಾರಥಾನ್ ಓಟವನ್ನು ಯಾರಾದರೂ ಮುಂದುವರಿಸಲಿ ಎಂದು ನನ್ನ ಮನವಿ.

ಓಂ ಶಾಂತಿ

* * *

ಜಿ - ಜಿನ ತತ್ತ್ವವ ಮೈಗೂಡಿಸಿ ಕೊಂಡು

ನ್ನ - ನನ್ನದೆಂಬ ಅಭಿಮಾನವ ತೊರೆದು

ಹ - ಹರಿಕಾರ ಮುಡಿಪು ತೊಟ್ಟು

ಳ್ಳಿ - 'ಳ'ಕಾರದ ಬಹಳಷ್ಟು ಜವಾಬ್ದಾರಿ ಹೊತ್ತು

ಕು - ಕುಮಾರೇಶ್ವರನಲ್ಲಿ ಅಚಲಭಕ್ತಿ ಇಟ್ಟು

ಮಾ - ಮಾರ್ದನಿಯ ಮಾದರಿಯ ಹೊರಸೂಸಿ

ರ - ರಗಳೆ, ರಂಪಟಗಳ ನಿವಾರಿಸಿ

ಆ - ಆರಾಧಿಸಿಕೊಳ್ಳಲು ಸರ್ವಗುಣಸಂಪನ್ನರಾಗಿ

ರಾ - ರಾರಾಜಿಸಿದ ದಿವ್ಯಚೇತನ

ಧ್ಯ - ಧನ್ಯ ನಿಮ್ಮ ಜೀವನ -ಅಮರಜೀವಿ

ಇವರೇ ಜಿನ್ನಹಳ್ಳಿ ಕುಮಾರಾರಾಧ್ಯರು - ಓಂ ಪರಮ ಪರಂಜ್ಯೋತಿ - ಇಗೋ ನಿಮಗೆ ಕೋಟಿ -ಕೋಟಿ ನಮನಗಳು

ಶ್ರೀಮತಿ ವನಲಕ್ಷ್ಮಿ ಪ್ರಸನ್ನ ಆರಾಧ್ಯ
ಎಲೆಕ್ಟ್ರಿಕಲ್ ಇಂಜಿನಿಯರ್, ಬೆಂಗಳೂರು

# ಕೀ|| ಶೇ|| ದೊಡ್ಡ ಆರಾಧ್ಯರು

ಜಿನ್ನಹಳ್ಳಿ ಆರ್. ಕುಮಾರಾರಾಧ್ಯರನ್ನು ನೆನಪಿಸುವುದಕ್ಕೆ ನನಗೆ ಅವಕಾಶ ಸಿಕ್ಕಿದುದು ಒಂದು ಸಂತಸದ ಸುದ್ದಿ. ಏಕೆಂದರೆ ದೊಡ್ಡಆರಾಧ್ಯರು ಅಂತಹ ಉತ್ತಮ ಮನುಷ್ಯರು. ಅವರ ಸಾಧನೆಯನ್ನು ತಿಳಿಸುವುದು ನನಗೆ ಹೆಮ್ಮೆಯ ವಿಚಾರ. ಒಬ್ಬ ನಿಷ್ಠಾವಂತ ಆಡಳಿತಗಾರರಾಗಿಯೂ, ನ್ಯಾಯವಾದಿಯಾಗಿಯೂ, ಸಮಾಜಸುಧಾರಕರಾಗಿಯೂ, ದೈವಭಕ್ತನಾರಾಯೂ, ಮಹಾದಾನಿಯಾಗಿಯೂ, ತತ್ತ್ವನಿಷ್ಠರಾಗಿಯೂ ಇರುವಂಥವರನ್ನು ತಮಗೆ ಪರಿಚಯಿಸುವುದು ನನ್ನ ಸೌಭಾಗ್ಯವೇ ಆಗಿರುತ್ತದೆ.

ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ತಾಲ್ಲೂಕು, ಹಂಪಾಪುರ ಹೋಬಳಿ, ಜಿನ್ನಹಳ್ಳಿ ಗ್ರಾಮದ ಕೀ|| ಶೇ|| ವೇ|| ಬ್ರಂ|| ಶ್ರೀ|| ರೇವಣಾರಾಧ್ಯರು ಮತ್ತು ಶ್ರೀಮತಿ ಬಸವಾಜಮ್ಮನವರ ಮೂರನೆ ಗರ್ಭಾಂಬುಧಿಯಲ್ಲಿ ಮೊದಲ ಮಗನಾಗಿ 1885ರಲ್ಲಿ ಜನಿಸಿದರು. ಇವರು ಚಿಕ್ಕಂದಿನಿಂದಲೂ ಬಲು ಚಟುವಟಿಕೆಯುಳ್ಳವರು. ಚೂಟಿಯಾದವರು. ವಿದ್ಯೆಯಲ್ಲಿ ನಿಷ್ಠೆಯಿಂದ ಅಭ್ಯಾಸಮಾಡಿ ಒಂದು ಶಿಸ್ತಿನ ಜೀವನ ಬೆಳೆಸಿಕೊಂಡವರು. ಆರಾಧ್ಯರ ಮನೆತನವು ಉತ್ತಮ ಮತ್ತು ನಿಷ್ಠಾವಂತ ವಂಶವಾಗಿತ್ತು. ಇವರ ಜೀವನವು ಹಸನಾದ ಮಾರ್ಗದಲ್ಲಿ 76 ವರ್ಷಗಳ ಸಾರ್ಥಕ ಬದುಕನ್ನು ನಡೆಸಿ ಎಲ್ಲರ ಬಾಯಲ್ಲು ಆರಾಧ್ಯರಂತೆ ಬಾಳು ನಡೆಸಬೇಕು ಎಂಬುದನ್ನು ಅವರೇ ಕೇಳಿ ಆನಂದಿಸಿದವರು 1961ರಲ್ಲಿ ಅವರ ಜೀವನದ ಮಹಾನೌಕೆಯು ಆಚೆ ದಡ ಸೇರಿತು.

ದೊಡ್ಡ ಆರಾಧ್ಯರು ಶ್ರೀಮಂತ ಕುಟುಂಬದಲ್ಲಿ ಜನಿಸಿದವರಲ್ಲ. ಆದಾಗ್ಯೂ ತಾವು ಎಲ್ಲರೊಡನೆ, ಎಲ್ಲ ಕಡೆಯಲ್ಲೂ ಸ್ನೇಹದ ಬದುಕನ್ನು ನಡೆಸಿದವರು. ಆರಾಧ್ಯರಲ್ಲಿ ಒಂದು ಸಲ ಮಾತನಾಡಿ ಹೋದವರು ಮತ್ತೆ ಅವರನ್ನು ನೋಡಿ ಮಾತನಾಡಬೇಕೆಂಬ ಹಂಬಲ ತರುವಂತಹ ಶಕ್ತಿ ಅವರಲ್ಲಿ ಇತ್ತು. ಅರಾಧ್ಯರೊಡನೆ ಮಾತನಾಡಿದರೆ ನಮ್ಮ ಮನಸ್ಸಿಗೆ ಒಂದು ಬಗೆಯ ಆನಂದ ತರುತ್ತಿತ್ತು. ಹೀಗಾಗಿ ಅವರಿಗೆ




**- ಕೆ. ಎ. ಕರುಂಬಯ್ಯ**
(ನಿ.) ಸಹ ನಿರ್ದೇಶಕರು
ಸರ್ಕಾರಿ ಮುದ್ರಣಾಲಯ
# 4579,
ಗಣೇಶ ದೇವಸ್ಥಾನದ ರಸ್ತೆ,
ಎನ್. ಆರ್. ಮೊಹಲ್ಲ,
ಮೈಸೂರು - 7. ☎ : 2441461.

ಸ್ನೇಹಬಳಗ ಹೆಚ್ಚಾಗಿತ್ತು. ಆರಾಧ್ಯರು ಉಪಕಾರ ಮನೋಭಾವ ಹೊಂದಿದವರು. ಇವರು ಮಹಾದಾನಿಗಳಾಗಿದ್ದರು. ಇದು ಎಲ್ಲರಿಗೂ ತಿಳಿದಂತಹ ವಿಚಾರ . ಮೈಸೂರಿನ ಆರಾಧ್ಯ ಮಹಾಸಭೆಗೆ, ಶಾರದಾನಿಕೇತನವಿದ್ಯಾರ್ಥಿನಿಲಯಕ್ಕೆ, ಜೈನಬೋರ್ಡಿಂಗ್‌ಗೆ, ಹಂಪಾಪುರದ ಆಸ್ಪತ್ರೆಗೆ ಮತ್ತು ಕೆಂಡಗಣ್ಣಸ್ವಾಮಿಗದ್ದಿಗೆಯ ದೇವಸ್ಥಾನಕ್ಕೆ ಜಮೀನನ್ನು ದಾನ ಮಾಡಿರುತ್ತಾರೆ. ಹಂಪಾಪುರದ ಆಸ್ಪತ್ರೆಯವರು ಅಂದರೆ ಸರಕಾರ ಸದರಿ ಜಮೀನನ್ನು ಆಗಲೇ ಮಾರಿ ಬಂದ ಮೊಬಲಗನ್ನು ಹೆಚ್. ಡಿ. ಕೋಟೆ ತಾಲ್ಲೂಕು ಖಜಾನೆಯಲ್ಲಿ ಜಮಾಮಾಡಿ (ಡಿಪಾಜಿಟ್ ಇಟ್ಟು) ಅದರ ಬಡ್ಡಿಯನ್ನು ಬಳಸಿ ಆಸ್ಪತ್ರೆಯ ರೋಗಿಗಳಿಗೂ ಚಿಕ್ಕ ಮಕ್ಕಳಿಗೂ ಹಾಲು ನೀಡುವ ವ್ಯವಸ್ಥೆ ಅಂದೇ ಮಾಡಿಸಿರುತ್ತಾರೆ. ಹೀಗೆ ಇವರು ಜೀವನಪರ್ಯಂತ ಕೊಡುಗೈ ಕರ್ಣನಂತೆ ಬಾಳಿದ ಮಹಾಪುರುಷರು.

ದೊಡ್ಡಆರಾಧ್ಯರಿಗೆ ಒಬ್ಬ ತಮ್ಮನಿದ್ದುದರಿಂದ ಇವರಿಗೆ ದೊಡ್ಡಆರಾಧ್ಯರೆಂದು, ಅವರಿಗೆ ಚಿಕ್ಕಆರಾಧ್ಯರೆಂದು ಬಳಸುವುದು ರೂಢಿಯಾಗಿತ್ತು. ಯಾರೂ ಆ ಪ್ರದೇಶದಲ್ಲಿ ಇವರ ಮನೆತನದವರ ಹೆಸರನ್ನು ಹಿಡಿದು ಕೂಗುವುದು ಪದ್ಧತಿಯಿಲ್ಲ. ಗೌರವ ಪೂರ್ವಕವಾಗಿ ಆರಾಧ್ಯರೆಂದು ಸಂಭೋದಿಸುವುದು ಕಂಡು ಬಂದ ಸಂಗತಿಯಾಗಿದೆ. ಆರಾಧ್ಯರು ದೇಶ, ಭಾಷೆಗಳಿಗೆ ಯಾವಾಗಲೂ ದುಡಿಯಲು ಸಿದ್ಧರಿದ್ದ ಸಿಪಾಯಿಯಾಗಿದ್ದರು. ಹಂಪಾಪುರದ ಶಾಲೆಗಳು, ಆಸ್ಪತ್ರೆ, ಪಶುವೈದ್ಯಶಾಲೆ, ರಸ್ತೆಗಳು ಹೀಗೆ ಹಲವು ಹತ್ತು ಕೆಲಸಗಳನ್ನು ನಾಡಿಗಾಗಿ ಸಂಬಂಧಿಸಿದವರಲ್ಲಿ ಮಂಜೂರಾತಿ ಮಾಡಿಸಿ, ಅದಕ್ಕೆ ಕಟ್ಟಡಗಳನ್ನು ಸೂಕ್ತ ಸ್ಥಳಗಳಲ್ಲಿ ವ್ಯವಸ್ಥೆ ಮಾಡಿಸುವುದು ಇವರ ಸ್ವಭಾವವಾಗಿತ್ತು. ಸಂತೆ ಜಾತ್ರೆಗಳನ್ನು ಮಂಜೂರುಮಾಡಿಸುವುದು, ದೇವರ ಕೆಲಸಗಳಲ್ಲಿ ಹೆಚ್ಚು ಆಸಕ್ತಿ, ಭಕ್ತಿಯಿಂದ ದುಡಿದ ಧೀಮಂತರು ಆರಾಧ್ಯರು ಎಂದರೆ ಅತಿಶಯೋಕ್ತಿಯಾಗಲಾರದು.

ಆರಾಧ್ಯರು ಸುಮಾರು ಹತ್ತು ವರ್ಷಗಳು ಅಂದರೆ 1944 ರಿಂದ 1954ರವರೆಗೆ ಹಂಪಾಪುರದ ವಿಲೇಜ್ ಮುನ್‌ಶೀಫ್ ಕೋರ್ಟಿನಲ್ಲಿ , ಮುನ್‌ಶೀಫ್‌ರಾಗಿ ಸೇವೆ ಮಾಡಿದವರು.

ಆಗ ತಾಲ್ಲೋಕಿನಾದ್ಯಂತ ದೊಡ್ಡ ಆರಾಧ್ಯರನ್ನು ಉತ್ತಮ ನ್ಯಾಯಾಧೀಶರೆಂದು ಜನಸಾಮಾನ್ಯರು ಹಾಡಿ ಹೊಗಳಿದರು. ಇಂತಹ ಮಹಾಗುಣವುಳ್ಳ ವ್ಯಕ್ತಿಯಾಗಿದ್ದರು. ಜನರನ್ನು ವಿನಾಕಾರಣ ಕೆಲಸಕ್ಕೆ ಸುತ್ತಾಡಿಸುವುದು ಅವರಲ್ಲಿರಲಿಲ್ಲ. ನ್ಯಾಯವನ್ನು ನಿಖರವಾಗಿ ನೀಡಿ ಉಭಯತ್ರರಿಗೂ ತಿಳಿವಳಿಕೆಯನ್ನು ತಿಳಿಸಿ ಅವರ ವ್ಯಾಜ್ಯವನ್ನು ತಕ್ಷಣ ತೀರ್ಪು ನೀಡುವ ಗುಣ ಅವರಲ್ಲಿತ್ತು ; ಈಗಲು ಜಿಲ್ಲಾನ್ಯಾಯಾಲಯದಲ್ಲಿ ಇವರು ನೀಡಿದ ತೀರ್ಪುಗಳಿವೆ. ಆಸಕ್ತರು ನೋಡಬಹುದು. ಅವೆಲ್ಲವೂ ಕನ್ನಡಭಾಷೆಯಲ್ಲಿ ಅಂದೇ ನೀಡಿದ ಮಹಾಸಾಧನೆಯನ್ನು ದೊಡ್ಡ ಆರಾಧ್ಯರು ಮಾಡಿದವರು. ಇಂತಹವರನ್ನು ತಮಗೆ ಈ ಮೂಲಕ ಪರಿಚಯಿಸುವುದು ನನ್ನ ಕರ್ತವ್ಯ. ಇವರ ಅಳಿಯ ಜೆ. ಸಿ. ಚಂದ್ರಶೇಖರಾರಾಧ್ಯರು, ಶಿಕ್ಷಕರು ಮತ್ತು ಸ್ವಾತಂತ್ರ್ಯಹೋರಾಟಗಾರರು.ಇವರ ಏಕಮಾತ್ರ ಪುತ್ರರಾದ *ಆರಾಧ್ಯಸಂಪದ* ಮತ್ತು *ಮುನಿಸಂದೇಶ*ಕನ್ನಡ ಮಾಸಿಕದ ಪತ್ರಕರ್ತರು ಆದ ಜಿನ್ನಹಳ್ಳಿ ನಾಗಭೂಷಣರಾಧ್ಯರು ಆತ್ಮೀಯ ಸ್ನೇಹ ಹೊಂದಿದ್ದು ನನಗೆ ತುಂಬಾ ಹೆಮ್ಮೆಯಾಗುತ್ತದೆ.

* * *

# ಧರ್ಮೋ ರಕ್ಷತಿ ರಕ್ಷಿತಃ

ಸತ್ಯ ಮತ್ತು ಅಹಿಂಸೆ ಒಂದೇ ನಾಣ್ಯದ ಎರಡು ಮುಖಗಳು. ಎಲ್ಲಿ ಸತ್ಯ, ಅಹಿಂಸೆ, ನ್ಯಾಯ, ಧರ್ಮ ಮತ್ತು ಪ್ರಾಮಾಣಿಕತೆಯಿದೆಯೋ ಅಲ್ಲಿ ಅವ್ಯವಹಾರಗಳಿಗೆ ಅವಕಾಶವಿಲ್ಲ. ಪರಸ್ಪರರಲ್ಲಿ ಗೌರವ ಪ್ರೀತಿ-ವಿಶ್ವಾಸ, ಔದಾರ್ಯ, ದಯೆ ಆಚರಣೆಯಲ್ಲಿರಬೇಕು. ದಯೆ ಇಲ್ಲದ ಧರ್ಮ ಯಾವುದಯ್ಯಾ, ದಯೆಯೇ ಧರ್ಮದ ಮೂಲವಯ್ಯ, ದಯೆ ಇರಬೇಕು ಸಕಲ ಪ್ರಾಣಿಗಳಲ್ಲಿ ಎಂದಿದ್ದಾರೆ ಬಸವಣ್ಣ. ಕಪಟ, ಮೋಸ, ವಂಚನೆ ಮಾಡಬಾರದು. ಮತ್ತೊಬ್ಬರ ಮನ ನೋಯಿಸಬಾರದು, ಕೈಲಾದ ಮಟ್ಟಿಗೆ ಪ್ರತಿ ವ್ಯಕ್ತಿಯೂ ದಾನ-ಧರ್ಮ, ಪರೋಪಕಾರ, ಮಾಡಬೇಕೆಂಬುದೆ ಜಗತ್ತಿನ ಯಾವುದೇ ಧರ್ಮದ ಸಾರವಾಗಿದೆ.

ಅದೆಷ್ಟೋ ಮಹಾನುಭಾವರು ತಮ್ಮ ನಡೆ-ನುಡಿ ಆಚಾರ-ವಿಚಾರಗಳಲ್ಲಿ ಎಂತಹ ಕಠಿಣ ಪರಿಸ್ಥಿತಿ ಬಂದರೂ ತಾವು ಮಾಡಿದ ವೃತ್ತಿಜೀವನದಲ್ಲಿ ಧಾರ್ಮಿಕತೆಯನ್ನು ಪಾಲಿಸಿಕೊಂಡು ಬಂದಿದ್ದಾರೆ. ಸತ್ಯಕ್ಕೆ ಹೆಸರೇ ಹರಿಶ್ಚಂದ್ರ ಎನ್ನಬಹುದು. ತಾನು ಸ್ಮಶಾನ ಕಾಯುತ್ತಿದ್ದಾಗ ತನ್ನ ಮಗನ ಶವಸಂಸ್ಕಾರಕ್ಕೆ ಅಲ್ಲಿನ ನಿಯಮದಂತೆ ತೆರಿಗೆ ಕೊಡಲಾಗದ ಮಡದಿ ಚಂದ್ರಮತಿಯನ್ನು ಕುರಿತು, ಈ ತೆರಿಗೆಯಲ್ಲಿ ನನಗೆ ಸೇರಬೇಕಾದ್ದನ್ನು ನಾನು ಬಿಡಬಲ್ಲೆ, ಆದರೆ ನನ್ನ ಧಣಿಗೆ ಸೇರಬೇಕಾದ್ದನ್ನು ನೀನು ಕೊಡಲೇಬೇಕು, ಎಂದು ನಿಷ್ಠುರವಾಗಿ ಹೇಳುವ ಪ್ರಸಂಗ ಆತನ ಸತ್ಯ ಮತ್ತು ಧರ್ಮಪಾಲನೆಯನ್ನು ನಿರೂಪಿಸುತ್ತದೆ. ವಿಶ್ವಾಮಿತ್ರ, ನಕ್ಷತ್ರಿಕರಿಂದ ಅದೆಷ್ಟೋ ಕಷ್ಟ, ನೋವು ಅಪಮಾನಗಳನ್ನು ಅನುಭವಿಸಿದರೂ ಕೋಪಗೊಳ್ಳದೆ ಶಾಂತ ಚಿತ್ತನಾಗಿ ಸತ್ಯಕ್ಕಾಗಿ ನಡೆಸುವ ಅವನ ಹೋರಾಟ ಸಾಮಾನ್ಯವಲ್ಲ. ಕೊನೆಯಲ್ಲಿ ಸತ್ಯಕ್ಕೆ ಸಿಕ್ಕ ಜಯ ಎಲ್ಲರಿಗೂ ತಿಳಿದಿದೆ.



**-ಕೆ. ಎಸ್. ಜಯಶಂಕರಾರಾಧ್ಯ,**
ಎಂ. ಎ., ಆರ್.ಬಿ.ವಿ.
# 97, 6ನೇ ತಿರುವು,
ಸ್ವರ್ಣಸಂದ್ರ,
ಸಕ್ಕರೆ ನಗರ ಅಂಚೆ ,
ಮಂಡ್ಯ - 570 402

ಒಮ್ಮೆ ಹರಿಶ್ಚಂದ್ರ ನಾಟಕ ನೋಡಿದ ಮೋಹನದಾಸ ಕರಮಚಂದ ಗಾಂಧಿ ತಮ್ಮ ಜೀವಮಾನದುದ್ದಕ್ಕೂ ಸತ್ಯ ಮತ್ತು ಅಹಿಂಸೆಯನ್ನು ಚಾಚೂತಪ್ಪದೆ ಪಾಲಿಸಿಕೊಂಡು ಬಂದರು. ಸತ್ಯ ಮತ್ತು ಅಹಿಂಸೆಯನ್ನೆ ತಮ್ಮ ಅಸ್ತ್ರಗಳನ್ನಾಗಿ ಉಪಯೋಗಿಸಿಕೊಂಡು ನ್ಯಾಯ ಮತ್ತು ಧರ್ಮದಿಂದ ಕಠಿಣ ಹೃದಯದವರನ್ನು ಮಣಿಸಿ ಭಾರತಕ್ಕೆ ಸ್ವಾತಂತ್ರ್ಯಗಳಿಸಿಕೊಟ್ಟರು. ಲೋಕಮಾನ್ಯರಾದರು, ಪೂಜ್ಯರಾದರು, ಮಹಾತ್ಮರೆನಿಸಿದರು. ದೇಶದ ಎಲ್ಲ ಕಛೇರಿಗಳಲ್ಲಿ ಅದರಲ್ಲಿಯೂ ನ್ಯಾಯಾಲಯಗಳ ನ್ಯಾಯಾಧೀಶರ ಪೀಠದ ಮೇಲ್ಭಾಗದಲ್ಲಿ ಮಹಾತ್ಮಗಾಂಧಿಯವರ ಭಾವಚಿತ್ರವಿದೆ. ಇದು ನ್ಯಾಯದ ಪ್ರತೀಕವಾಗಿದೆ ಎನ್ನಬಹುದು. ನ್ಯಾಯಾಲಯಗಳಲ್ಲಿ ತಕರಾರಿಗೆ ಸಂಬಂಧಪಟ್ಟಂತೆ ಸಾಕ್ಷಿಹೇಳಲು ಬರುವ ಪ್ರತಿಯೊಬ್ಬರೂ, ನಾನು ಸತ್ಯವನ್ನೆ ಹೇಳುತ್ತೇನೆ. ಸತ್ಯವನ್ನಲ್ಲದೆ ಬೇರೆ ಏನನ್ನೂ ಹೇಳುವುದಿಲ್ಲ ಎಂದು ಧರ್ಮಗ್ರಂಥಮುಟ್ಟಿ ಪ್ರಮಾಣಮಾಡಿ ಹೇಳುವ ಪರಿಪಾಠವಿದೆ. ಆದರೆ ಅದೆಷ್ಟರಮಟ್ಟಿಗೆ ತಾ ನುಡಿದ ಮಾತಿಗೆ (ಅ)ಯೋಗ್ಯರು ಸತ್ಯ, ನ್ಯಾಯ, ಧರ್ಮಪಾಲನೆ ಮಾಡುತ್ತಾರೆಂದು ತಿಳಿಯಲಾಗದ ಸಂಗತಿಯಲ್ಲ. ಆದರೂ ಅವರಿಂದ ಬಂದ ಅಸತ್ಯ ಅವರವರಿಗೆ ತಿಳಿದೆ ಇರುತ್ತದೆ.

ಪುಣ್ಯಕೋಟಿ ಎಂಬ ಗೋವಿನ ಕಥೆ ಕೇಳದವರಾರು? ಹೆಬ್ಬುಲಿಗೆ ಸಿಕ್ಕ ಆ ಗೋವು ಹಸಿದಿರುವ ತನ್ನ ಕಂದನಿಗೆ ಹಾಲು ನೀಡಿ ಬರುತ್ತೇನೆಂದು ಹೇಳಿದಾಗ ಆ ಹುಲಿ ನೀ ಮತ್ತೆ ಬರುವುದುಂಟೆ? ಎಂದಾಗ. ಆ ಗೋವು ಸತ್ಯವೇ ನಮ್ಮ ತಾಯಿ ತಂದೆ ಸತ್ಯವೇ ನಮ್ಮ ಬಂಧು-ಬಳಗ. ಸತ್ಯವಾಕ್ಯಕೆ ತಪ್ಪಿನಡೆದರೆ ಮೆಚ್ಚನಾ ಪರಮಾತ್ಮ ಎಂದು ದೈನ್ಯದಿಂದ ಮನವಿ ಮಾಡಿ ಹೋಗಿ, ಕೊಟ್ಟ ಮಾತಿನಂತೆ ಮತ್ತೆ ಹುಲಿ ಬಳಿ ಬಂದು ನನ್ನನ್ನ ನೀನು ತಿಂದು ಸಂತಸಪಡು ಎಂದು ಬಿನ್ನವಿಸಿಕೊಂಡ ವಿಧಾನ, ಅದನ್ನು ಕೇಳಿ ಸ್ವಭಾವತಃ ಕ್ರೂರಿಯಾದ ಹುಲಿಯ ಮನ ಪರಿವರ್ತನೆಯಾಗಿ, ನೀ ನನ್ನ ಒಡಹುಟ್ಟಿದ ಅಕ್ಕ. ನಿನ್ನನ್ನು ಕೊಂದು ನಾನು ಯಾವ ಘೋರಪಾಪಕ್ಕೆ ಗುರಿಯಾಗಲೆಂದು ಹೇಳುತ್ತ ಗುಡ್ಡದ ಮೇಲಿಂದ ಹಾರಿ ಪ್ರಾಣಬಿಟ್ಟ ಕಥೆ ಎಂತಹ ಕಟುಕನ ಮನಸ್ಸನ್ನೂ ಬದಲಾಯಿಸಬಹುದೇನೋ ಅನಿಸುತ್ತದೆ.

ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋ ಭ್ರಾತಾ ದಯಾ ಸಖಾ |
ಶಾಂತಿಃ ಪತ್ನೀ ಕ್ಷಮಾ ಪುತ್ರಃ ಷಡೇತೆ ಮಮ ಬಾಂಧವಾಃ ||

ಸತ್ಯವೇ ತಾಯಿ, ಜ್ಞಾನವೇ ತಂದೆ, ಧರ್ಮವೇ ಸಹೋದರ, ದಯೆಯೇ ಗೆಳೆಯ, ಶಾಂತಿಯೇ ಪತ್ನಿ, ಕ್ಷಮೆಯೇ ಪುತ್ರ ಇವೇ ನನ್ನ ಆರು ಸಂಬಂಧಿಗಳು ಎಂದು ಸುಭಾಷಿತವೊಂದು ತಿಳಿಸುತ್ತದೆ. ಇವುಗಳನ್ನು ಸಾಧ್ಯವಾದಷ್ಟು ಪರಿಪಾಲಿಸುವವರಲ್ಲಿ ಆತ್ಮಸಂತೋಷ, ಆತ್ಮತೃಪ್ತಿ ಉಂಟಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ ಎನ್ನಬಹುದು. ಸತ್ಯಂ ವದ, ಧರ್ಮಂ ಚರ, ಸತ್ಯವನ್ನೇ ಹೇಳು ಧರ್ಮದಿಂದ ನಡೆದುಕೋ, ಸತ್ಯಮೇವ ಜಯತೇ, ನಾನೃತಂ, ಸತ್ಯಕ್ಕೆ ಮಾತ್ರ ಜಯಸುಳ್ಳಿಗಲ್ಲ, ಇಂತಹ ಅನೇಕ ನುಡಿಗಳಿವೆ. ಇದರಂತೆ ನಡೆದು ಆತ್ಮೋದ್ಧಾರ, ಲೋಕಕಲ್ಯಾಣ ಮಾಡಿದಂತಹ. ಅನೇಕ ಮಹನೀಯರ ನಿದರ್ಶನಗಳಿವೆ.

God sees the truth but waits ಇದೊಂದು ಆಂಗ್ಲ ಗಾದೆ. ದೇವರು ಸತ್ಯ(ನ್ಯಾಯ)ವನ್ನು ನೋಡುತ್ತಾನೆ. ಅದರ ಪರವಾಗಿದ್ದಾನೆ. ಆದರೆ ನಿಧಾನ, (ಕಾಯುತ್ತಾನೆ). ಇದರರ್ಥ, ಸತ್ಯಪಾಲಿಸಿದರೆ, ನ್ಯಾಯವಾಗಿ ನಡೆದುಕೊಂಡರೆ ಇಂದಲ್ಲ ನಾಳೆ ಅದರ ಪ್ರತಿಫಲ ದೊರೆಯುತ್ತದೆ. ಒಳ್ಳೆಯದಾಗುತ್ತದೆ. ಸತ್ಯದ ಇನ್ನೊಂದು ಹೆಸರೆ ನಿಜ, ನಿಜವೆ ಸತ್ಯ. ಇದ್ದುದ್ದನ್ನು ಇದ್ದ ಹಾಗೆ ಹೇಳುವುದೇ ಸತ್ಯ. ಆದರೆ ಇದರ ಬಗ್ಗೆ ಎಚ್ಚರಿಕೆಯ ಮಾತೊಂದಿದೆ. ಸತ್ಯವನ್ನೆ ಹೇಳು, ಪ್ರಿಯವಾದುದ್ದನ್ನೆ ಹೇಳು. ಆದರೆ ಕೇಳಲು ಅಪ್ರಿಯವಾದ ಸತ್ಯ ಹೇಳಬೇಡ, ಮುಂದಿನ ಪರಿಣಾಮ ಯೋಚಿಸಿ ಸತ್ಯ ಹೇಳು. ಏಕೆಂದರೆ ಸತ್ಯ ಕಹಿ ಔಷಧವಿದ್ದಂತೆ.

ಪ್ರತಿಯೊಬ್ಬರಿಗೂ ಅವರವರ ಜೀವನದಲ್ಲಿ ಬಂದೊದಗುವ ದುಃಖ-ದುಮ್ಮಾನಗಳಿಗೆ ಬಹಳಷ್ಟು ಮಟ್ಟಿಗೆ ಅವರವರೆ ಕಾರಣರಾಗಿರುತ್ತಾರೆ. ಮಾಡಬಾರದ್ದನ್ನು ಮಾಡಿದರೆ ಆಗಬಾರದು ಆಗುತ್ತದೆ ಎಂಬುದು ಸದಾ ನೆನಪಿನಲ್ಲಿರಬೇಕು. ನಿನಗೆ ಮನಃಶಾಂತಿ ಬೇಕಾದರೆ ಯಾರಲ್ಲಿಯೂ ತಪ್ಪು ಹುಡುಕಬೇಡ. ಮೊದಲು ನಿನ್ನ ನೀ ಸುಧಾರಿಸಿಕೊ. ದೈನದಿಂನ ಬದುಕಿನಲ್ಲಿ ಧರ್ಮದಿಂದ ನಡೆದುಕೊಂಡರೆ ಧರ್ಮ ಕಾಪಾಡುತ್ತದೆ. ಬೇವು ಬಿತ್ತಿ ಮಾವು ಪಡೆಯಲಾಗದು. ಬದುಕಿನಲ್ಲಿ ಒಳ್ಳೆಯ ನಡವಳಿಕೆಯಿರಬೇಕು. ಯಾರಿಗೂ ಗೊತ್ತಾಗದೆಂದು, ತಿಳಿಯಲು ಸಾಧ್ಯವೇ ಇಲ್ಲವೆಂದು ತಿಳಿದಿದ್ದರೆ ಅದು ಮೂರ್ಖತನದ ಪರಮಾವಧಿ. ಇಂದಲ್ಲ ನಾಳೆ ಲೋಕಕ್ಕೆ ಸತ್ಯ, ನ್ಯಾಯ ತಿಳಿಯದಿರದು. ಕುಳಿತು ಯೋಚಿಸಿದರೆ ಸತ್ಯ-ಅಸತ್ಯ, ನ್ಯಾಯ-ಅನ್ಯಾಯಗಳು ಅರ್ಥವಾಗುತ್ತವೆ. ಮಾಡಿದ ತಪ್ಪಿನ ಅರಿವಾಗುತ್ತದೆ ಕೂಡಲೇ ಮನ ಎಚ್ಚರಿಸುತ್ತದೆ. ಆಗ ಜಾಗೃತರಾಗಬೇಕು. ಇಲ್ಲದಿದ್ದರೆ ಮಾಡಿದ ತಪ್ಪನ್ನೆ ಮತ್ತೆ ಮಾಡುತ್ತ ವಿಶ್ವಾಸ ಕಳೆದುಕೊಂಡು ಎಲ್ಲರ ತಿರಸ್ಕಾರಕ್ಕೆ ಗುರಿಯಾಗಬೇಕಾಗುತ್ತದೆ.

ಸಮಾಜ ಬಹು ದೊಡ್ಡ ಪಾಠಶಾಲೆ. ದಿನ ನಿತ್ಯ ಅನೇಕ ಅನುಭವದ ಪಾಠ ಕಲಿಸುತ್ತದೆ. ಇಂದಿರುವುದು ನಾಳೆ. ನಾಳೆ ಬರುವುದು ನಾಳಿದ್ದು ಬದಲಾವಣೆಗಳಾಗುತ್ತಲೆ ಇರುತ್ತದೆ. ಈ ಪರಿವರ್ತನೆ, ಬದಲಾವಣೆ ಜಗದ ನಿಯಮ. ಇಂದು ಬೇಕಾಗಿರುವುದು ನಾಳೆ ಬೇಡವಾಗಬಹುದು. ಇಂದು ವಾಮಮಾರ್ಗದಿಂದ ಶಹಭಾಷ್‌ಗಿರಿ ಪಡೆದರೆ ಮತ್ತೊಂದು ದಿನ ಸತ್ಯಾಸತ್ಯದ ಅರಿವಾಗಿ ಥೂ, ಛೀ, ಎನಿಸಿಕೊಳ್ಳಬಹುದು. ಏನೆಲ್ಲವನ್ನು ಕಾಲ ನಿರ್ಧರಿಸುತ್ತದೆ.

ಇತಿಹಾಸ ನೋಡಿದಾಗ ಬಾಳಿದ ಅದೆಷ್ಟೋ ಜನರ ರೀತಿ-ನೀತಿ ದಬ್ಬಾಳಿಕೆ, ಹಿಂಸೆ, ಮೋಸ, ವಂಚನೆ ಕುಟಿಲತನ ನೋಡಿ ಅಂತಹವರ ಬಗ್ಗೆ ಮಾತನಾಡಲು ಅಸಹ್ಯವೆನಿಸುತ್ತದೆ. ಹಾಗೆಯೇ ಉಪಕಾರಿಗಳ, ತ್ಯಾಗಿಗಳ ಸಮಾಜೋದ್ಧಾರಕರ ಸ್ಮರಣೆ ಹಿತವೆನಿಸುತ್ತದೆ. ಅವರ ಹುಟ್ಟು ಸಾರ್ಥಕವೆನಿಸುತ್ತದೆ. ಅವರ ಕಷ್ಟಸಹಿಷ್ಣುತೆ, ಸಾಧನೆ ಬಗ್ಗೆ ಹೆಮ್ಮೆಯಾಗುತ್ತದೆ. ಅವರ ಸ್ಮರಣೆ ಸದಾ ನೆನಪಿನಲ್ಲುಳಿಯುತ್ತದೆ. ಇದೊಂದಂತೂ ಸತ್ಯ, ಮೇಲೊಬ್ಬನಿರುವ, ಅವನೆಲ್ಲಾ ನೋಡುತಿರುವ, ಬಾರದು ಬಪ್ಪದು, ಬಪ್ಪುದು ತಪ್ಪದು, ಇದು ಸದಾ ನೆನಪಿನಲ್ಲಿರಬೇಕು, ಎಚ್ಚರಿಕೆಯಿಂದ ನಡೆಯಬೇಕು.

* * *



# ಮನ ಮೆಚ್ಚುವ ಬದುಕು - ಬರಹ

ಪ್ರದೋಷೇ ದೀಪಕಶ್ಚಂದ್ರಃ ಪ್ರಭಾತೇ ದೀಪಕೋ ರವಿಃ |
ತ್ರೈಲೋಕ್ಯೇ ದೀಪಕೋ ಧರ್ಮಃ ಸುಪುತ್ರಃ ಕುಲದೀಪಕಃ ||

ರಾತ್ರಿಯ ವೇಳೆ ಹಾಲುಬೆಳದಿಂಗಳನ್ನು ಮೈದುಂಬುವ ಚಂದ್ರಮನೇ ದೀಪ. ಹಗಲಿನಲ್ಲಿ ಬೆಳ್ಳಂಬೆಳಕು ಬೀರುವ ಸೂರ್ಯನೇ ದೀಪ. ಇನ್ನು ಮೂರು ಲೋಕಗಳಿಗೂ ಧರ್ಮವೇ ದಾರಿ ದೀಪ. ಅಂತೆಯೇ ಸುಪುತ್ರನೇ ತನ್ನ ಕುಲಕ್ಕೆ ಕೀರ್ತಿದೀಪ. ಇಂತಹ ವ್ಯಕ್ತಿಯೇ ನನ್ನ ಸ್ನೇಹಿತರಾದ ಜಿನ್ನಹಳ್ಳಿ ನಾಗಭೂಷಣಾರಾಧ್ಯರ ತಂದೆಯವರಾದ ಶ್ರೀ ಕುಮಾರಾರಾಧ್ಯರು. ಅವರನ್ನು ನಾನು ನೋಡಿದ್ದೆ. ಅವರೊಡನೆ ಮಾತನಾಡಿದ್ದೆ. ನಮ್ಮ ಮೈಸೂರು ಮನೆಯಲ್ಲಿ ಅವರ ಭಾವ ಮೈದುನರಾದ. ಬಿ. ಮಲ್ಲಾರಾಧ್ಯರು ವಾಸವಾಗಿದ್ದರು. ಈ ಕಾರಣಗಳಿಂದ ಅವರು ನಮ್ಮ ಮೈಸೂರು ಮನೆಗೆ ಆಗಾಗ ಬಂದು ಹೋಗುತ್ತಿದ್ದರು. ಅವರ ವಿಶೇಶವೆಂದರೆ ಅವರು ಊರಿಂದ ಬರುತ್ತಿದ್ದುದು ಕುದುರೆಯ ಮೇಲೆ ಅದರಿಂದ ನನಗೆ ಆಸಕ್ತಿ. ಅವರ ಉಡುಪು ಸಾಧಾರಣ, ಅಂದರೆ ಬಿಳಿ ಶರಟು, ಕಚ್ಚೆ ಪಂಚೆ, ಬಿಳಿ ಪೇಟ ಮತ್ತು ನೀಲಿ ಕ್ಲೋಸ್‌ಕಾಲರ್ ಕೋಟು. ತೆಳ್ಳನೆಯ ಶರೀರ. ಕಂದು ಬಣ್ಣದಿಂದ ಕೂಡಿದ ಅವರ ಮಾತು ಸ್ಪಷ್ಟ. ಅವರ ನಡೆ-ನುಡಿ ನನಗೆ ಹಿಡಿಸಿತ್ತು. ಆಚಾರ -ವಿಚಾರವಂತರು. ದೈವಭಕ್ತರು. ಜನ ಸಾಮಾನ್ಯರಲ್ಲಿ ಬೆರೆಯುವ ಸ್ವಭಾವ.

ಜಿನ್ನಹಳ್ಳಿ ಆರಾಧ್ಯರಿಗೆ ಧಾರ್ಮಿಕ ಕೆಲಸಗಳೆಲ್ಲದರಲ್ಲಿ ಆಸಕ್ತಿ. ಹಲವಾರು ದೇವಾಲಯಗಳಿಗೆ ಆಗಮಿಕರಾಗಿ ಸೇವೆಸಲ್ಲಿಸುತ್ತಿದ್ದರು. ಸಾಕಷ್ಟು ದೇವಾಲಯಗಳ ಜೀರ್ಣೋದ್ಧಾರ ಕೆಲಸ ಮಾಡಿಸಿದ್ದರೆಂದು ನಾನು ಕೇಳಿದ್ದೆ. ಅವರು ಊರಿನ ಬೆಳವಣಿಗೆಗೆ ಸಾಕಷ್ಟು ಶ್ರಮಿಸಿದ್ದರೆಂದು ತಿಳಿದಿದ್ದೆ. ಕೆಲವು ವರ್ಷಗಳು ಅವರು ಊರಿನ ಛೇರ್‌ಮನ್ ಕೂಡ ಆಗಿ ಉತ್ತಮ ಕೆಲಸ ಮಾಡಿಸಿದ್ದರೆಂದು ತಿಳಿದಿದ್ದೆ. ಅವರ ಮನೆಯಲ್ಲಿ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ, ಅವರೇ ಗ್ರಾಮದ ಮಕ್ಕಳಿಗೆ ಶಾಲೆ ಬರುವ ಮೊದಲು ವಿದ್ಯೆ ಕಲಿಸುತ್ತಿದ್ದರೆಂದು



- ತಲಕಾಡು ಸಾಹುಕಾರ್ ನಾಗೇಶಮೂರ್ತಿ
ನಂ. ೭೩೯, ಖಿಲ್ಲೆ ಮೊಹಲ್ಲ
ಪ್ರಮಥವಿಲಾಸ
ಬಿ. ಬಿ. ಗಾರ್ಡನ್, ಮೈಸೂರು.
☎ : 5464425

ತಿಳಿದಿದ್ದೇನೆ. ಅವರಿಗೆ ಜಾತಿ, ಮತ ಬೇಧವಿಲ್ಲ ಎಲ್ಲರಿಗೂ ಪಾಠ ಬೋಧಿಸುತ್ತಲಿದ್ದರು. ಅವರಿಗೆ ಮೇಲು, ಕೀಳು, ಬಡವ, ಬಲ್ಲಿದನೆಂಬುದು ಇರಲಿಲ್ಲ. ಎಲ್ಲರನ್ನು ಒಂದಾಗಿ ಕಾಣುವ ಸ್ವಭಾವ ಅವರದು.

ತಮ್ಮ ಗ್ರಾಮ, ಹೋಬಳಿ ಹಾಗೂ ತಾಲ್ಲೂಕಿನ ಬಗ್ಗೆ ಕಾಳಜಿಯುಳ್ಳವರು. ಅವುಗಳಿಗೆ ಬೇಕಾಗುವ ಶಾಲೆ, ಅಂಚೆಕಛೇರಿ, ಆಸ್ಪತ್ರೆ, ಪಶುವೈದ್ಯಶಾಲೆ, ಪೋಲೀಸ್‌ಸ್ಟೇಷನ್, ಫಾರೆಸ್ಟ್ ಚೆಕ್‌ಪೋಸ್ಟ್, ರಸ್ತೆ ಮುಂತಾದವುಗಳನ್ನು ಸರಕಾರದಲ್ಲಿ ಬಿನ್ನವಿಸಿಕೊಂಡು ಮಂಜೂರು ಮಾಡಿಸಿಕೊಂಡು ಬರುವುದು ಅವರ ರೂಢಿಯಾಗಿತ್ತು. ಇಂತಹವರು ವಿರಳ, ಆ ಪ್ರದೇಶದ ಜನರ ಸುಯೋಗವೆಂದೇ ನನ್ನ ಅಭಿಪ್ರಾಯ.

ಆರಾಧ್ಯರ ಸ್ವಭಾವ *'ಆಡುಮುಟ್ಟದ ಸೊಪ್ಪು ಇಲ್ಲವೆಂಬಂತೆ'* ಅವರು ಎಲ್ಲ ಕ್ಷೇತ್ರಗಳಲ್ಲಿಯೂ ಓಡಿಯಾಡಿದವರು. ಅಲ್ಲಲ್ಲಿ ಆಯಾಕೆಲಸ ಆಯಾಕಾಲದಲ್ಲಿ ಮಾಡಿಸುವ ಸ್ವಭಾವವನ್ನು ಬೆಳೆಸಿ ಕೊಂಡಿದ್ದವರು. ಅವರಿಗೆ ಮಕ್ಕಳನ್ನು ಕಂಡರೆ ಬಲು ಪ್ರೀತಿ. ದಾರಿಯಲ್ಲಿ ಸಿಕ್ಕಿದ ಮಕ್ಕಳಿಗೆ ತಮ್ಮ ಜೇಬಿನಲ್ಲಿದ್ದ ಕಲ್ಸಕ್ಕರೆ, ದ್ರಾಕ್ಷಿ, ಖರ್ಜೂರ ಮತ್ತು ಬಾದಾಮಿ ಕೈಗೆ ಸಿಕ್ಕಿದ್ದನ್ನು ಕೊಟ್ಟು ಮಕ್ಕಳನ್ನು ನಗಿಸಿಹೋಗುವುದು ಸ್ವಭಾವ. ಅವರು ಪ್ರಾಣಿ, ಪಕ್ಷಿ, ಪರಿಸರ ಮತ್ತು ಪ್ರಕೃತಿಯನ್ನು ಕಂಡರೆ ಬಲು ಇಷ್ಟವುಳ್ಳ ಸ್ವಭಾವ ಬೆಳೆಸಿಕೊಂಡಿದ್ದವರು.

ಅಂದಿನ ಬ್ರಿಟಿಷ್ ಸರಕಾರ ಆರಾಧ್ಯರ ದಕ್ಷತೆ ಮತ್ತು ಚುರುಕು ಬುದ್ಧಿಯನ್ನು ಗಮನಿಸಿ ಅವರನ್ನು ನ್ಯಾಯಾಧೀಶರನ್ನಾಗಿ ಹಂಪಾಪುರದ ವಿಲೇಜ್ ಮುನ್ಸೀಫ್‌ಕೋರ್ಟ್‌ಗೆ ನೇಮಿಸಿತು. ಸುಮಾರು ಹತ್ತುವರ್ಷ ಸೇವೆ ಮಾಡಿರುತ್ತಾರೆ. ಅವರು ನ್ಯಾಯ ನೀಡುವಲ್ಲಿ ಅಷ್ಟೇ ಗಟ್ಟಿಗರಾಗಿದ್ದರೆಂದು ನಮ್ಮಲ್ಲಿಗೆ ಬರುವವರಿಂದ ನಾನು ತಿಳಿದುಕೊಂಡಿದ್ದೆ. ಜನ ಇವರನ್ನು ಮೆಚ್ಚಿ, ಅವರ ಕೆಲಸವನ್ನು ನೋಡಿ ದೊಡ್ಡ ಆರಾಧ್ಯರು ದೊಡ್ಡ ಮನುಷ್ಯರೆಂದು ಕೊಂಡಾಡುತ್ತಿದ್ದರೆಂದು ಕೇಳಿದ್ದೇನೆ. ನ್ಯಾಯ ವಿತರಣೆಯನ್ನು ಶೀಘ್ರಗತಿಯಲ್ಲಿ ಮಾಡುತ್ತಿದ್ದರೆಂದು ತಿಳಿದಿರುತ್ತೇನೆ. ಆರಾಧ್ಯರು ಸೇವೆ ಮತ್ತು ತ್ಯಾಗವನ್ನು ಚಿಕ್ಕಂದಿನಿಂದಲೂ ಬೆಳೆಸಿಕೊಂಡವರು. ಸ್ವಾಮಿ ವಿವೇಕಾನಂದರು ಹೇಳಿದ ಮಾತು ನೆನಪಾಗುತ್ತದೆ. ಈ ಎರಡು ಅಂದರೆ ತ್ಯಾಗ ಮತ್ತು ಸೇವೆಯೇ ದೇಶದ ಆದರ್ಶಗಳು. ಎಂದು ಅದನ್ನು ಆರಾಧ್ಯರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಡೆದವರು.

ಈ ಸಂದರ್ಭದಲ್ಲಿ ನನ್ನ ತಾತ ಮತ್ತು ತಂದೆಯುವರಾದ ಸಾಹುಕಾರ್ ಸದಾಶಿವಮೂರ್ತಿಯವರ ನೆನಪು ಬರುತ್ತದೆ. ಕಾರಣ ನನ್ನ ತಂದೆಯವರು ಆರಾಧ್ಯರಂತೆ ದಾನಿಗಳಾಗಿದ್ದರು. ತಲಕಾಡಿನಲ್ಲಿ ಪ್ರೌಢಶಾಲೆಗೆ ಕಟ್ಟಡವನ್ನು, ಪಶುವೈದ್ಯಶಾಲೆಗೆ ಕಟ್ಟಡವನ್ನು ಅದೇ ಶಾಲಾವಿದ್ಯಾರ್ಥಿಗಳಿಗೆ ಅನ್ನದಾಸೋಹಕ್ಕಾಗಿ ಜಮೀನನ್ನು ದಾನಮಾಡಿರುತ್ತಾರೆ. ಹಾಗೂ ನನ್ನ ತಾತ ಸಹ ತೋಪಿನ ಮಠಕ್ಕೆ ಮುಡುಕುತೊರೆಯಲ್ಲಿ ಕಟ್ಟಡ ದಾನ ಮಾಡಿರುವರು. ಇಂದಿಗೂ ಅವು ಪ್ರಯೋಜನಗೊಳ್ಳುತ್ತಿವೆ, ಸಾರ್ವಜನಿಕರ ಉಪಯೋಗದಲ್ಲಿ ಇಂತಹ ಸುಪುತ್ರನನ್ನು ಪಡೆಯುವ ತಂದೆ - ತಾಯಿ ಧನ್ಯರು. ಅಂತಹ ಮಗನನ್ನು ಕಂಡ ಕುಲಧನ್ಯ, ವಂಶ, ಸಮಾಜ, ಊರು, ರಾಜ್ಯ, ರಾಷ್ಟ್ರವೂ ಧನ್ಯ. ಇಂತಹ ಆರಾಧ್ಯರನ್ನು ನೆನೆಸುವುದು ಧರ್ಮ. ನಮ್ಮ ಮುಂದಿನ ಪೀಳಿಗೆಗೆ ಅವರು ಮಾರ್ಗದರ್ಶಿಯಲ್ಲವೆ ?

* * *

# ನಮ್ಮ ಮಾವನವರು

ನಾಡು ಮತ್ತು ನುಡಿಗಾಗಿ ಸೇವೆ ಮಾಡಿದವರನ್ನು ಗುರುತಿಸಿ ನೆನಪಿಸುವುದು ಈ ಭೂಮಿಯ ಸೊಗಡು. ಬಡತನ ಮತ್ತು ಸಿರಿತನಗಳ ಸವಿಯುಂಡು ಇತರರಿಗೂ ಹಂಚಿದ ಮಹನೀಯರನ್ನು ನೆನಪಿರುವುದು ಇಂದು ನಮಗೆ, ನಿಮಗೆ ಗೌರವ ತರುವ ವಿಚಾರ. ಶಿಸ್ತು, ಸಂಯಮ ಮತ್ತು ಸ್ವಾಭಿಮಾನಗಳನ್ನು ಮೈಗೂಡಿಸಿಕೊಂಡು ಇತರರಿಗೆ ಮಾರ್ಗದರ್ಶನ ನೀಡಿದ ತಾವು ಅದೇ ಮಾರ್ಗದಲ್ಲಿ ನಡೆದು ದಾರಿದೀಪವಾದ ಮಹಾಮಹಿಮರನ್ನು ಸ್ತುತಿಸುವುದು ಉತ್ತಮ ಮಾನವರ ಕರ್ತವ್ಯ. ಇಂತಹ ಸುಸಂಸ್ಕೃತರು, ಸಜ್ಜನರು, ವಿನಯಶೀಲರು, ಪ್ರತಿಭಾವಂತರು, ನಾಡಪ್ರೇಮಿಗಳನ್ನು ಆರಿಸಿದವರಿಗೂ, ಪ್ರೇರಣೆ ನೀಡಿದ ಸಂಸ್ಥೆಗೂ, ಕಾರ್ಯೋನ್ಮುಖರಾದ ಸರ್ವರಿಗೂ ನನ್ನ ಅಭಿನಂದನೆಗಳು.

ಎಲೆಮರೆಯ ಹೂವಾಗಿ, ಹೀಚಾಗಿ, ಕಾಯಾಗಿ ಮತ್ತು ಹಣ್ಣಾಗಿ ಧರೆಗೆ ಬಿದ್ದು ಕೈಲಾಸವಾಸಿಗಳಾದ ವೇ.ಬ್ರಂ.ಶ್ರೀ. ಆರ್. ಕುಮಾರಾರಾಧ್ಯರ ಜಿನ್ನಹಳ್ಳಿ ಗುರುಮಠ, ಇವರ ಸ್ಮರಣೆ ಹಾಗೂ ಗ್ರಂಥ ಅರ್ಪಣೆಯ ಕಾರ್ಯ ಎಲ್ಲರಿಗೂ ಮೆಚ್ಚುಗೆಯದಾಗಿದೆ, ಹೆಮ್ಮೆಯದಾಗಿದೆ. ಆರಾಧ್ಯರಿಗೆ ಇತಿಹಾಸವಿದೆ, ಭವ್ಯ ಪರಂಪರೆಯಿದೆ. ಜೀವನದ ಎಲ್ಲ ಸ್ತರಗಳಲ್ಲೂ ಸಮತೋಲನ, ಸಾಮರಸ್ಯ ಕಾಪಾಡಿಕೊಂಡು ಬಂದವರು. ಸಜ್ಜನಿಕೆ ಇವರ ಹುಟ್ಟುಗುಣ. ಯಾವಾಗಲೂ ಯಾರಿಗೂ ಮನಸ್ಸಿಗೆ ಖೇದವಾಗುದಂತೆ ನುಡಿಯದವರು ಹಾಗೂ ನಡೆಯದವರು. ಇವರ ನಯ, ವಿನಯ, ಸೌಜನ್ಯವೆ ರಕ್ಷಾಕವಚವಾಗಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಇವರ ಜೀವಿತದಲ್ಲಿ ಚಟುವಟಿಕೆಯಿಂದ ಕೂಡಿದ್ದು, ತಮಗೆ ಸಿಕ್ಕಿದ ಅವಕಾಶ ಮತ್ತು ಅಧಿಕಾರಗಳನ್ನು ಸದುಪಯೋಗಪಡಿಸಿಕೊಂಡು ತಮ್ಮ ಕರ್ತವ್ಯನಿಷ್ಠೆಗೆ ಚ್ಯುತಿಬರದಂತೆ ಕಾರ್ಯದಕ್ಷತೆಯಿಂದ ಎಲ್ಲವನ್ನು ನಿರ್ವಹಿಸಿದ ಮಹನೀಯರನ್ನುಇಂದು ನೆನಪಿಸಿ, ಯುವ ಪೀಳಿಗೆಗೆ ಪರಿಚಯ ಮಾಡುವ ಕೆಲಸ ಉತ್ತಮವಾದದ್ದೆ, ಸಾರ್ಥಕವಾದದ್ದೆ ಆಗಿರುತ್ತದೆ.



**- ಲೀಲಾ ನಾಗಭೂಷಣ್**
ಮ.ನಂ. 285, "ಮಧುವನ"
10ನೇ ಕ್ರಾಸ್
ಶ್ರೀರಾಂಪುರ ಎರಡನೇ ಹಂತ,
ಮೈಸೂರು - 23
ದೂ. : 0821 - 2362204

ಧಾರ್ಮಿಕ ಚಟುವಟಿಕೆಯ ಚೌಕಟ್ಟಿನಲ್ಲಿ ಕಠಿಣ ಜೀವನ ನಡೆಸಿದವರು ಇವರು. ಎಲ್ಲ ವಿದ್ವಾಂಸರ, ಪರಿಣತರ, ನ್ಯಾಯ, ನೀತಿ, ಧರ್ಮ ಮತ್ತು ನೈತಿಕತೆ ನಿಸ್ಪೃಹ ಮೆಚ್ಚುಗೆಗೆ ಪಾತ್ರರಾಗಿದ್ದವರು. ಇವರು ಸಾಹಿತ್ಯಿಕ, ಸಾಂಸ್ಕೃತಿಕ ಹಿನ್ನಲೆಯನ್ನು ಹೊಂದಿದವರು. ತಾವಿಟ್ಟ ತಪ್ಪು ಹೆಜ್ಜೆಯನ್ನು ತಾವೇ ಗುರುತಿಸಿ ಸರಿಮಾರ್ಗವನ್ನು ಕಾಣುವಂತಹ ಮನೋಸ್ಥೈರ್ಯ ಹೊಂದಿದವರಾಗಿದ್ದವರು. ಹಳ್ಳಿ - ಪಟ್ಟಣಗಳೆರಡರ ಜೀವನದ ಸಮಗ್ರ ಪರಿಚಯ ಇವರಿಗಿತ್ತು. ಆದ್ದರಿಂದ ಇವರು ಗ್ರಾಮದ ಛೇರ್ಮನ್ನರಾಗಿ ಆರಿಸಿ ಬಂದು ಊರಿನ ಹಿರಿಮೆಗೆ ಅಡಿಗಲ್ಲಾದವರು.

ಭಾರತದ ಧರ್ಮಕ್ಷೇತ್ರದಲ್ಲಿ ಜೀವನದ ಅಮೂಲ್ಯ ಗುರಿಯನ್ನು ಸಾಧಿಸಬೇಕೆಂಬ ಸಂಕಲ್ಪ ಇವರದಾಗಿತ್ತು. ಭಾಷೆಯಿಂದ ಭಾವೈಕ್ಯತೆ, ಭಾವೈಕ್ಯತೆಯಿಂದ ನಾಡಿನ ಬೆಳವಣಿಗೆ ಎಂದವರು. ಮನುಷ್ಯನ ಉದ್ಧಾರಕ್ಕೆ ಬೇಕಾಗುವ ಎಲ್ಲವೂ ಕನ್ನಡದಲ್ಲಿದೆ ಎಂದು ಹೇಳುತ್ತಲಿದ್ದವರು. ಕನ್ನಡದ ಅಭಿವೃದ್ಧಿಗಾಗಿ ಶ್ರಮಿಸಿದವರು. ಆರಾಧ್ಯರ ಕಾರ್ಯದಕ್ಷತೆ, ಮನೋನೈಪುಣ್ಯತೆ ಹಾಗೂ ಅವರ ನ್ಯಾಯನಿಷ್ಠೆಗಳನ್ನು ನೋಡಿ, ಮೆಚ್ಚಿ ಹಿರಿಯ ಅಧಿಕಾರಿಗಳು ಹೊಗಳಿದ್ದಾರೆ. ಇವರು ಯಾವಾಗಲೂ ಸತ್ಯ ಮತ್ತು ನ್ಯಾಯಕ್ಕಾಗಿ ಅಪಾರ ಗೌರವ ತೋರಿಸುವ ಮನೋಭಾವ ಬೆಳೆಸಿಕೊಂಡವರಾಗಿದ್ದರು. ಇವರ ಈ ಎಲ್ಲಾ ಗುಣಮಾರ್ಗಗಳನ್ನು ಗುರುತಿಸಿ, ಗ್ರಾಮ ನ್ಯಾಯಾಧೀಶರಾಗಿ ಸರಕಾರ ನೇಮಕ ಮಾಡಿದ್ದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಆರಾಧ್ಯರು ನ್ಯಾಯಾಧೀಶರಾಗಿ ಆ ಸ್ಥಾನದ ಘನತೆ, ಗೌರವಗಳೆರಡನ್ನು ಕಾಪಾಡಿದ್ದಾರೆ. ಇಂದು ಇವರ ಆತ್ಮಚೈತನ್ಯ ಈ ರೀತಿ ಗ್ರಂಥ ರೂಪದಲ್ಲಿ ಹೊರ ಹೊಮ್ಮಿದೆ. ಇದೇ ಇವರ ತುಂಬಿದ ಬದುಕು.

*ಆ - ಆಗಮಾರ್ಥಾನುಸಂಧಾನಿ*
*ರಾ - ರಾಗದ್ವೇಷವಿಭಂಜನಃ*
*ಧ್ಯ - ಧ್ಯಾನಜ್ಞಾನಸಮಾಯುಕ್ತಃ* ಆರಾಧ್ಯಇತಿ ಲಕ್ಷಣಮ್

ಎಂಬಂತೆ ಶ್ರೀಯುತ ಆರಾಧ್ಯರ 121ನೆಯ ವರ್ಷದಲ್ಲಿ ಅಂದರೆ, ಅವರು ಇಹಲೋಕ ಬಿಟ್ಟ 45 ವರ್ಷದ ಬಳಿಕ ಅವರ ನೆನಪಿನ ಗ್ರಂಥಾರ್ಪಣೆ ಕಾರ್ಯ ನಡೆಯುತ್ತಿರುವುದು ಒಂದು ಸೋಜಿಗವೇ. ಇವರ ಮನೋಭಿಪ್ರಾಯ ಸಫಲವಾಗಿರುವುದಕ್ಕೆ ಬೆಂಬಲಿಸಿದ ಜನತೆಗೂ, ಸಂಸ್ಥೆಗೂ, ಲೇಖಕರುಗಳಿಗೂ ಸ್ವಾಗತ.

ಮೈಸೂರಿನ ಆರಾಧ್ಯಧರ್ಮಸಭಾ ಸಂಸ್ಥೆಯ ಅಧ್ಯಕ್ಷರೂ ಆದ ಇವರ ಮಗ ಜಿನ್ನಹಳ್ಳಿ ನಾಗಭೂಷಣಾರಾಧ್ಯರ ನೇತೃತ್ವದಲ್ಲಿ ಬೃಹತ್ ಮತ್ತು ಮಹತ್ತಾದ ಎರಡು ಸಭೆಗಳು ನಡೆದಿವೆ. ಅವು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ 2001ರಲ್ಲಿ ಮತ್ತು ಮಂಡ್ಯದ ಶ್ರೀ ಕೃಷ್ಣರಾಜ ಒಡೆಯರ ಕಲಾಭವನದಲ್ಲಿ 2002ರಲ್ಲಿ. ಆ ಸಂದರ್ಭದಲ್ಲಿ ಇವರು ಸಮಾಜಕ್ಕೆ ನೀಡಿದ್ದ ಎರಡು ಕೈಪಿಡಿಗಳನ್ನು ನಾವು ಎಂದೂ ಮರೆಯುವಂತಿಲ್ಲ. ಅಲ್ಲಿ ನಡೆದ ಸಭೆಗಳು ನಿರೀಕ್ಷೆಯನ್ನು ಮೀರಿ ಇತಿಹಾಸ ಸೃಷ್ಟಿಸಿತು.ವಿ ಯಶಸ್ಸನ್ನು ಕಂಡಿತು.

ಶ್ರೀಯುತ ಜಿನ್ನಹಳ್ಳಿ ಗುರುಮಠದ ಆರ್. ಕುಮಾರಾರಾಧ್ಯರು ಅಶಾಶ್ವತ ಬದುಕಿನಲ್ಲಿ ಸ್ವಾರ್ಥಕ್ಕಾಗಿ ತಮ್ಮ ಬದುಕು ಸವೆಸದೆಯೇ, ಪರಾರ್ಥಕ್ಕಾಗಿ ಸೇವೆ ಮಾಡುವುದು ನಿಜ ಮಾನವ ಧರ್ಮವೆಂದವರು. ಮನುಷ್ಯನಿಗೆ ಶಾಶ್ವತವಾಗಿ ಆತನದೆಂಬುದು ಯಾವುದೂ ಇಲ್ಲ.

ನಮ್ಮ ಮಾವನವರದು ಶಾಶ್ವತ ಎಂಬಂಥದ್ದು ಇದ್ದಲ್ಲಿ ಅದು ಸತ್ಯ, ಧರ್ಮ, ನ್ಯಾಯ, ನೀತಿ, ನಡಾವಳಿ ಮತ್ತು ಪರೋಪಕಾರ ಮನೋಭಾವಗಳು. ಇವು ಮಾನವಕುಲಕ್ಕೆ ಸಹಾಯವಾಗುವಂಥ ಸಾಧನಗಳು ಎಂಬ ತತ್ತ್ವಕ್ಕೆ ಬದ್ಧರಾದವರು. ಇವರ ಈ ಮಾರ್ಗ ನಮಗೆಲ್ಲ ದಾರಿ ದೀಪವಾಗಿದೆ. ಇಂತಹ ಮಾವನವರನ್ನು ಪಡೆದದ್ದು ನನ್ನ ಸೌಭಾಗ್ಯ.

***

## ಧರ್ಮ

ಧರ್ಮ ಎಂದರೆ ಆಂತರ್ಯದ ಬೆಳವಣಿಗೆ. ಧರ್ಮ ಹೊರಗಿನಿಂದ ಬರುವುದಿಲ್ಲ. ಅಂಗಡಿಯಿಂದ ಕೊಳ್ಳಲು ಸಾಧ್ಯವಿಲ್ಲ. ನಮ್ಮ ಒಳಗಿನಿಂದಲೇ ಅಂದರೆ, ಆತ್ಮದಿಂದಲೇ ಹುಟ್ಟುವುದು ಎಂದು ಅರಿಯಬೇಕು. ಧರ್ಮ ಸೌಹಾರ್ದತೆಯನ್ನುಂಟುಮಾಡುತ್ತದೆ. ಧರ್ಮ ಸಾಮರಸ್ಯವನ್ನೊಳಗೊಂಡಿದೆ. ಎಲ್ಲ ಧರ್ಮಗಳ ಸಾರವು ಒಂದೆ. ಧರ್ಮಗಳ ಗುರಿಯೇ ಆತ್ಮನಲ್ಲಿ ಪರಮಾತ್ಮನನ್ನು ಕಾಣುವುದು. ಇದೇ ಏಕಮಾತ್ರ ವಿಶ್ವಧರ್ಮವಾಗಿರುತ್ತದೆ.

ಎಲ್ಲ ಧರ್ಮದಲ್ಲಿಯೂ ಸರ್ವವ್ಯಾಪಿಯಾದ ಸತ್ಯ ಒಂದಿದ್ದರೆ, ಅದೇ ಭಗವಂತನ ಸಾಕ್ಷಾತ್ಕಾರ.

## ಧ್ಯಾನ

ಧ್ಯಾನ ಎಂದರೆ ಮನಸ್ಸಿನ ತಟಸ್ಥಸ್ಥಿತಿ. ಇಂತಹ ಸ್ಥಿತಿಯಲ್ಲಿ ಒಂದು ನಿಗದಿತ ವೇಳೆಯಲ್ಲಿ ಯಾವುದೇ ಯೋಚನೆಯ ಹಿಂದೆ ಬೀಳದೆ, ಇಂತಹ ಯೋಚನೆ ಬೇಕೆಂದು ಅಪೇಕ್ಷಿಸದೆ, ಬರುವ ಯೋಚನೆಗಳಿಗೆ ಅಡಚಣೆ ಮಾಡದೆ, ಇರುವ ಒಂದು ಪ್ರಕ್ರಿಯೆಯಲ್ಲಿನ ಸ್ಥಿತಿಯೇ ಧ್ಯಾನವೆಂದು ಹೇಳಬಹುದು. ಇದು ಹೇಳುವಷ್ಟು ಆಚರಣೆಯಲ್ಲಿ ಸುಲಭಸಾಧ್ಯವಿಲ್ಲ. ಸತತ ಅಭ್ಯಾಸದಿಂದ ಅನುಭವಿಸಿಕೊಳ್ಳಬೇಕೇ ವಿನಃ ಮತ್ತೇನೂ ಇಲ್ಲ. ಪ್ರಾಮಾಣಿಕಸಾಧಕನು ಇವುಗಳನ್ನು ಗುರುಮುಖೇನ ಸಾಧಿಸಿದರೆ ಮಾತ್ರ ಉತ್ತಮ ಫಲ ಹೊಂದಬಹುದು.

# ವೈರಲ್ ಹೆಪಟೈಟಿಸ್ (ಯಕೃತ್ತಿನ ಉರಿಯೂತ)

ನಮ್ಮ ದೇಹದಲ್ಲಿ ಯಕೃತ್(ಲಿವರ್) ಬಹಳ ಮುಖ್ಯವಾದ ಅಂಗ. ಈ ಅಂಗವು ನಮ್ಮ ಎವೆಗೂಡಿನ ಬಲಭಾಗದಲ್ಲಿದೆ. ಇದು ನಮ್ಮ ದೇಹದ ರಾಸಾಯನಿಕವಸ್ತುಗಳ ವಿಶ್ಲೇಷಣೆ, ಉತ್ಪಾದನೆ, ಶೇಖರಣೆ ಕಾರ್ಯ ಹಾಗೂ ನಮ್ಮ ಆಹಾರದಲ್ಲಿ ಇರುವ ವಿಷವಸ್ತುಗಳ ದಮನಮಾಡುವ ಕಾರ್ಖಾನೆ ಎಂದು ಕರೆಯಬಹುದು.

ನಾವು ಊಟ ಮಾಡಿದ್ದು ಪಚನದ ಅನಂತರ ಕರುಳಿನಲ್ಲಿ ಹೀರಲ್ಪಟ್ಟು ಲಿವರ್ ಅಥವಾ ಯಕೃತ್ ಕಡೆಗೆ ತೆಗೆದುಕೊಂಡು ಹೋಗಲ್ಪಡುತ್ತದೆ. ಅಲ್ಲಿ ಆಹಾರದಲ್ಲಿರುವ ವಿಷವಸ್ತುಗಳು ಹಾಗೂ ನಮಗೆ ಬೇಡವಾದ ವಸ್ತುಗಳು ಶುದ್ಧೀಕರಿಸಲ್ಪಟ್ಟು ನಮ್ಮ ದೇಹಕ್ಕೆ ಸರಬರಾಜು ಮಾಡುತ್ತದೆ. ಇಂತಹ ಬಹುಮುಖ್ಯವಾದಂತಹ ಕಾರ್ಖಾನೆ ವೈರಸ್‌ಗಳ (ಸೂಕ್ಷ್ಮಜೀವಿ) ದಾಳಿಗೆ ತುತ್ತಾದಾಗ ವ್ಯಕ್ತಿಯು ತತ್ತರಿಸಿ ಹೋಗುತ್ತಾನೆ. ಈ ಲಿವರನ್ನು ದಾಳಿ ಮಾಡುವ ವೈರಸ್‌ಗಳು ಐದು ರೀತಿಯವು. ಇವುಗಳಿಗೆ ಕ್ರಮವಾಗಿ 1. ಹೆಪಟೈಟಿಸ್ 'ಎ' 2. ಹೆಪಟೈಟಿಸ್ - 'ಬಿ' 3. ಹೆಪಟೈಟಿಸ್-'ಸಿ' 4. ಹೆಪಟೈಟಿಸ್-'ಡಿ' 5. ಹೆಪಟೈಟಿಸ್- ಇ ಎಂದು ಹೆಸರಿಸಿದ್ದಾರೆ.

ನಾವು ದಿನನಿತ್ಯ ಹೆಪಟೆಟಿಸ್-'ಬಿ'ವ್ಯಾಕ್ಸಿನ್ ಬಗ್ಗೆ ಸಂಘಸಂಸ್ಥೆಗಳು ಪ್ರಚಾರಗೊಳಿಸುವುದು ಹಾಗೂ ಅದಕ್ಕೆ ರಿಯಾಯಿತಿ ದರದಲ್ಲಿ ವ್ಯಾಕ್ಸಿನ್ ಹಾಕಿ ಈ ಕಾಯಿಲೆ ಬರದಂತೆ ಮುತುವರ್ಜಿವಹಿಸುವದನ್ನು ಕಾಣುತ್ತೇವೆ. ಈ ವ್ಯಾಕ್ಸಿನ್‌ನನ್ನು ಸರ್ವೇಸಾಮಾನ್ಯವಾಗಿ ಎಲ್ಲಾ ಪೋಷಕರು ತಮ್ಮ ಮಕ್ಕಳಿಗೆ ಹಾಕಿಸುತ್ತಾರೆ. ಹಾಗೂ ಅವರಿಗೂ ಸಹ ಹಾಕಿಸಿಕೊಳ್ಳುತ್ತಾರೆ. ಈ ವ್ಯಾಕ್ಸಿನ್‌ನನ್ನು ಹಾಕಿಸಿಕೊಂಡ ನಂತರ ಇನ್ನು ಮುಂದೆ ತಮ್ಮ ಮಕ್ಕಳಿಗೆ ಕಾಮಾಲೆ ಕಾಯಿಲೆ (ಹೆಪಾಟೈಟಿಸ್) ಬರುವುದಿಲ್ಲ ಎಂದು ದೃಢವಾಗಿ ನಂಬುತ್ತಾರೆ. ಈ ನಂಬಿಕೆ ಸರಿಯಲ್ಲ



**ಡಾ|| ಭ. ಬಸವರಾಜ್**
ಎಂ.ಬಿ.ಬಿ.ಎಸ್
ಗಾಂಧಿರುದ್ರಪ್ಪ ಕಾಂಪ್ಲೆಕ್ಸ್
ಯಳಂದೂರು - 571 441
ಚಾಮರಾಜನಗರ ಜಿಲ್ಲೆ
ದೂ. 95822-240193
Mob : 9448871848

ಕಾರಣವೆಂದರೆ ಕಾಮಾಲೆ (ಹೆಪಾಟೈಟಿಸ್) ಕೇವಲ ಹೆಪಟೈಟಿಸ್-'ಬಿ'ಯಿಂದ ಮಾತ್ರ ಬರುವಂಥದ್ದಲ್ಲ.

ಇದು ಇತರೆ ವೈರಾಣುಗಳಾದ ಎ,ಸಿ,ಡಿ,ಇ ಗಳಿಂದಲೂ ಸಹ ಬರುತ್ತದೆ.

ಹೆಪಟೈಟಿಸ್- 'ಬಿ' - ಸರ್ಕಾರ, ಸಂಘ ಸಂಸ್ಥೆಗಳು ಇದಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟು ಈ ಕಾಯಿಲೆ ಬರದೆ ಇರುವಂತೆ ನೋಡಿಕೊಳ್ಳಲು ಕಾರಣ, ಈ ಕಾಯಿಲೆ ಬಂದ ವ್ಯಕ್ತಿಗಳು ಲಿವರ್ ಕ್ಯಾನ್ಸರ್‌ಗೆ ತುತ್ತಾಗುವ ಸಾಧ್ಯತೆಗಳು ಹೆಚ್ಚು. ಆದ್ದರಿಂದಲೇ ಇದರ ವಿರುದ್ಧ ವ್ಯಾಕ್ಸಿನ್ ಹಾಕಿ ಜನಸಮುದಾಯವನ್ನು ಲಿವರ್‌ಗೆ ತಗುಲುವ ಭೀಕರ ಕಾಯಿಲೆಯಿಂದ ರಕ್ಷಿಸುತ್ತಾರೆ.

ಈ ಹೆಪಟೈಟಿಸ್'ಬಿ'ವೈರಸ್ ಹೆಚ್‌ಐವಿ ಅಥವಾ ಏಡ್ಸ್ ವೈರಸ್‌ನಂತೆ ಅನೈತಿಕ ಹಾಗೂ ಅಸಹಜ ಲೈಂಗಿಕ ಪ್ರಕ್ರಿಯೆಗಳಿಂದ ಹರಡುತ್ತದೆ. ಈ ಕಾಯಿಲೆ ಇರುವ ವ್ಯಕ್ತಿಯ ರಕ್ತವನ್ನು ದಾನವಾಗಿ ಪಡೆದ ಆರೋಗ್ಯವಂತ ವ್ಯಕ್ತಿ ಸಹ ಈ ಕಾಯಿಲೆಗೆ ಬಲಿಯಾಗುತ್ತಾನೆ. ಒಟ್ಟಿನಲ್ಲಿ ಹೆಚ್‌ಐವಿ ವೈರಸ್ ಯಾವ ರೀತಿ ಒಬ್ಬರಿಂದ ಒಬ್ಬರಿಗೆ ಹರಡುತ್ತದೆಯೊ ಅದೇ ರೀತಿ ಈ ವೈರಾಣು ಸಹ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

ಹೆಪೈಟೈಟಿಸ್-'ಸಿ' - ಇದು ರಕ್ತದ ಮುಖಾಂತರ ಹರಡುತ್ತದೆ. ಈ ಕಾಯಿಲೆ ಇರುವ ವ್ಯಕ್ತಿಯ ರಕ್ತವನ್ನು ದಾನವಾಗಿ ಪಡೆದಂತಹ ಆರೋಗ್ಯವಂತ ವ್ಯಕ್ತಿಯೂ ಕಾಯಿಲೆಗೆ ತುತ್ತಾಗುತ್ತಾನೆ.

ಹೆಪೈಟೈಟಿಸ್ -'ಡಿ'- ಹೆಪಾಟೈಟಿಸ್ 'ಬಿ'ಮತ್ತು 'ಡಿ'ಸಮಾನವಾದ ಗುಣಗಳನ್ನು ಹೊಂದಿದ್ದು ಏಡ್ಸ್ ವೈರಸ್ ತರವೇ ಇದೂ ಸಹ ಒಬ್ಬರಿಂದ ಇನ್ನೊಬ್ಬರಿಗೆ ಹರಡುತ್ತದೆ.

ಹೆಪೈಟೈಟಿಸ್ 'ಎ' ಮತ್ತು 'ಇ'

ನಮ್ಮ ಭಾರತ ದೇಶದಲ್ಲಿ ಸರ್ವೇಸಾಮಾನ್ಯವಾಗಿ ಮಕ್ಕಳಿಂದ ವಯಸ್ಕರವರೆಗೆ ಹೆಪಟೈಟಿಸ್'ಎ' ಮತ್ತು 'ಇ' ವೈರಸ್‌ಗಳು ದಾಳಿ ಮಾಡುತ್ತವೆ. ಕಾರಣ ಈ ಕಾಯಿಲೆಯಿಂದ ನರಳುತ್ತಿರುವ ವ್ಯಕ್ತಿಗಳ ಮಲದಲ್ಲಿ ಈ ವೈರಸ್‌ಗಳು ಹೇರಳವಾಗಿರುತ್ತವೆ. ಆದ್ದರಿಂದ ನಮ್ಮ ದೇಶದಲ್ಲಿ ಬಹುತೇಕ ಗ್ರಾಮಾಂತರ ಪ್ರದೇಶಗಳಲ್ಲಿ ಮಲವಿಸರ್ಜನೆಗೆ ಬಯಲು ಪ್ರದೇಶಗಳಿಗೆ ಹೋಗುವುದರಿಂದ ಈ ಕಾಯಿಲೆ ಇರುವ ವ್ಯಕ್ತಿಯ ಮಲ (ವೈರಸ್‌ಗಳು) ನೀರು, ಆಹಾರ ಮತ್ತು ಕ್ರಿಮಿಕೀಟಗಳ ಮುಖಾಂತರ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ . ಹಾಗೂ ಈ ಕಾಯಿಲೆಯಿಂದ ನರಳುವ ಮಕ್ಕಳ ಕಕ್ಕಸ್ಸನ್ನು ತೊಳೆದವರು ತಮ್ಮ ಕೈಗಳನ್ನು ಸೋಪಿನಿಂದ ಸ್ವಚ್ಛವಾಗಿ ತೊಳೆದುಕೊಳ್ಳದೆ ಇತರರಿಗೆ ಆಹಾರ ಬಡಿಸಿದರೆ ಈ ಕಾಯಿಲೆ ಇತರರಿಗೆ ಹರಡುತ್ತದೆ. ಅವರು ಸ್ವಚ್ಛತೆ ಕಾಪಾಡಿಕೊಳ್ಳದಿದ್ದರೆ ಅವರಿಗೂ ಈ ಕಾಯಿಲೆ ಬರುವುದು ಖಚಿತ. ಹೋಟೆಲ್ ಮಾಣಿಯೊಬ್ಬ ಈ ಕಾಯಿಲೆಯಿಂದ ಬಳಲುತ್ತಿದ್ದರೆ ಹಾಗೂ ಆತ ಶುಚಿತ್ವವನ್ನು ಕಾಪಾಡಿಕೊಳ್ಳದಿದ್ದರೆ ಅವನು ಹೋಟೆಲ್‌ಗೆ ಬರುವ ಗಿರಾಕಿಗಳಿಗೆ ಈ ಕಾಯಿಲೆಗಳನ್ನು (ಎ ಮತ್ತು ಇ) ಹರಡುವ ಸಾಧ್ಯತೆಗಳು ಹೆಚ್ಚು. ಈ ಹಿನ್ನೆಲೆಯಲ್ಲಿ ನೀರಿನಿಂದ ಮತ್ತು

ಆಹಾರದಿಂದ ಬರುವ ಸಾಂಕ್ರಾಮಿಕ ರೋಗಗಳನ್ನು ಇತರರಿಗೆ ಹರಡುವ ಪ್ರಮಾಣವನ್ನು ಕಡಿಮೆ ಮಾಡಲು ಜನಸಾಮಾನ್ಯರು ಎಡಗೈ ಬೆರಳುಗಳಿಗೆ ಉಂಗುರಗಳನ್ನು ಧರಿಸಬಾರದು.

ಹೆಪಟೈಟಿಸ್'ಎ' ಸಾಮಾನ್ಯವಾಗಿ ಮಕ್ಕಳಿಗೆ, ಹೆಪಟೈಟಿಸ್'ಇ'ದೊಡ್ಡವರಿಗೆ ಬರುತ್ತದೆ. ಈ ಕಾಯಿಲೆ ಬಂದಾಗ ಮಕ್ಕಳು ಹಾಗೂ ದೊಡ್ಡವರು ವಿಪರೀತ ಜ್ವರ, ವಾಕರಿಕೆ, ವಾಂತಿ ಹಾಗೂ ಆಹಾರದ ಬಗ್ಗೆ ಅಸಹ್ಯ ಪಟ್ಟುಕೊಳ್ಳುತ್ತಾರೆ. ತುಂಬಾ ದಟ್ಟವಾದ ಗೋತ್ರಬಣ್ಣದ ಮೂತ್ರ ವಿಸರ್ಜಿಸುತ್ತಾರೆ. ಈ ವೈರಸ್‌ಗಳು (ಎ ಮತ್ತು ಇ) ಲಿವರ್ ಕೋಶಗಳ ಉರಿತ ಉಂಟುಮಾಡಿ ತಾತ್ಕಾಲಿಕವಾಗಿ ಲಿವರ್‌ನ ಕಾರ್ಯ ಚಟುವಟಿಕೆಗಳನ್ನು ಮೊಟಕುಗೊಳಿಸುತ್ತದೆ.

ಈ ಕಾಯಿಲೆಗೆ ಔಷಧಿ ಇಲ್ಲ. ಕಾರಣ ಇದು ವೈರಸ್ ಕಾಯಿಲೆ. ಇದು ತನ್ನಷ್ಟಕ್ಕೆ ತಾನೇ (Self terminating) ಗುಣಮುಖವಾಗುವ ಕಾಯಿಲೆ. ವೈದ್ಯರು ಮಾಡುವ ಕೆಲಸ ಈ ಕಾಯಿಲೆಯನ್ನು ಗುಣಪಡಿಸುವುದಲ್ಲ. ಈ ಕಾಯಿಲೆ ಬಂದಾಗ ಜ್ವರ ಹೆಚ್ಚಿದ್ದರೆ ಜ್ವರಕ್ಕೆ ಮಾತ್ರೆಗಳನ್ನು, ವಾಂತಿ, ವಾಕರಿಕೆಗಳನ್ನು ಚುಚ್ಚುಮದ್ದುಗಳ ಮೂಲಕ ನೀಡಿ ನಿವಾರಿಸುತ್ತಾರೆ. ರೋಗಿಯು ಆಹಾರವನ್ನು ತೆಗೆದುಕೊಳ್ಳದಿದ್ದರೆ ಡ್ರಿಪ್ ಮುಖಾಂತರ ಗ್ಲೂಕೋಸ್ ನೀರನ್ನು ಕೊಡುತ್ತಾರೆ.

ಈ ಸಮಯದಲ್ಲಿ ಕಾಯಿಲೆ ಬಂದ ವ್ಯಕ್ತಿಯು ಆಹಾರ ಪಥ್ಯಮಾಡುವುದು ಮುಖ್ಯ. ಸರಳವಾದ ಆಹಾರ ಅಂದರೆ ಜಿಡ್ಡು ಹಾಗೂ ಖಾರವಿಲ್ಲದ ಆಹಾರವನ್ನು ಸೇವಿಸಬೇಕು. ಹೇರಳವಾಗಿ ಎಳನೀರು, ನೀರು, ಗ್ಲೂಕೋಸ್ ನೀರು, ಕಬ್ಬಿನ ಹಾಲು, ಹಣ್ಣಿನ ರಸಗಳನ್ನು ಸೇವಿಸಬೇಕು. ಮಜ್ಜಿಗೆ ಅನ್ನ ಅಥವಾ ಹಾಲು ಅನ್ನ ಉತ್ತಮವಾದಂತಹ ಆಹಾರ. ಲಿವರ್ ಚೇತರಿಸಿಕೊಳ್ಳಲು ಲಿವರ್‌ಟಾನಿಕ್ ಹಾಗೂ ವಿಟಮಿನ್ ಬಿ ಕಾಂಪ್ಲೆಕ್ಸ್ ಟಾನಿಕ್‌ಗಳನ್ನು ನಿಯಮಿತವಾಗಿ ಸೇವಿಸಬೇಕು. ಶಾಲೆಗೆ ಹೋಗುವ ಮಕ್ಕಳಿಗೆ ಈ ಕಾಯಿಲೆ ಬಂದರೆ ಅವರು ಈ ಕಾಯಿಲೆಯಿಂದ ಪೂರ್ತಿ ವಾಸಿಯಾಗುವ ತನಕ ಶಾಲೆಗೆ ಕಳಿಸುವಂತಿಲ್ಲ. ಈ ಕಾಯಿಲೆ ಹತೋಟಿಗೆ ಬರುತ್ತಿರುವುದು ರೋಗಿಯ ಮೂತ್ರ ಹಾಗೂ ರಕ್ತ ಪರೀಕ್ಷೆಗಳನ್ನು ಮಾಡಿಸುವುದರ ಮೂಲಕ ಗೊತ್ತಾಗುತ್ತದೆ. ಈ ಕಾಯಿಲೆ ಹತೋಟಿಗೆ ಬಂದಾಗ ಮಕ್ಕಳನ್ನು ಶಾಲೆಗೆ ಕಳಿಸಬೇಕು. ದೊಡ್ಡವರು ತಮ್ಮ ಕೆಲಸಕ್ಕೆ ಹೋಗಬಹುದು. ಕ್ರಮೇಣವಾಗಿ ಆಹಾರ ಕ್ರಮವನ್ನು ಮೊದಲಿನಂತೆ ರೂಢಿಸಿಕೊಳ್ಳಬಹುದು.

* * *

ಶ್ರೀ ರೇಣುಕ ಸಿದ್ಧರು

ಸದ್ವಿದ್ಯಾಗಮಸನ್ಮತಿ ತ್ರಿಪುಟಿ ಸಮ್ಯಪ್ರಾಗ್ರಸಂಭಾವಿತಂ
ಶೈವಾಚಾರ್ಯ ಶತೈಕ ಸ್ಥಲ ಮುದಿತಂ ಸ್ಥಾನಂ ವೀಟಿಕಾನ್ವಿತಂ |
ನಿತ್ಯಂ ನಿರ್ಮಳಸಿದ್ಧ ಶುದ್ಧ ವರದಾ ಷಡ್ವರ್ಗವಿದ್ವೇಷಿಣಂ
ಶ್ರೀ ಮದ್ರೇಣುಕಸಿದ್ಧದೇಶಿಕವಿಭೋರಕ್ಷಾಕರ ಪಾಹಿಮಾಂ ||

# ಶ್ರೀಮಂತಹೃದಯಿ

ಸಮರ್ಪಣಾಭಾವದಿಂದ ಸಾರ್ವಜನಿಕಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಧೀಮಂತವ್ಯಕ್ತಿ ಲೇಟ್ ಆರ್. ಕುಮಾರಾರಾಧ್ಯರು

ಕೆಲಸದ ಸಂಸ್ಕೃತಿ(work culture)ಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಉದಾತ್ತ ಧ್ಯೇಯ ಹೊಂದಿದ್ದು, ನಿಷ್ಠೆ, ಪ್ರಾಮಾಣಿಕತೆ ಹಾಗೂ ನೈತಿಕ ಬಲದಿಂದ ಜನತೆಗೆ ಅಮೋಘ ಸೇವೆ ಸಲ್ಲಿಸಿದ ಮಹಾನ್ ವ್ಯಕ್ತಿಗಳಲ್ಲಿ ದಿವಂಗತ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ಒಬ್ಬರಾಗಿದ್ದರು.

ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರದ ಹೋಬಳಿ ಜಿನ್ನಹಳ್ಳಿಯಲ್ಲಿ 21-6-1885ರಲ್ಲಿ ಜನನ ಶಿವೈಕ್ಯರಾದದ್ದು 17-2-1961ರಲ್ಲಿ. "ಜನತೆಗಾಗಿ ನಾನು ಇದ್ದೇನೆ, ನಾನು ಸಾರ್ವಜನಿಕರ ಸೇವಕ"ಎಂಬ ಭಾವನೆಯಿಂದ ಕಾರ್ಯನಿರ್ವಹಿಸಿದವರು. ಜನರ ಬದುಕು ವಿವೇಕಯುತವಾಗಿ ಸಾಗಲು ಏನೆಲ್ಲಾ ಬೇಕೋ ಅದನ್ನೆಲ್ಲ ಮಾಡಿದರು. ಶ್ರೀಮಂತರಲ್ಲ, ಆದರೆ ಶ್ರೀಮಂತಿಕೆಯ ಹೃದಯವುಳ್ಳವರು. ಸಂಪ್ರದಾಯಸ್ಥರು. ಆದರೆ ಗೊಡ್ಡು ಸಂಪ್ರದಾಯಕ್ಕೆ ಅಂಟಿ ಕೊಂಡವರಲ್ಲ. ದೂರದೃಷ್ಟಿಯುಳ್ಳವರು. ವಿಶಾಲ ಹೃದಯಉಳ್ಳವರು. ಜನರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸಿದವರು.

ತಮ್ಮ ಹೋಬಳಿಯಾದ ಹಂಪಾಪುರದಲ್ಲಿ ಸಾರ್ವಜನಿಕ ಆಸ್ಪತ್ರೆ, ಆರಕ್ಷಕ ಠಾಣೆ, ಪಶುವೈದ್ಯಶಾಲೆ, ವಿಲೇಜ್ ಮುನ್ಸೀಫ್‌ಕೋರ್ಟು ಮುಂತಾದವುಗಳ ಸ್ಥಾಪನೆಗೆ ಶ್ರಮಿಸಿದವರು. ಬಡ ವಿದ್ಯಾರ್ಥಿಗಳಿಗೆ ಇವರ ಮನೆ ಆಶ್ರಯ ಸ್ಥಾನವಾಗಿತ್ತು . ಇವರ ಮನೆಯಲ್ಲಿ ಆತಿಥ್ಯ ಸ್ವೀಕರಿಸದ ಜನ ಬಹು ವಿರಳ. ಕೊಡುಗೈ ಪುಣ್ಯಾತ್ಮರು. ಇವರು ತಮ್ಮಲ್ಲಿದ್ದ ಜಮೀನನ್ನು ಆರಾಧ್ಯಮಹಾಸಭೆಗೆ , ಹಂಪಾಪುರದ ಆಸ್ಪತ್ರೆಗೆ,



- ಎಂ. ಬಿ. ಭುಜಂಗಾರಾಧ್ಯ
ಎಂ. ಎ., ಬಿ.ಎಡ್.,
ನಿವೃತ್ತ ಪ್ರಾಂಶುಪಾಲರು
ನಂ. 226/A, 12ನೇ ಮೇನ್, 3ನೇ ಕ್ರಾಸ್, ಸರಸ್ವತಿಪುರಂ, ಮೈಸೂರು -9 ☎ : 2543213.

ಕೆಂಡಗಣ್ಣಸ್ವಾಮಿದೇವಸ್ಥಾನಕ್ಕೆ, ಜೈನಸಭೆಗೆ, ಶಾರದಾನಿಕೇತನಕ್ಕೆ ನೀಡಿದ ನಿದರ್ಶನಗಳಿವೆ, ಸುತ್ತಲಿನ ಗ್ರಾಮಗಳಲ್ಲಿನ ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯನೆರವೇರಿಸಿದ್ದಾರೆ. ಆಗಿನ ಶ್ರೀಮನ್‌ಮಹಾರಾಜರಾದ ಶ್ರೀಕೃಷ್ಣರಾಜಒಡೆಯರ್‌ಬಹದ್ದೂರ್ ಅವರಲ್ಲಿ ಕೋರಿಕೆ ಸಲ್ಲಿಸಿ ಮಾದಾಪುರದಿಂದ ಕೆಂಡಗಣ್ಣಸ್ವಾಮಿದೇವಸ್ಥಾನಕ್ಕೆ ರಸ್ತೆ ಮಾಡಿಸಿರುವರು.

ಇವರ ಸೇವಾಮನೋಭಾವ ಹಾಗೂ ಜನಾನುರಾಗಿಗಳಾಗಿರುವುದನ್ನು ಮನಗಂಡು ಆಗಿನ ಸರ್ಕಾರ ಇವರನ್ನು ವಿಲೇಜ್ ಮುನ್ಸೀಫರಾಗಿ ನೇಮಿಸಿ ಗೌರವಿಸಿತು. ಸುಮಾರು ಹತ್ತು ವರ್ಷಗಳ ಕಾಲ ಹಂಪಾಪುರ ಗ್ರಾಮದ ಮುನ್ಸೀಫರಾಗಿ ದಕ್ಷತೆ ಹಾಗೂ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಿಸಿದರು. ಸಾವಿರಾರು ತಕರಾರುಗಳನ್ನು ನ್ಯಾಯಬದ್ಧವಾಗಿ ಪರಿಹರಿಸಿದರು. ಈಗಲೂ ಜಿಲ್ಲಾ ನ್ಯಾಯಾಲಯದ ರೆಕಾರ್ಡ್ ರೂಮಿನಲ್ಲಿ ಇವರು ನೀಡಿರುವ ತೀರ್ಪಿನ ಆದೇಶಗಳನ್ನು ವೀಕ್ಷಿಸಬಹುದು.

ನಿಜಜೀವನದಲ್ಲಿ ಸರಳತೆ ಹಾಗೂ ಸಭ್ಯತೆಯ ಮೂರ್ತಿಯಾಗಿದ್ದ ಆರ್. ಕುಮಾರಾರಾಧ್ಯರು ಒಬ್ಬ ದಾರ್ಶನಿಕರಾಗಿದ್ದರು. ಇವರ ಜೀವನಸಿದ್ಧಿಸಾಧನೆಗಳನ್ನು ಅರಿತುಕೊಳ್ಳುವುದರಿಂದ ನಮ್ಮ ಜೀವನ, ವಿಚಾರ ವಿವೇಕಗಳು ಉತ್ತಮಗೊಳ್ಳಲು ಅವಕಾಶವಾಗುತ್ತದೆ. ಇವರ ಕೆಲಸದ ಸಂಸ್ಕೃತಿ ಮುಂದಿನ ಪೀಳಿಗೆಗೆ ಅನುಕರಣೀಯವಾಗಿವೆ.

* * *

## ಹುಟ್ಟು ಗುಣ

ಯಾರಿಗೆ ಯಾವುದು ಹುಟ್ಟುಗುಣವಾಗಿರುವುದೋ ಅವರು ಅದನ್ನು ಬಿಟ್ಟುಕೊಡುವುದು ಕಷ್ಟ. ಮನುಷ್ಯನಿಗೆ ಜನ್ಮಸಹಜವಾಗಿ ಬಂದ ಗುಣ ಸ್ವಭಾವವೇ ಹುಟ್ಟುಗುಣ. ಮನುಷ್ಯ ತನ್ನ ಯಾವುದೋ ಒಂದು ನಡೆ ಸರಿಯಿಲ್ಲ ಎಂದು ತನಗೆ ಅರಿತೊ, ಅರಿಯದೆಯೊ ಅದಕ್ಕೆ ಜೋತು ಬೀಳುತ್ತಾನೆ. ಅದರ ದುಷ್ಪರಿಣಾಮಕ್ಕೆ ತುತ್ತಾಗುತ್ತಾನೆ. ಕಷ್ಟಕ್ಕೆ ಈಡಾಗುತ್ತಾನೆ. ಹೀಗಾಯಿತಲ್ಲ ಹೀಗೆ ಮಾಡಬಾರದಿತ್ತು ಎಂದು ಸಹ ಸಂಕಟಪಡುತ್ತಾನೆ. ಮಾನಸಿಕ ತೊಳಲಾಟಕ್ಕೂ ಗುರಿಯಾಗುತ್ತಾನೆ. ಅದು ಮುಗಿಯಿತೆಂದರೆ ಅದನ್ನು ಮರೆಯುತ್ತಾನೆ. ಇದು ಮನುಷ್ಯ ಸ್ವಭಾವ. ಮತ್ತೆ ಚಾಳಿಗೆ ಅಂಟಿಕೊಳ್ಳುತ್ತಾನೆ. ಇದು ಜನ್ಮ ಸಹಜಗುಣ.

ಪ್ರತಿಯೊಬ್ಬ ವ್ಯಕ್ತಿಗೂ ಅವನದೆ ಆದ ಸಹಜಗುಣ ಸ್ವಭಾವ ಇರುತ್ತದೆ. ಅದು ಒಳ್ಳೆಯದೂ ಆಗಿರಬಹುದು ಕೆಟ್ಟದ್ದೂ ಆಗಿರಬಹುದು. ಕೆಟ್ಟಗುಣವನ್ನು ಪ್ರಯತ್ನ ಪೂರ್ವಕವಾಗಿ ನಿವಾರಿಸಿಕೊಳ್ಳಬಹುದು ಎಂಬ ವಿಚಾರ ಪ್ರಾಜ್ಞರ ಅಭಿಮತ. ಜನ್ಮಸಹಜ ಸದ್ಗುಣ ಅಥವಾ ದುರ್ಗುಣ ಎಂದು ತಿಳಿದು ದುರ್ಗುಣ ಬಿಡಲು ಪ್ರತಿಯೊಬ್ಬರೂ ಮನಸಾರೆ ಪ್ರಯತ್ನಿಸಬೇಕು ಮತ್ತು ಸದ್ಗುಣವನ್ನು ಬೆಳೆಸಲು ಪ್ರಯತ್ನಿಸಬೇಕು. ಈ ಸಾಧನೆಗೆ ಸತತ ಪ್ರಯತ್ನ, ಪರಿಶ್ರಮ ಅಗತ್ಯ. ಗುರುಹಿರಿಯರ ಮಾರ್ಗದರ್ಶನ, ಸತತ ವಿದ್ಯಾಭ್ಯಾಸ, ಸತ್ಸಂಗ, ಸನ್ನಡತೆಗಳ ಮೂಲಕ ಈ ಗುರಿಯನ್ನು ಸಾಧಿಸುವುದು ಖಂಡಿತವಾಗಿಯೂ ಸಾಧ್ಯ. ಈ ದೆಸೆಯಲ್ಲಿ ಅವರ ಪ್ರಯತ್ನ ಅತಿ ಮುಖ್ಯ.

# ಆಸ್ಪತ್ರೆಯೆಂಬ ಸಂತೆ

ಆರೋಗ್ಯದ ಮನೆಯ ಒಳಗೆ
ನಾನಾ ಬಗೆಯ ರೋಗಿಗಳು
ಹೊರಗೆ ಹತ್ತಾರು
ಮೆಡಿಕಲ್ಲು ಸ್ಟೋರುಗಳು

ಈ ಸಂತೆಯಲಿ
ವಿಧವಿಧ ಸಾಮಾನಿನ ಡೇರೆಗಳಂತೆ
ಜೋಡಿಸಿಟ್ಟ ತರಕಾರಿಗಳಂತೆ
ಸಾಲಾಗಿ ಮಲಗಿರುವ ರೋಗಿಗಳು
ಕಪ್ಪು ಬಿಳುಪಿನ ನಾಮಫಲಕಗಳು
ಅತ್ತಿಂದಿತ್ತ ಇತ್ತಿಂದತ್ತ
ಓಡಾಡುವ ಬಿಳಿ ಬಟ್ಟೆಯ ನರ್ಸ್‌ಗಳು.

ಈ ಸಂತೆಗೆ ಬರುತ್ತಾರೆ ಜನ
ನವಜಾತ ಶಿಶುವಿನಿಂದ
ಸಾಯುವ ಮುದುಕರವರೆಗೆ;
ಬೇರೆಲ್ಲಿಂದಲೋ ಕಾಸಿಲ್ಲದೆ
ಕೊಂಡು ತಂದ ರೋಗಕ್ಕೆ
ಪರಿಹಾರವಂತೆ ಈ ಸಂತೆಯಲಿ
ಪರಿಹಾರ ಇಲ್ಲದಿರೆ
ಸ್ಥಳ ನಿಗದಿಯಾಗುತ್ತದೆ ಸ್ಮಶಾನದಲಿ.

ಈ ಸಂತೆಯಲಿ
ಕೊಳ್ಳಬೇಕೆ ಆರೋಗ್ಯ
ಹಣ ಸುರಿಯಬೇಕು ಹುರುಳಿಯಂತೆ
ಜೀವ ಉಳಿದರೆ ಪುಣ್ಯವಂತೆ
ಖರ್ಚು ಮಾಡಬೇಕು ಹಣ
ದಿಕ್ಕಾಪಾಲು / ದಿಕ್ಕಾಪಾಲು



- ಮಹೇಶ್‌ಕುಮಾರ್
ಉಪನ್ಯಾಸಕರು
ಸ.ಪದವಿಪೂರ್ವ ಕಾಲೇಜು
ಕರೀಮುದ್ದನಹಳ್ಳಿ,
ಹುಣಸೂರು ತಾಲ್ಲೂಕು,
ಮೈಸೂರು ಜಿಲ್ಲೆ.
Mob : 98808215446

ಆದರೂ ಸಾವಿನ ದಿಗಿಲು ;
ನರ್ಸ್‌ಕ್ಕಗಳ ಪಹರೆಯಲಿ
ವೈದ್ಯನೆಂಬ
ಸುಂಕದ ವಸೂಲಿಗಾರ
ಕೇಳಿದಷ್ಟು ಹಣ ಚೌಕಾಸಿಯಿಲ್ಲ;
ಬದಲು ಮಾತಿಲ್ಲ ;
ರೋಗಿ ಪಡೆದ ಆರೋಗ್ಯಕ್ಕೆ
ಗ್ಯಾರಂಟಿ ಕಾರ್ಡಿಲ್ಲ;

ಕಟ್ಟಿದ ಸೇತುವೆ ಉದ್ಘಾಟನೆಗೆ
ಮುಂಚೆ ಮುದುರಿಕೊಳ್ಳುವ ಹಾಗೆ
ರೋಗಿ, ಮನೆ ಸೇರುವ ಮೊದಲೇ
ಸಾಯಲೂ ಬಹುದು; ಈ
ಸಂತೆಯಲಿ ಡಾ|| ಮಾತೇ
ಪ್ರಮಾಣ ಪತ್ರ
ದೇವರು ನೆಪ ಮಾತ್ರ.

ಸೇವಾಭಾವದ ಈ ಸಂತೆಯಲಿ,
ತಲೆ ಎತ್ತಿದೆ ವ್ಯಾಪಾರಿ ದಂಧೆ
ಉಳ್ಳವನಿಗೆ ಉಳಿಯುವುದು ಪ್ರಾಣ
ಇಲ್ಲದವನಿಗೆ ಹರಣ ಹಣ-ಪ್ರಾಣ
ಬಡವನಾದರೆ ರೋಗಿ
ಡಾ|| ರಿಗೆ ಆಗುತ್ತಾನೆ ಪ್ರಯೋಗಿ,

ವೈದ್ಯ ವಿದ್ಯಾರ್ಥಿಗಳಿಗೋ ಅವನು
ಕಲಿಕೆಯ ಸಂಪತ್ತಾಗಿ
ಅದು ಮುಟ್ಟಿ, ಇದು ಮುಟ್ಟಿ
ಜೀವ ಭಯ ಹುಟ್ಟಿಸಿ,
ಆಯಸ್ಸು ಮುಗಿಯುವ ಮೊದಲೇ
ಸಾವ ತರಿಸಿ, ಮತ್ತೊಂದು
ಜೀವದೆಡೆಗೆ ನೋಟ ! ಓಟ

ಈ ಸಂತೆಯಲಿ
ಸಹಜ ಹೆರಿಗೆ ಕನಸಿನ ಮಾತು;
ಹೊಟ್ಟೆಸೀಳಿ ಹೊರಬರುತ್ತದೆ
ಮಗು, ಅನಾಮತ್ತು,
ಜನನವಲ್ಲದ ಜನ್ಯದಿ
ತಾಯಿಗೆ ಬರಲಿಲ್ಲ ಸಾವಿನಾಪತ್ತು

ಈ ಸಂತೆಯಲಿ
ಸಾವಿರಗಟ್ಟಲೆ ಖರ್ಚುಮಾಡಿ
ತಮ್ಮದಾಗಿಸಿಕೊಂಡಳೊಂದ ಮಗು
ಅಪ್ಪ ಅಮ್ಮರಿಗೋ ಮುಖದಲ್ಲಿ ನಗು
ಮನದಲ್ಲಿ ಬಿಗು
ಬಂಧು ಬಾಂಧವರ ಲಘು ಬಿಗು.

* * *

**ಶ್ರೀ ಮಲ್ಲಿಕಾರ್ಜುನ ಪಂಡಿತರು**

ಅದ್ವೈತೋದ್ಭತ ಕುಂಭಿಕುಂಭದಳನೋದ್ಯ ದ್ರೌದ್ಯ ಪಂಚಾನನೇ
ಗರ್ವೋತ್ತಂಭಿತ ಪಾಂಚರಾತ್ರ ನಿಬಿಡವ್ರಾತೀಯ ಚಂಡದ್ಯುತೀ |
ಪಾಷಂಡಾಬ್ಧಿ ಮಹಾಗಜೋ ವಿಜಯತೇ ಬೌದ್ಧಾದ್ರಿಘೋರಾಶನೀ
ಶ್ರೀ ಮತ್ಪಂಡಿತ ಮಲ್ಲಿಕಾರ್ಜುನವಿಭುಸ್ಸರ್ವತ್ರ ವಿದ್ವತ್ಸತೇ ||

# ಆರಾಧ್ಯಜನಾಂಗ ಎತ್ತಸಾಗಿದೆ ?

*"ಬೆಲೆಯಿಂದಕ್ಕುಮೆ ಕೃತಿ ಗಾವಿಲ*
*ಭುವನದಭಾಗ್ಯದಿಂದಕ್ಕುಂ ನೋಳ್ಪಂ*
*ಬೆಲೆಗೊಟ್ಟುತಾರ ಮಧುವಂ*
*ಮಲಯಾನಿಲನಂ,ಮನೋಜನಂ ಕೌಮುದಿಯಂ"*

ಬೆಲೆಯಿಂದ ಸಾಹಿತ್ಯಕೃತಿ ಹುಟ್ಟುವುದಿಲ್ಲ. ಅದು ಈ ಭುವಿಯ ಭಾಗ್ಯದಿಂದ ಹುಟ್ಟುತ್ತದೆ.ಬೆಲೆಗೆ ಸಿಗುವುದಾದರೆ ಜೇನುತುಪ್ಪ, ಮಂದಮಾರುತ,ಮನ್ಮಥ ಮತ್ತು ಬೆಳದಿಂಗಳನ್ನು ತೆಗೆದುಕೊಂಡು ಬಾ ನೋಡೋಣ ಎಂದಿದ್ದಾನೆ ನೇಮಿಚಂದ್ರ ಕವಿ.ಎಂತಹ ಸತ್ಯ.

ಹಾಗೆಯೆ ನಮ್ಮ ಈ ಪವಿತ್ರದೇಶದ ಭಾಗ್ಯದಿಂದ ಒಬ್ಬ ಮಹಾವೀರ, ಒಬ್ಬ ಬುದ್ಧ, ಒಬ್ಬ ಸರ್ವಜ್ಞ, ಒಬ್ಬ ಬಸವಣ್ಣ ಹುಟ್ಟಿಬಂದಂತೆ ನಶಿಸಿಹೋಗುತ್ತಿದ್ದ ಶೈವಮತವನ್ನು ಪುನರುಜ್ಜೀವನಗೊಳಿಸಲು ಶ್ರೀ ಪಂಚಾಚಾರ್ಯರು ನಮ್ಮ ದೇಶದಲ್ಲಿಅವತರಿಸಿದ್ದರು.ಅದು ಈ ಭುವಿಯಪುಣ್ಯವಿಶೇಷವೇ ಸರಿ. ಶ್ರೀ ಆಚಾರ್ಯವರ್ಯರು ರಾಷ್ಟ್ರದ ಐದುಸ್ಥಳಗಳಲ್ಲಿ ಎಂದರೆ, ಕೇದಾರ, ಕಾಶಿ, ಶ್ರೀಶೈಲ, ಉಜ್ಜಯಿನಿ ಹಾಗೂ ರಂಭಾಪುರಿಕ್ಷೇತ್ರಗಳಲ್ಲಿಧರ್ಮಪೀಠಗಳನ್ನು ಸ್ಥಾಪಿಸಿದರು. ವೀರಶೈವಧರ್ಮವನ್ನು ಪ್ರಚಾರಮಾಡಿದರು. ವೀರಶೈವ ಸಿದ್ಧಾಂತವನ್ನು ಬೋಧಿಸಿದರು.

ಇದಲ್ಲದೆ ಆಚಾರ್ಯರು ಗೃಹಸ್ಥಾಶ್ರಮವನ್ನು ಅವಲಂಬಿಸಿ ಆರಾಧ್ಯಮತವನ್ನು ಸ್ಥಾಪನೆ ಮಾಡಿದರು. ಇದೆಲ್ಲ ಆರಾಧ್ಯಕುಲಬಾಂಧವರಿಗೆ ತಿಳಿದೇ ಇದೆ. ಆಚಾರ್ಯರು ದೇಶಾದ್ಯಂತ ವೀರಶೈವಸಿದ್ಧಾಂತ ಪ್ರಚಾರಕ್ಕಾಗಿ ಶಾಖಾ ಮಠಗಳನ್ನು ಸ್ಥಾಪಿಸಿದರು. ಆದರೆ ಆ ಶಾಖಾಮಠಗಳು ಈಗ ವಿರಕ್ತಮಠಗಳಾಗಿ ಪರಿವರ್ತನೆ ಹೊಂದಿ ಆರಾಧ್ಯ ಕುಲಬಾಂಧವರಿಗೆ ಹೊರತಾಗಿ ಉಳಿದಿವೆ.

ಆರಾಧ್ಯಮತ ಆಂಧ್ರಪ್ರದೇಶ ಹಾಗೂ ಕರ್ನಾಟಕದ ಹಾಸನ, ಮೈಸೂರು, ಚಾಮರಾಜನಗರ, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಮಾತ್ರ ಇದೆ.




- ಬಿ. ಎಂ. ಎಂ. ಆರಾಧ್ಯ
ಎಂ. ಎ., ಎಲ್‌ಎಲ್.ಬಿ.,
ವಕೀಲರು ಮತ್ತು ಅಧ್ಯಕ್ಷರು,
ಆರಾಧ್ಯ ವಿವಿದೋದ್ದೇಶ ಸಂಘ
(ರಿ.) ಬೆಂಗಳೂರು.
ದೂ. 080 - 26654628

ಈ ಮತ ಒಂದು ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಆರಾಧ್ಯರು ರಾಜರಾಗಿದ್ದರು. ಮಂತ್ರಿಗಳಾಗಿದ್ದರು. ರಾಜಗುರುಗಳಾಗಿದ್ದರು. ರಾಜಪುರೋಹಿತರಾಗಿದ್ದರು. ಆಸ್ಥಾನವಿದ್ವನ್ಮಣಿಗಳಾಗಿದ್ದರು. ಉದ್ದಾಮಪಂಡಿತರೂ ಅಪ್ರತಿಮ ಕವಿಗಳೂ, ಸಾಹಿತಿಗಳೂ ಆಗಿದ್ದರು. ಅದು ಗತಿಸಿಹೋದ ಆರಾಧ್ಯಮತದ ಸುವರ್ಣಯುಗ. ಆರಾಧ್ಯರು ಶಾಪಾನುಗ್ರಹ ಶಕ್ತರಾಗಿದ್ದರು. ಅವರು ಧಾರ್ಮಿಕ ಆಚರಣೆಗೆ ಆಶ್ರಯದಾತರಾಗಿದ್ದರು. ವಿದ್ಯೆಯ ಭಂಡಾರಗಳಾಗಿದ್ದರು. ಜ್ಯೋತಿಷ್ಯರು, ಆಯುರ್ವೇದ ಪಂಡಿತರು, ಪುರೋಹಿತರು ಹೀಗೆ ಶಿಷ್ಯ ಸಮೂಹಕ್ಕೆ ದಾರಿದೀಪವಾಗಿ ಜನಮನ್ನಣೆ, ಗೌರವ, ಭಕ್ತಿಯನ್ನು ಗಳಿಸಿದ್ದರು. ಎಷ್ಟೋ ಜನ ಆರಾಧ್ಯರು ಪವಾಡಗಳನ್ನು ನಡೆಸಿದುದೂ ಉಂಟು.

ಈಗ ಆರಾಧ್ಯರು ಏನಾಗಿದ್ದಾರೆ ಯೋಚಿಸಿ. ಆರಾಧ್ಯ ಕುಲಬಾಂಧವರ ಸ್ಥಿತಿ ಚಿಂತಾಜನಕವಾಗಿದೆ. ಈ ಕುಲದವರು ಹಿಂದುಳಿದವರೇ?ಹೌದೆನ್ನುವವರು ಕೆಲವರು, ಇಲ್ಲವೆನ್ನುವವರು ಹಲವರು. ಸರ್ಕಾರವೂಸೇರಿ ಆರ್ಥಿಕವಾಗಿಹಿಂದುಳಿದ ಜನಾಂಗ ಇದು. ಮೇಲಾಗಿ ಅಲ್ಪ ಸಂಖ್ಯಾತ ಸಮಾಜ. ಕರ್ನಾಟಕದ ಜನಸಂಖ್ಯೆ ಆರು ಕೋಟಿಯನ್ನು ದಾಟಿದೆ. ಅದರಲ್ಲಿ ಆರಾಧ್ಯಮತದವರ ಸಂಖ್ಯೆ ಸುಮಾರು 15,000 ಎಂದು ಅಂದಾಜಿಸಲಾಗಿದೆ. ಅಂದರೆ ಈ ರಾಜ್ಯದ ಜನಸಂಖ್ಯೆಯ ನಿರ್ಲಕ್ಷಿಸಬಹುದಾದ ಸಂಖ್ಯೆ(Negligible).

ಈಗ ಆರಾಧ್ಯಕುಲದಲ್ಲಿ ರಾಜಕೀಯದಲ್ಲಿ ಮುಂದುವರಿದವರಿಲ್ಲ. ಕೈಗಾರಿಕೆಗಳನ್ನು ಸ್ಥಾಪಿಸಿದವರಿಲ್ಲ. ಶಿಕ್ಷಣಸಂಸ್ಥೆಗಳನ್ನು ತೆರೆದವರಿಲ್ಲ. ಘನವಿದ್ವಾಂಸರಿಲ್ಲ. ಉದ್ದಾಮ ಪಂಡಿತರಿಲ್ಲ. ಜ್ಯೋತಿಷ್ಯ ಪರಿಣಿತರಿಲ್ಲ. ಇಬ್ಬರು ಮೂವರು ಜ್ಯೋತಿಷ್ಯರೆಂದು ಹೇಳಿಕೊಳ್ಳುವವರನ್ನು ಚಂದ್ರಗ್ರಹ ಈ ದಿವಸ ಯಾವ ರಾಶಿಯಲ್ಲಿದ್ದಾನೆ ಎಂದು ಕೇಳಿದಾಗ ಪಂಚಾಂಗದಲ್ಲಿದೆ ನೋಡಿ ಎಂದು ಒಬ್ಬರು, ಅದನ್ನು ಕುಳಿತು ಲೆಕ್ಕಾಚಾರ ಮಾಡಿ ಹೇಳಬೇಕು ಈಗ ಬಿಡುವಿಲ್ಲವೆಂದು ಹೇಳಿದವರು ಒಬ್ಬಿಬ್ಬರು. ಇವರು ನಮ್ಮಲ್ಲಿರುವ ಜ್ಯೋತಿಷ್ಕರು. ಆದರೆ ಎಲ್ಲರೂ ಇಂತಹವರಲ್ಲ. ಇವರು ಅಪವಾದ ಅಷ್ಟೇ. ಆಯುರ್ವೇದ ಪಂಡಿತರು ಹೇಳಿಕೊಳ್ಳುವಷ್ಟಿಲ್ಲ. ಸಾಕಷ್ಟು ಪುರೋಹಿತರೂ ಇಲ್ಲ. ಇಂದು ಆರಾಧ್ಯರು ಬ್ರಾಹ್ಮಣ ಪುರೋಹಿತರನ್ನು ಕರೆದು ಶುಭಕಾರ್ಯಗಳನ್ನು ಮಾಡಿಸುವ ಉದಾಹರಣೆಗಳಿವೆ.

*"ಆರಾಧ್ಯರ ಚರಿತ್ರೆ ಪವಿತ್ರ, ನಡೆ ಶುದ್ಧ, ನುಡಿ ಶುದ್ಧ*
*ಇಂಥವರ ಮಹಿಮೆಯನ್ನು ಹೊಗಳಿದವನ*
*ತನು ಶುದ್ಧವಾಗಿ ಶಿವಸಾಯುಜ್ಯ ಪ್ರಾಪ್ತವಾಗುವುದು"*

ಎಂದು ಶಂಕರದೇವರು ಹಾಡಿದ ಕಾಲವಿತ್ತು. ಆರಾಧ್ಯ ಮತಕ್ಕೆ ಅವರದೇ ಆದ ಸಂಸ್ಕೃತಿ ಇತ್ತು. ಆ ಸಂಸ್ಕೃತಿ ಈಗ ಏನಾಗಿದೆ? ಹಳ್ಳಿಗಳಲ್ಲಿ ಆರಾಧ್ಯರಿಗೆ ಗೌರವವಿತ್ತು. ಭಯಮಿಶ್ರಿತ ಭಕ್ತಿ ಇತ್ತು. ಮನ್ನಣೆ ಇತ್ತು. ಇದನ್ನೆಲ್ಲ ಉಳಿಸಿಕೊಂಡು ಬಂದಿದ್ದರು ನಮ್ಮ ಹಿರಿಯರು. ಈಗ ಈ ಗೌರವ, ಮನ್ನಣೆ, ಭಕ್ತಿ ಎಲ್ಲ ಮಾಯವಾಗಿದೆ. ಇದಕ್ಕೆ ಹಲವಾರು ಕಾರಣಗಳಿವೆ.

ಮೊದಲನೆಯದು ಆರಾಧ್ಯರು ತಮ್ಮ ಸಂಸ್ಕೃತಿಯನ್ನು ಮರೆತು ಅಲಕ್ಷಿಸಿರುವುದು, ಎರಡು ನಾಗರೀಕತೆ, ಮೂರು ಯಾಂತ್ರೀಕರಣ, ಮುಖ್ಯವಾಗಿ ನಾಲ್ಕನೆಯದು ಎಲ್ಲ ಜಾತಿ ಮತಗಳವರೂ ಅವರವರ ಜಾತಿಗೆ, ಮತಕ್ಕೆ ಒಬ್ಬ ಗುರುವನ್ನು ಆರಿಸಿರುವುದು ಮತ್ತು ಆರಾಧ್ಯರನ್ನು ಕಡೆಗಣಿಸಿರುವುದು.

ಆರಾಧ್ಯರು ಜ್ಯೋತಿಷ್ಯ, ಆಯುರ್ವೇದ, ಪೌರೋಹಿತ್ಯ, ಯಂತ್ರ ಮಂತ್ರ ಮುಂತಾದ ಉಪಯುಕ್ತ ಮತ್ತು ಗೌರವಯುತ ಕಾರ್ಯಗಳಲ್ಲಿ ನಿರತರಾಗಿದ್ದರು. ಇವರಿಗೆ ಶಿಷ್ಯರ ಆಶ್ರಯವಿತ್ತು. ರಾಜಾಶ್ರಯವಿತ್ತು. ಜೀವನ ಸುಖಮಯವಾಗಿತ್ತು. ಈಗ ಅವರವರ ಸಂಸಾರ ಜೀವನ ನೌಕೆ ಸಾಗಬೇಕಾದರೆ ಅವರು ಬೇರೆ ಕೆಲಸಗಳನ್ನು ಮಾಡಬೇಕಾಗಿರುತ್ತದೆ. ಇದರಿಂದಾಗಿ ಅವರ ನಿತ್ಯಕರ್ಮಗಳಿಗೆ ಕಾಲಾವಕಾಶವಿಲ್ಲವಾಗಿದೆ. ಆದ್ದರಿಂದ ಕುಲಬಾಂಧವರು ಪ್ರತಿದಿನ ಕೇವಲ 10 ನಿಮಿಷವನ್ನಾದರೂ ನಿತ್ಯಕರ್ಮವಾದ ಶಿವಪೂಜೆಗೆ ಮುಡಿಪಾಗಿಡುವುದು ಸೂಕ್ತ.

*"ಸ್ವಧರ್ಮೇ ನಿಧನಂ ಶ್ರೇಯಃ"* ಎಂದರೆ ನಮ್ಮ ಸ್ವಂತ ಧರ್ಮದಲ್ಲಿ ಬದುಕುವುದೇ ಶ್ರೇಷ್ಠವೆಂದು ಭಾವಿಸಬೇಕು.

ಭಾರತವು ಜಾತ್ಯತೀತ ರಾಷ್ಟ್ರ. ಇನ್ನು ಮುಂದೆ ಯಾವ ಜಾತಿಯೂ ಇರುವುದಿಲ್ಲ ಎಂದು ಹೇಳುವ ಬುದ್ಧಿವಂತರೂ ಇದ್ದಾರೆ. ಇದು ತಪ್ಪು ಭಾವನೆ. ಮಹಮದೀಯರು ಅವರ ಮತವನ್ನು ಚಾಚೂತಪ್ಪದೆ ಅನುಸರಿಸಿಕೊಂಡು ಬಂದಿದ್ದಾರೆ. ಅವರ ಧರ್ಮಗ್ರಂಥವಾದ ಕುರಾನ್‌ನಲ್ಲಿ ಒಂದು ಗೆರೆಯನ್ನೂ ಬದಲಾಯಿಸಿಲ್ಲ. ಕ್ರೈಸ್ತ ಮತಾವಲಂಬಿಗಳು ಪ್ರತಿ ಭಾನುವಾರ ಚರ್ಚ್‌ಗಳಿಗೆ ಹೋಗುವುದನ್ನು ನಿಲ್ಲಿಸಿಲ್ಲ. ಭಾರತದಲ್ಲಿ ಯಾವ ಸರ್ಕಾರವೇ ಬರಲಿ ಜಾತಿ ವ್ಯವಸ್ಥೆಗೆ ಪ್ರೋತ್ಸಾಹ ನೀಡುತ್ತಿರುವಾಗ ಆರಾಧ್ಯಮತದವರು ತಮ್ಮ ನಿತ್ಯಕರ್ಮಗಳನ್ನು ತ್ಯಜಿಸುವುದು ಸರಿಯಲ್ಲ.

ಆರಾಧ್ಯರು ತಮ್ಮ ನಿತ್ಯಕರ್ಮಗಳು ಹಾಗೂ ಕುಲಕಸುಬುಗಳನ್ನು ಮರೆತದ್ದರಿಂದ ಇವರಲ್ಲಿ ಜನರಿಗಿದ್ದ ಭಕ್ತಿ, ಗೌರವ, ಮನ್ನಣೆ, ಕಡಿಮೆಯಾಗುತ್ತಿದೆ.

ಆರಾಧ್ಯರಲ್ಲಿ ಉನ್ನತ ಶಿಕ್ಷಣ ಪಡೆಯಲು ಆರ್ಥಿಕ ಸ್ಥಿತಿ ಇರುವವರು ಬಹಳ ಕಡಿಮೆ. ಶಿಕ್ಷಣ ಪಡೆದರೂ ಇವರಿಗೆ ಸರ್ಕಾರಿ ಹುದ್ದೆಗಳು ಸಿಗುವುದು ಕಷ್ಟಸಾಧ್ಯವಾಗಿದೆ. ಹೀಗಾಗಿ ಅವರ ಜೀವನ ದುಸ್ತರವಾಗಿದೆ. ಒಮ್ಮೆ ನಾವು ಸಂಘಕ್ಕೆ ವಂತಿಗೆ ಪಡೆಯಲು ಹೋದಾಗ ಒಬ್ಬಿಬ್ಬರು "This is a dying community, it will die soon" ಎಂದು ಹೇಳಿದರು. ಅದರ ಬಗ್ಗೆ ಚಿಂತಿಸಿದಾಗ ಅವರು ಹೇಳಿದ್ದು ಸರಿ ಎನಿಸಿತು. ಆದರೆ ಹಾಗಾಗಬಾರದು. ಈ ಮತ ಬದುಕಬೇಕು. ಅಭಿವೃದ್ಧಿ ಹೊಂದಬೇಕು. ಹಿಂದಿನ ಸುವರ್ಣಯುಗವನ್ನು ನೋಡಬೇಕು. ಇಂದು ಆರಾಧ್ಯಮತಬಾಂಧವರು ಸಂಘಟಿತರಾಗಿ ತಮ್ಮ ಕುಲಕಸುಬನ್ನು ಅಭಿವೃದ್ಧಿ ಮಾಡಿಕೊಂಡರೆ ಮಾತ್ರ ಸಾಧ್ಯ.

ಆರಾಧ್ಯರಿಗಿಂತಲೂ ಕಡಿಮೆ ಜನಸಂಖ್ಯೆ ಇರುವ ಮತಗಳು ತಮ್ಮ ಹಕ್ಕುಭಾದ್ಯತೆಗಳಿಗೆ ಹೋರಾಡುತ್ತಿವೆ. ಆ ಕುಲಗಳಿಗೆ ಒಬ್ಬ ಮುಂದಾಳು ಇದ್ದಾನೆ. ಮಾರ್ಗದರ್ಶನ ಮಾಡಲು. ಒಬ್ಬ ಗುರು ಇದ್ದಾನೆ. ಆದರೆ ಆರಾಧ್ಯ ಮತಕ್ಕೆ ಗುರುವಿಲ್ಲ. ನೇತಾರನಿಲ್ಲ. ಗುರಿಕಾರನಿಲ್ಲ. ಕೆಲವರು ತಮಗೆ ಗುರು ಬೇಕಿಲ್ಲ. ತಾವು ಸ್ವಯಂ ಆಚಾರ್ಯರು ಎಂದು ಹೇಳಿಕೊಂಡು ಮೆರೆಯುತ್ತಾರೆ. ಇವರಲ್ಲಿ ಆಚಾರ್ಯರಾಗುವ ಅರ್ಹತೆ ಇದೆಯೆ ? ಸ್ವಯಂ ಆಚಾರ್ಯರೆಂದು ತಮ್ಮ ಕಾಲುಗಳಿಗೆ ತಾವೆ ನಮಸ್ಕಾರ ಮಾಡಿ, ತಾವೆ ಆಶೀರ್ವಾದ, ಮಂತ್ರ ಹೇಳಿಕೊಳ್ಳುವುದೆ! ಏನೀ ವಿಪರ್ಯಾಸ.

ಶ್ರೀ ನಿಜಗುಣಾರಾಧ್ಯ ಶಿವಯೋಗಿಗಳು "ವಿವೇಕ ಚಿಂತಾಮಣಿ" ಗ್ರಂಥದಲ್ಲಿ ಎಂಟು ವಿಧದ ಗುರುಗಳನ್ನು ಹೆಸರಿಸಿದ್ದಾರೆ "ಬೋಧಕ ಗುರು, ವೇಧಕ ಗುರು, ನಿಷಿದ್ಧ ಗುರು, ಕಾಮ್ಯಕ ಗುರು, ಸೂಚಕ ಗುರು, ವಾಚಕ ಗುರು, ಕಾರಕ ಗುರು, ವಿಹಿತ ಗುರು"ಎಂದು. ಸ್ವಯಂ ಆಚಾರ್ಯರು ಎಂದು ಹೇಳಿಕೊಳ್ಳುವವರು ಈ ಎಂಟು ಜನರಲ್ಲಿ ಯಾವ ಗುರು ಎಂದು ತಿಳಿದುಬಂದಿಲ್ಲ.

ಆರಾಧ್ಯಮತ ಪುನರುತ್ಥಾನಗೊಳ್ಳಬೇಕಾದರೆ ಈ ಒಣಜಂಭ, ಬಂಡವಾಳವಿಲ್ಲದ ಬಡಾಯಿಗಳನ್ನು ತೊರೆದು ಕುಲಬಾಂಧವರು ಆರಾಧ್ಯರ ನಿತ್ಯಕರ್ಮಗಳನ್ನು ಆಚರಿಸಬೇಕು ಮತ್ತು ಆರಾಧ್ಯ ಸಂಸ್ಕೃತಿಯನ್ನು ಬೆಳೆಸಿ ಉಳಿಸಬೇಕು. ಆಗ ಅವರಿಗೆ ಮನ್ನಣೆ ದೊರೆಯುತ್ತದೆ.

ಮೊಟ್ಟಮೊದಲು ಆರಾಧ್ಯರು ಸಂಘಟಿತರಾಗಬೇಕು. *"ಶ್ರೀ ಗುರುವಚನೋಪದೇಶ ವನಾಲಿಸಿದಾಗಳಹುದು ನರಂಗೆ ಮುಕುತಿ"* ಎಂದು ಶ್ರೀನಿಜಗುಣಶಿವ ಯೋಗಿಗಳು ಹಾಡಿದ್ದಾರೆ. ಗುರುವಿನ ಕೈಯಿಂದ ಲಿಂಗಧಾರಣೆ ಮಾಡಿಸಿಕೊಂಡು ಅಂಗದ ಮೇಲೆ ಲಿಂಗವಿದ್ದರೆ ಯಾವ ಅನಿಷ್ಟವೂ ಒದಗುವುದಿಲ್ಲ.

*"ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ ನೆನಹಿಂ*
*ನಿರೀಕ್ಷೆಯಿಂದನುದಿವಸಂ ಸಮರ್ಪಿಸುವುದತ್ಯಧಿಕಂ,*
*ನೆನಹಿಂ ನಿರೀಕ್ಷೆಯಿಂದನುದಿನಸಮರ್ಪಿಪುದರಿಂ ಶಿವ*
*ಲಿಂಗಮನಂಗದಲ್ಲಿ ಸುಮ್ಮನೆ ಧರಿಸುವುದತ್ಯಧಿಕಂ*

"ಎಂದುಮತ್ಯಧಿಕಂ ನಿರುತಂ ಶಿವಾಧವಾ" ಮೊಗ್ಗೆಯ ಮಾಯಿದೇವರು ಅವರ ಶಿವಾಧವಶತಕದಲ್ಲಿ ಹೇಳಿದ್ದಾರೆ. ಶಿವನನ್ನು ನೆನೆಯುವುದಕ್ಕಿಂತ, ನಿರೀಕ್ಷಿಸುವುದಕ್ಕಿಂತ, ಪ್ರತಿದಿನ ತಪ್ಪದೆ ಪೂಜಿಸುವುದಕ್ಕಿಂತ ಅಂಗದ ಮೇಲೆ ಸದಾ ಲಿಂಗವನ್ನು ಸುಮ್ಮನೆ ಧರಿಸುವುದು ಅತ್ಯಧಿಕ ಸತ್ಯ ಎಂದು ಹೇಳಿದ್ದಾರೆ. ಆದರೆ ನಮ್ಮ ಕುಲಬಾಂಧವರು ಅನೇಕರು ಲಿಂಗಧಾರಣೆ ಮಾಡಿಕೊಳ್ಳುವುದಿಲ್ಲ. ಮೊದಲು ಅವರು ದೇಹದ ಮೇಲೆ ಲಿಂಗವನ್ನು ಧರಿಸಬೇಕು.

ಎರಡನೆಯದಾಗಿ ಆರಾಧ್ಯರು ಹೊಟ್ಟೆಬಟ್ಟೆಯನ್ನಾದರೂ ಕಟ್ಟಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕು. ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಸಬೇಕು. ಸಂಸ್ಕೃತದಲ್ಲಿ ನಮ್ಮ ಪುರಾತನ ಹಾಗೂ ಪವಿತ್ರವಾದ ಸಂಸ್ಕೃತಿಯ ಭಂಡಾರವೇ ಇದೆ. ಇದರ ಜೊತೆಗೆ ಜ್ಞಾನಭಂಡಾರವೂ ಇದೆ. ಅದನ್ನು ವಶಮಾಡಿಕೊಂಡವರಿಗೆ ಯಾವ ಚಿಂತೆಯೂ ಇರುವುದಿಲ್ಲ.

ನಮ್ಮ ಕುಲಕಸುಬಾಗಿದ್ದು ಈಗ ನಶಿಸಿಹೋಗುತ್ತಿರುವ ಜ್ಯೋತಿಷ್ಯ, ಆಯುರ್ವೇದ, ಅಥರ್ವಣ ವೇದ ಅಂದರೆ ಯಂತ್ರ ಮಂತ್ರಗಳ ಅಭ್ಯಾಸ, ಪೌರೋಹಿತ್ಯವನ್ನು ಕಡ್ಡಾಯವಾಗಿ ಕಲಿಸಬೇಕು. ಇವುಗಳು ಜೀವನಕ್ಕೆ ಆಧಾರಸ್ತಂಭಗಳಾಗಿ ನಿಲ್ಲಬಲ್ಲವು. ಕುಳಿತಲ್ಲಿ ಸುಖವಾಗಿ ಜೀವನ ನಡೆಸಬಹುದು.

ಪ್ರತಿಯೊಬ್ಬ ಆರಾಧ್ಯವಟುವಿಗೂ ದೀಕ್ಷಾಸಂಸ್ಕಾರವನ್ನು ಮಾಡಬೇಕು. ಪ್ರತಿದಿನ ಬೆಳಿಗ್ಗೆ ಹಾಗೂ ಸಂಧ್ಯಾಕಾಲಗಳಲ್ಲಿ ಶಿವಪೂಜೆ ಮಾಡುವಂತೆ ತಿಳಿಹೇಳಬೇಕು. ಕಾರಣಾಂತರಗಳಿಂದ ಎರಡು ಹೊತ್ತು ಪೂಜೆ ಮಾಡಲು ವ್ಯವಧಾನವಿಲ್ಲದಿದ್ದಲ್ಲಿ ಬೆಳಿಗ್ಗೆ ಒಂದು ಸಾರಿಯಾದರೂ ಶಿವಪೂಜೆ ಮಾಡುವುದನ್ನು ಕಡ್ಡಾಯ ಮಾಡಬೇಕು. ಆಗಮಗಳನ್ನು ಅಭ್ಯಾಸ ಮಾಡಿಸಬೇಕು.

ಆರಾಧ್ಯಮತದಲ್ಲಿ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವವರಿಗೆ ಸರ್ಕಾರಿ ಅಥವಾ ಸರ್ಕಾರೇತರ ನೌಕರಿಯಲ್ಲಿರುವವರು ನಿರುದ್ಯೋಗಿ ಆರಾಧ್ಯ ಯುವಕರಿಗೆ ಪಟ್ಟಣಗಳಲ್ಲಿ ಸಣ್ಣಪುಟ್ಟ ನೌಕರಿಗಳನ್ನು ದೊರಕಿಸಿಕೊಟ್ಟು, ಸಹಾಯ ಮಾಡಬೇಕು.

ಆರಾಧ್ಯಕುಲಬಾಂಧವರು ತಮ್ಮ ಪೂರ್ವಜರ ಬಗ್ಗೆ ಹೆಮ್ಮೆ ಪಡುವುದರಲ್ಲಿ ತೃಪ್ತಿಪಡದೆ, ಸಮಾಜದ ಉದ್ಧಾರಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಿ ನಶಿಸಿಹೋಗುತ್ತಿರುವ ಆರಾಧ್ಯ ಮತವನ್ನು ಕಾಪಾಡುವುದು ಅವರ ಆದ್ಯ ಕರ್ತವ್ಯವೆಂದು ತಿಳಿಯಬೇಕು. ಆರಾಧ್ಯರು ಮತ್ತೆ ಸುವರ್ಣಯುಗವನ್ನು ನೋಡುವ ಆಶಾಕಿರಣವನ್ನು ಹೊಂದಿರಬೇಕು. ಇದನ್ನು ನಮ್ಮ ಯುವ ಪೀಳಿಗೆ ಸಾಧಿಸುತ್ತಾರೆಂಬ ನಂಬಿಕೆ ಇದೆ.

* * *

## ಮನಸ್ಸು

ಮಾನವನ ಮನಸ್ಸು ಯಾವಾಗಲೂ ಅಂತರಾತ್ಮದ ಹೊರಗ [illegible]ಯಾಡುತ್ತಿದೆ, ಅದನ್ನು ನಿಯಂತ್ರಿಸಿ ಒಳಮುಖವಾಗಿ ನೋಡಿದಲ್ಲಿ ಪರಮಾತ್ಮನ ಅನುಭವದ ದರ್ಶನ ಪಡೆಯಬಹುದೆಂದು ಜ್ಞಾನಿಗಳು, ಸಂತರು, ಮಹಾತ್ಮರು ಜಗಕ್ಕೆ ಸಂದೇಶಿಸಿದ್ದಾರೆ. ಅದೊಂದು ಸ್ವಪ್ನಮಯ ಜಗತ್ತು. ಅದರಿಂದ ಮಾನವನ ಗ್ರಹಣಶಕ್ತಿ ಉಲ್ಬಣಗೊಂಡು ವಿನೂತನಜ್ಞಾನವನ್ನು ಮನದಾಳದಲ್ಲಿ ಮೂಡಿಸುತ್ತದೆ. ಅದೇ ಆತ್ಮಜ್ಞಾನ. ಅದು ಪರಾಕಾಷ್ಠತೆಯನ್ನು ಮುಟ್ಟಿದಾಗ ಮಾನವ ಸ್ವತಂತ್ರ, ಬಲಿಷ್ಠ, ಅಮರನಾಗುತ್ತಾನೆ. ಅದೇ ಮನುಷ್ಯ ಜೀವನದ ಉದ್ದೇಶ ಮತ್ತು ಸಾರ್ಥಕ ಎಂಬುದಾಗಿ ಮಹಾಚಾರ್ಯರು ಮತ್ತು ತಪೋಧನರು, ವೇದ - ಉಪನಿಷತ್, ಆಗಮ, ಭಾಷ್ಯ ಮುಂತಾದವುಗಳ ಮೂಲಕ ಸಂದೇಶ ನೀಡಿದ್ದಾರೆ.

# ನನ್ನ ಅಜ್ಜ

ನನ್ನ ಅಜ್ಜ ಎಂದರೆ ಊರಿನ ಎಲ್ಲರಿಗೂ ಇಷ್ಟ. ಅಂಥಹ ಅಜ್ಜನನ್ನು ಪಡೆದ ನನಗೆ ಅವರಲ್ಲಿ ಅಪಾರ ಪ್ರೀತಿ ಮತ್ತು ಭಕ್ತಿ. ಇಂದು ಅವರಿಲ್ಲದಿದ್ದರೂ ಅದು ಉಳಿದಿದೆ. ನನ್ನ ಅಜ್ಜನ ಕ್ಷೇತ್ರ ಇಂತಹುದು ಎಂದು ಸೂಚಿಸಲಾರೆ. ಮನುಷ್ಯವರ್ಗವೆನ್ನದೆ, ಜೀವ, ಜಂತುಗಳೆನ್ನದೆ ಎಲ್ಲರಿಗೂ ಎಲ್ಲದಕ್ಕೂ ಉಪಕಾರಿಯಾದಂತಹ ಕೆಲಸ ಮಾಡುವುದೆಂದರೆ ಅವರಿಗೆ ಇಷ್ಟವೆಂದು ಜನರು ಮಾತನಾಡಿಕೊಳ್ಳುವುದುಂಟು. ಇಂತಹ ಪರೋಪಕಾರಿ ನನ್ನ ಅಜ್ಜ. ಇವರು ದೈವಭಕ್ತರು. ಎಲ್ಲ ಅಧಿಕಾರಿಗಳ ಬಳಿ ಹೋಗಿ ಅವರ ಪ್ರೀತಿ ವಿಶ್ವಾಸಗಳಿಸಿ ನಾಡಿನ ಬೆಳವಣಿಗೆಯನ್ನು ಅವರುಗಳಿಂದ ಮಾಡಿಸುತ್ತಲಿದ್ದರು. ಹತ್ತಾರು ಬಾರಿ ತಿರುಗಾಡಿಯಾದರೂ ಹಿಡಿದ ಕೆಲಸ ಮಾಡಿಸುವ ಸ್ವಭಾವ ನನ್ನ ಅಜ್ಜನದು. ಇವರು ಶಾಲೆಗಳು ಮತ್ತು ಇತರೆ ಕಛೇರಿಗಳ ಬಗ್ಗೆ ಅಭಿವೃದ್ಧಿಯ ಆಸಕ್ತಿ ಉಳ್ಳವರು.

ನನ್ನ ಅಜ್ಜನಿಗೆ ಧರ್ಮ ಮತ್ತು ಸಂಸ್ಕೃತಿಗಳು ಜನ್ಮಜಾತವಾದುವು. ಎಲ್ಲ ಧರ್ಮೀಯರೊಡನೆ ಸಹಕರಿಸಿ. ಅವರ ಧರ್ಮಕ್ಕೆ ಚ್ಯುತಿಬಾರದಂತೆ ನೆರವು ಕೊಡುವ ಸಂಸ್ಕೃತಿ ಇವರದು. ಆದ್ದರಿಂದ ಮಂದಿರ ಮಸೀದಿಗಳ ಅಭಿವೃದ್ಧಿಗೆ ತಮ್ಮ ಪುರಸ್ಕಾರ ನೀಡುತ್ತಲಿದ್ದರು.

ನನ್ನ ಅಜ್ಜನಿಗೆ ಕೊಡುವುದೆಂದರೆ ಅತ್ಯಾಸಕ್ತಿ. ತರಕಾರಿಯಿಂದ ಹಿಡಿದು ಆಸ್ತಿಯವರೆಗೆ ನೀಡುವುದು ಅವರಿಗೆ ಅತಿಯಾದ ಮೋಜಾಗಿತ್ತು ಅವರ ಬಳಿ ಯಾರೇ ಬಂದು ತಮ್ಮ ಕಷ್ಟ ಹೇಳಿಕೊಂಡವರೆ ಒಂದಿಸ್ಟಾದರೂ ನೆರವು ನೀಡಿಯೇ ಕಳುಹಿಸುವ ಸ್ವಭಾವವನ್ನು ಜನ್ಮಗೂಡಸಿ ಕೊಂಡಿದ್ದರು. ಇವರು, ದೇಗುಲ, ಶಾಲೆ, ಆಸ್ಪತ್ರೆ ಮತ್ತು ವಿದ್ಯಾರ್ಥಿನಿಲಯಗಳಿಗೆ ಹೇರಳವಾಗಿ ದಾನ ನೀಡಿದ್ದಾರೆ. ಇವರ ಮನಸ್ಸೂ ಹೀಗೆ ಸೂಚಿಸುತ್ತಲಿತ್ತೆಂದು ಹೇಳುವ ಸ್ವಭಾವ ಇವರದು. '*ಕೊಡುವ ಶಿವನಿರುವಾಗ ಕೊಡು, ಕೊಟ್ಟಷ್ಟು ದೇವ ನಿನಗೆ ಕೊಡುವ, ಚಿಂತಿಸದಿರು.*' ಎಂಬುದೇ ಅವರ ಉಸಿರಾಗಿತ್ತು ಎಂದು ನನ್ನ ಅಜ್ಜಿ ತಿಳಿಸುತ್ತಲಿದ್ದರು.



- ಆರಾಧ್ಯ ಪೂರ್ಣ ತೇಜಸ್ವಿ
ಮೈಸೂರು.
ದೂ.9845573247

ನ್ಯಾಯ ಕೋರಿ ನನ್ನ ಅಜ್ಜನ ಬಳಿ ಬಂದವರಿಗೆ ನ್ಯಾಯಾಂಗದಲ್ಲಿ ಸ್ವಲ್ಪವೂ ಅನ್ಯಾಯವಾದ ವಿಚಾರಗಳನ್ನು ನಾನು ಕೇಳರಿಯೆ. ಅಂದರೆ ನ್ಯಾಯದ ವಿಚಾರ ಬಂದಾಗ ತನ್ನವರೇ ಆಗಲಿ, ಪರರೆ ಆಗಲಿ ವಹಿಸಿಕೊಂಡು ನ್ಯಾಯ ವಿತರಣೆ ಮಾಡಿದವರಲ್ಲ. ನ್ಯಾಯ ಕೇಳುವುದು ಎಲ್ಲರ ಹಕ್ಕು, ನೀಡುವುದು ಸತ್ಯಕ್ಕೆ ಚುತಿ ಇಲ್ಲದಂತಿರಬೇಕೆಂಬ ಮನೋಭಾವ ಅವರದು. ಅವರಿಂದ ನ್ಯಾಯ ಮತ್ತು ಸತ್ಯಕ್ಕೆ ಅಪಚಾರ ಎಲ್ಲೂ ಕಂಡು ಬಂದಿಲ್ಲ ಅಂತಹವರು ನನ್ನ ಅಜ್ಜ. ಅಜ್ಜನಿಗೆ ಹಾಗೂ ಅವರ ತತ್ತ್ವಕ್ಕೆ ನಾನು ಸದಾ ನಮಿಪೆನು.

ಬೆಳಿಗ್ಗೆ ಎದ್ದ ಕೂಡಲೆ ನನ್ನ ಸಹಕಾರ ಯಾರಿಗೆ ಎಂಬುದನ್ನು ಚಿಂತಿಸದೆ, ಕಾದು ಬಂದವರಿಗೆ ತಮ್ಮಿಂದಾದ ತಿಳಿವಳಿಕೆ, ಸಹಕಾರ, ಸಹಾಯ ಯಾವುದೇ ಆದರೂ ಅದನ್ನು ನೀಡಿ ಅವರ ಮನಸ್ಸಿನ ವೇದನೆಯ ನೋವನ್ನು ನಿವಾರಿಸುವುದೇ ಇವರ ಮುಖ್ಯ ಗುರಿಯಾಗಿತ್ತೆಂಬಂಶ ಇವರ ಜೀವನದುದ್ದಕ್ಕೂ ಕಂಡುಬಂದ ಅಂಶವಾಗಿರುತ್ತದೆ. ಇಂತಹ ನನ್ನ ಅಜ್ಜನನ್ನು ಹೊಂದಿದ್ದ ನಾನು ಮತ್ತು ನಮ್ಮ ಕುಟುಂಬ ನಿಜಕ್ಕೂ ಭಾಗ್ಯವಂತರೆ ಆಗಿದ್ದೇವೆ.



**ಪಾಪ- ಪುಣ್ಯಗಳು:**

"ಅತ್ಯುತ್ಕಟ್ಟೈಃ ಪುಣ್ಯಪಾಪೈರಿಹೈವ ಫಲಂ ಅಶ್ನುತೇ!" ಪಾಪ -ಪುಣ್ಯಗಳು ಎರಡೂ ಪರಾಕಾಷ್ಠೆಯನ್ನು ತಲುಪಿದರೆ ಅದೇ ಜನ್ಮದಲ್ಲಿ ಫಲ ಎಂದರ್ಥ. ನಾವು ಯಾವ ಫಲದ ನಿರೀಕ್ಷೆಯಿಂದಲೂ ಉಪಕಾರ ಮಾಡಬಾರದು. ತನ್ನ ಕರ್ತವ್ಯ ಎಂಬ ದೃಷ್ಟಿಯಿಂದಷ್ಟೇ ಮಾಡಬೇಕು. ಆತನೂ ಅದೇ ರೀತಿಯಿಂದ ನಡೆಯಬೇಕು. ಇದೇ ನೈಜತೆ. ಗಾಳಿ ಬೀಸುತ್ತೆ. ಬೆಂಕಿ ಮೇಲ್ಮುಖವಾಗಿ ಉರಿಯುತ್ತೆ, ನದಿ ಕೆಳಮುಖವಾಗಿ ಹರಿಯುತ್ತದೆ. ಮರಗಳು ಹಣ್ಣುಗಳನ್ನು ಬಿಡುತ್ತವೆ. ಭೂಮಿ ಗಟ್ಟಿಯಾಗಿ ನಮಗೆ ನಿಲ್ಲಲು ಆಧಾರವಾಗಿರುತ್ತೆ. ಆಕಾಶ ನಮಗೆ ಸಂಚಾರಕ್ಕೆ ಅನುಕೂಲಮಾಡುತ್ತೆ. ಇವುಗಳು ಪ್ರತಿಯಾಗಿ ನಮ್ಮಿಂದ ಏನನ್ನೂ ನಿರೀಕ್ಷಿಸುವುದಿಲ್ಲ. ಇದು ನಿಜವಾದ ಸೇವೆ. ಅದೇ ರೀತಿಯಾಗಿ ದೃಢಭಕ್ತಿಗೆ ಮಾತ್ರ ದೇವರು ಕಾಣಿಸುತ್ತಾನೆ. ಅಥವಾ ದೃಢವಾದ ದ್ವೇಷಕ್ಕೆ ಕಾಣುತ್ತಾನೆ. ಉ: ಹಿರಣ್ಯಕಶ್ಯಪು ಮತ್ತು ಅವನ ಮಗ ಪ್ರಹ್ಲಾದನ ಕಥೆ , ಹರಿಭಕ್ತರ ಸಂಭಾಷಣೆ, ಭಕ್ತರ ಪರಕಾಷ್ಠೆಯ ಫಲ.

# ಸರ್ವೋತ್ತಮರು



- ಎಚ್. ಎಂ. ಮಂಜು
ಬಿ.ಕಾಂ., ಎಲ್.ಎಲ್.ಬಿ.
ನ್ಯಾಯವಾದಿಗಳು,
ಹಂಪಾಪುರ
ಹೆಚ್. ಡಿ. ಕೋಟೆ ತಾಲ್ಲೂಕು
ಮೈಸೂರು ಜಿಲ್ಲೆ

ಕರ್ನಾಟಕರಾಜ್ಯದ, ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೋಕಿನ, ಹಂಪಾಪುರ ಹೋಬಳಿಗೆ ಸೇರಿದ ಜಿನ್ನಹಳ್ಳಿ ಗುರುಮಠದ ದಿ|| ಕುಮಾರಾರಾಧ್ಯರಿಗೆ ಸಮಾಜಸೇವೆ ಎಂದರೆ ಬಲು ಆಸಕ್ತಿ. ಅದನ್ನು ತಮ್ಮ ಕೆಲಸದಲ್ಲಿ ತೋರಿಸಿದವರಾಗಿದ್ದಾರೆ. ಗ್ರಾಮದ ನೈರ್ಮಲ್ಯ, ರಸ್ತೆಗಳ ರಿಪೇರಿ, ಚರಂಡಿಗಳ ದುರಸ್ತಿ, ಶಾಲೆಗೆ ಕಟ್ಟಡ, ಗ್ರಾಮದೇವತೆಗೆ ಉತ್ತಮ ಜಾಗ, ನೀರಿನ ಸೌಕರ್ಯ ಈ ಬಗ್ಗೆ ಆಸಕ್ತಿ ಹೊಂದಿದವರು. ಇವೆಲ್ಲವುಗಳನ್ನು ಗ್ರಾಮದ ಜನತೆಗೆ ತಿಳಿಯಪಡಿಸಿ ಅವರುಗಳಿಗೆ ಹುರುಪುನೀಡಿ ಒಗ್ಗೂಡಿಸಿ ಅವರಿಂದಲೇ ಆ ಕೆಲಸ ಮಾಡಿಸುತ್ತಿದ್ದರು. ಅದಲ್ಲದೆ ಸರಕಾರದಿಂದ ಆಗಬೇಕಾದ ಕೆಲಸಗಳನ್ನು ಬೆನ್ನುಹತ್ತಿ ಆದೇಶ ತಂದು ಮಾಡಿಸುತ್ತಿದ್ದುದ್ದು ಅವರಿಗೆ ಗೊತ್ತಿತ್ತು. ಅದು ಅವರ ದಿನ ನಿತ್ಯದ ಕೆಲಸವಾಗಿತ್ತು.

ಆರಾಧ್ಯರ ಜೀವನೋಪಾಯದ ವೃತ್ತಿಗಳು ಪೌರೋಹಿತ್ಯ, ಜೋತಿಷ್ಯ, ಸ್ಟಾಂಪ್‌ವೆಂಡರ್, ಪತ್ರಬರಹಗಾರರಾಗಿದ್ದರು. ಅಲ್ಲದೆ ವ್ಯವಸಾಯಗಾರರೂ ಆಗಿದ್ದರು. ಆರಾಧ್ಯರು ನ್ಯಾಯ, ನೀತಿ, ಧರ್ಮ, ಆಚಾರ, ವಿಚಾರ ಮತ್ತು ನೈತಿಕತೆಯುಳ್ಳವರು. ಇವರನ್ನು ಜನರು ಬಹಳ ಗೌರವದಿಂದ ಕಾಣುತ್ತಲಿದ್ದರು. ಹಾಗೂ ಗುರುಗಳೆಂದು ಪ್ರೀತಿಯಿಂದ ಸಂಬೋಧಿಸುತ್ತಿದ್ದರು.ಇವರಿಗೆ ಧಾರ್ಮಿಕ ಕೆಲಸಗಳೆಂದರೆ ಬಲು ಇಷ್ಟ. ಜನರು ಇವರ ಬಳಿ ಬಂದು ತಮ್ಮ ಕಷ್ಟ-ಸುಖಗಳನ್ನು ಹೇಳಿಕೊಂಡು ಅದಕ್ಕೆ ಪರಿಹಾರವನ್ನು ಪಡೆದುಕೊಂಡು ಹೋಗುವುದು ಸಂಪ್ರದಾಯ.

ಇವರು ತಮ್ಮ ಚಿಕ್ಕವಯಸ್ಸಿನಿಂದಲೂ ಸನ್ಮಾರ್ಗಾವಲಂಬಿಗಳೆಂದು ಬಲ್ಲವರು ತಿಳಿಸುತ್ತಲಿದ್ದರು. ಆರಾಧ್ಯರಿಗೆ ದೈವ ಭಕ್ತಿಯಲ್ಲಿ ಬಲು ಪ್ರೀತಿ, ಶ್ರದ್ಧೆಯುಳ್ಳವರು.

ಹಾಗೆಯೇ ಕಷ್ಟದಲ್ಲಿರುವವರಿಗೆ ಸಹಕಾರ ನೀಡಿ ಅವರ ಕಷ್ಟ ಪರಿಹಾರಕ್ಕೆ ನೆರವಾಗುವ ಮನೋಭಾವ ಹೊಂದಿದ್ದವರು. ತೊಂದರೆಗೊಳಗಾದವರು ಇವರ ಬಳಿ ಬಂದು ತಮ್ಮ ಜೀವನದ ಮಾರ್ಗವನ್ನು ಮತ್ತು ಕಷ್ಟ ನಿವಾರಣೆಯನ್ನು ಅರಿತು ಹೋಗುವುದು ವಾಡಿಕೆಯಾಗಿತ್ತು. ತಮ್ಮ ಹಳ್ಳಿಗೆ ಹೊಸಬರು ಬಂದರೆ ಆರಾಧ್ಯರ ಮನೆ ತೋರಿಸುವ ಹವ್ಯಾಸ ಗ್ರಾಮಸ್ಥರದು. ಆರಾಧ್ಯರು ಬಂದವರಿಗೆ ಪ್ರೀತಿ ಆದರ ಆತಿಥ್ಯಗಳಿಂದ ಕಾಣುತ್ತಿದ್ದರು. ಬಂದವರುಗಳಿಗೆ ತಮ್ಮಲ್ಲಿರುವ ಸೌಕರ್ಯಗಳನ್ನು ಒದಗಿಸುವ ಮನಸ್ಸು ಅವರಲ್ಲಿತ್ತು.

ತಮ್ಮ ಹೋಬಳಿ ಕೇಂದ್ರಕ್ಕೆ ಬೇಕಾಗುವ ಶಾಲೆಗಳು, ಕಛೇರಿಗಳು, ಆಸ್ಪತ್ರೆಗಳು ಬೇಕೆಂದು ಸರಕಾರದಲ್ಲಿ ಮನವಿ ಸಲ್ಲಿಸಿ ವ್ಯವಹರಿಸಿ ಮಂಜೂರು ಮಾಡಿಸುವುದು ಅವುಗಳಿಗೆ ತಕ್ಕ ಕಟ್ಟಡ ಒದಗಿಸುವುದು ಹಾಗೂ ಅವುಗಳ ವ್ಯವಹಾರ ಸುಗಮಗೊಳಿಸುವುದರ ಬಗ್ಗೆ ಆಸಕ್ತಿ ಇತ್ತು. ನಾಡಿನ ಬಗ್ಗೆ, ಭಾಷೆಯ ಬಗ್ಗೆ ಬಲು ಆಸಕ್ತಿ ಹೊಂದಿದ್ದರು. "*ಪರೋಪಕಾರಾರ್ಥ ಮಿದಂ ಶರೀರಂ*" ಎಂಬ ವಾಣಿಯನ್ನು ಆರಾಧ್ಯರು ತಿಳಿದು ನಡೆದವರಾಗಿದ್ದರು. ಇವರಿಗೆ ಚಿಕ್ಕ ಮಕ್ಕಳನ್ನು ಕಂಡರೆ ಬಲು ಇಷ್ಟ. ರೋಗಿಗಳಿಗೆ ತಮಗೆ ತಿಳಿದ ಸೂಕ್ತ ಮಾರ್ಗದರ್ಶನ ಕೊಡುತ್ತಿದ್ದರು. ಅವರ ಚೇತರಿಕೆಗೆ ಆರಾಧ್ಯರು ಊರುಗೋಲಾಗುವ ಸ್ವಭಾವದವರಾಗಿದ್ದರು.

ಆರಾಧ್ಯರು ಹುಟ್ಟಿನಿಂದಲೆ ದಾನಸ್ವಭಾವವನ್ನು ಮೈಗೂಡಿಸಿಕೊಂಡವರು. ಹೆಚ್. ಡಿ. ಕೋಟೆ ತಾಲ್ಲೂಕು ಜೊಂಪನಹಳ್ಳಿಯಲ್ಲಿ ತಮ್ಮ ಜಮೀನನ್ನು ಹಂಪಾಪುರದ ಆಸ್ಪತ್ರೆಗೂ, ಮೈಸೂರಿನ ಆರಾಧ್ಯ ಮಹಾಸಭೆಗೂ, ಶಾರದಾನಿಕೇತನಕ್ಕೂ, ಜೈನ ಬೋರ್ಡಿಂಗಿಗೂ ದಾನವಾಗಿ ನೀಡಿರುತ್ತಾರೆ. ಇವರು ಮಧ್ಯಮವರ್ಗದ ಸಾಮಾನ್ಯರು. ಇಂತಹ ಸ್ವಭಾವವು ಎಲ್ಲರಿಗೂ ಬರುವುದಿಲ್ಲ. ಆರಾಧ್ಯರ ಹೃದಯ ನಿಷ್ಕಲ್ಮಷವಾದ್ದು, ಪ್ರಾಮಾಣಿಕವಾದ್ದು. ಇವರು ಯತಿಯಂತಿದ್ದರು ಎಂದು ನನ್ನ ತಂದೆ ಹೇಳುತ್ತಿದ್ದರು. ಇಂತಹ ಸಜ್ಜನರು ನಮ್ಮೂರಲ್ಲಿ ಜನಿಸಿದ್ದು ನಮ್ಮ ಭಾಗ್ಯವೆಂದು ಸಾಕಷ್ಟು ಜನರ ಬಾಯಿಂದ ಕೇಳಿದ್ದೇನೆ. ಇವರ ಬದುಕು ನಮಗೆ ಮಾರ್ಗದೀಪ.

ಅಂದಿನ ಸರಕಾರ ಇಂತಹವರನ್ನು ಗುರುತಿಸಿ ಹಂಪಾಪುರದ ವಿಲೇಜ್ ಮುನ್‌ಸೀಫರಾಗಿ ನೇಮಿಸಿತ್ತು. ಆರಾಧ್ಯರು ಹತ್ತು ವರ್ಷಗಳು ನ್ಯಾಯಾಧೀಶರಾಗಿ ಜನತೆಯ ಸೇವೆ ಮಾಡಿದರು. ಉತ್ತಮರೆನಿಸಿಕೊಂಡರು. ಇವರ ಧ್ಯೇಯ ಅನ್ಯಾಯಕ್ಕೆ ಎಡೆಕೊಡದೆ ನ್ಯಾಯಕ್ಕೆ ಮನ್ನಣೆ ನೀಡಿ ಬಂದವರಿಗೆ ತಮ್ಮ ತಪ್ಪನ್ನು ಅರಿವಾಗಿಸಿ ಅವರ ತಪ್ಪು ಸರಿಪಡಿಸುವುದು ಗುರಿಯಾಗಿತ್ತು. ಆದ್ದರಿಂದ ಆ ಪ್ರದೇಶದ ಜನರು ಇವರನ್ನು ಹೊಗಳುತ್ತಲಿದ್ದರೆಂದು ಈಗಲು ಕೆಲವರು ನೆನೆಸುತ್ತಾರೆ. ನಾವು ಇತರರಿಗೆ ಸಂತೋಷ ತರುವುದೇ ಆ ದೇವರ ಪೂಜೆ ಮಾಡಿದಂತೆ ಎನ್ನುತ್ತಿದ್ದರೆಂದು ಅವರನ್ನು ಬಲ್ಲವರು ತಿಳಿಸುತ್ತಾರೆ. ಇಂತಹ ಸರ್ವೋತ್ತಮರನ್ನು ನೆನೆಸಿ ಮುಂದಿನ ಪೀಳಿಗೆಗೆ ತಿಳಿಸಲು ನನಗೆ ಅವಕಾಶ ಕೊಟ್ಟಿದ್ದಕ್ಕೆ ಅವರ ಮಗನಾದ ಜಿನ್ನಹಳ್ಳಿ ನಾಗಭೂಷಣಾರಾಧ್ಯರಿಗೆ ಅಭಿನಂದನೆಗಳು.

✱ ✱ ✱

# ವಿಶ್ವಚೈತನ್ಯಭಾಷೆ ಸಂಸ್ಕೃತ

*"ಯದಿಹಾಸ್ತಿ ತದನ್ಯತ್ರ, ಯನ್ನೇಹಾಸ್ತಿ ನ ಕುತ್ರಚಿತ್"* - ಯಾವ ವಿಚಾರ ಈ ಸಂಸ್ಕೃತ ಭಾಷಾ ಸಾಹಿತ್ಯದಲ್ಲಡಗಿದೆಯೋ ಅದು ಇತರೆ ಭಾಷಾ ಸಾಹಿತ್ಯಗಳಲ್ಲಡಗಿದೆ; ಯಾವ ವಿಚಾರ ಈ ಭಾಷಾ ಸಾಹಿತ್ಯದಲ್ಲಿಲ್ಲವೋ ಅದು ಬೇರೆ ಯಾವ ಭಾಷಾಸಾಹಿತ್ಯದಲ್ಲೂ ಇಲ್ಲ". ಎಂಬುದು ಲೋಕದಮಾತು ಸಂಸ್ಕೃತಭಾಷೆ ಪ್ರಮುಖವಾದುದು ದಿವ್ಯವಾದುದು, ಮಧುರವಾದುದು. ಸಂಸ್ಕೃತ ಮಾತಿನ ಆಭರಣ. ಇತರ ಎಲ್ಲಾ ಆಭರಣಗಳೂ ಇದರ ಮುಂದೆ ಕ್ಷೀಣ.

ಸಂಸ್ಕೃತವು ಸಂಸ್ಕೃತಿಯ ಭಂಡಾರ. ಸಂಸ್ಕೃತವಿಲ್ಲದೆ ಸಂಸ್ಕೃತಿ ಇಲ್ಲ. ಸಂಸ್ಕೃತಿಯಿಲ್ಲದೆ. ನಾಗರಿಕತೆ ಇಲ್ಲ. ನಾಗರಿಕತೆಯಿಲ್ಲದ ಬದುಕು ಅರ್ಥಹೀನ. ಈ ಭಾಷೆ ಮೇರು ಪರ್ವತದಷ್ಟೆತ್ತರಕ್ಕೆ ಬೆಳೆದಿದೆ. ಹಾಗೆ ಬೆಳೆದಿರುವುದನ್ನು ಉಳಿಸಬೇಕಾದ ಗುರುತರ ಜವಾಬ್ದಾರಿ ನಮ್ಮೆಲ್ಲರದ್ದು. ಇದನ್ನು ನಾವು ಎಂದಿಗೂ ಉಪೇಕ್ಷೆಮಾಡಬಾರದು. ದೇಶಸೇವೆ ಮಾಡಲು ಗಡಿಗೇ ಹೋಗಿ ಯುದ್ಧ ಮಾಡಬೇಕಾಗಿಲ್ಲ. ನಮ್ಮ ನಮ್ಮ ಮನೆಯಲ್ಲಿಯೇ ಇದ್ದುಕೊಂಡು ದೇಶಾಭಿಮಾನ ಬೆಳೆಸಿಕೊಳ್ಳುವುದೂ, ಮನದಲ್ಲಿ ಉಳಿಸಿಕೊಳ್ಳುವುದೂ ದೇಶಸೇವೆಯೇ ಹೌದು. ಹಾಗೆಯೇ ಸಂಸ್ಕೃತ ಭಾಷಾಭಿಮಾನದಿಂದ ಮನತುಂಬಿ ಮನೆಮನೆಗಳಲ್ಲಿ ಮಾತನಾಡಿಕೊಳ್ಳುವುದೂ ಸಂಸ್ಕೃತ ಭಾಷಾ ಮೇಲ್ಮೆಗೆ ಹಾಗೂ ಅದರ ಉಳಿಯುವಿಕೆಗೆ ಅನನ್ಯ ಕೊಡುಗೆಯೇ ಆಗುತ್ತದೆ.



- ವಿದ್ವಾನ್
ಶ್ರೀನಿವಾಸಮೂರ್ತಿ
ಪ್ರಾಧ್ಯಾಪಕರು,
ಮಹಾರಾಜ ಸಂಸ್ಕೃತ
ಮಹಾಪಾಠಶಾಲೆ
ಮೈಸೂರು.

ಮಾನವ ಸೃಷ್ಟಿಯ ಮಕುಟ. ಮಿಗಿಲಾಗಿ ಸಂಘಜೀವಿ. ಸಾಹಸಗಳ ಸೃಷ್ಟಿಕರ್ತ. ವಿಜ್ಞಾನ, ತಂತ್ರಜ್ಞಾನ, ಸಂಸ್ಕೃತಿ ಮತ್ತು ನಾಗರಿಕತೆಗಳ ಜನಕ. ಆದರೆ ದೌರ್ಭಾಗ್ಯದ ಸಂಗತಿಯೆಂದರೆ ಇವುಗಳೆಲ್ಲದರ ವಿಧ್ವಂಸಕನೂ ಅವನೇ ಆಗಿರುವುದು. ಈ ಎಲ್ಲಾ ಅಮೂಲ್ಯ ಸಾಧನೆಗಳ ರಕ್ಷಕನೇ ಭಕ್ಷಕನೂ ಆದರೆ ಏನು ತಾನೇ

ಉಳಿದೀತು? ಪ್ರಯುಕ್ತ ಈ ಎಲ್ಲ ಅಮೂಲ್ಯಗಳ ಉಳಿವುಗಳಿಗೆ ಅವನ ವಿವೇಕ ಜಾಗೃತವಾಗಬೇಕು. ಮಾನವ ಸಂಸ್ಕೃತಿಯ ಮಹತ್ವ ಮನಗಾಣಬೇಕು ಅದರ ಮೂಲ ಸ್ರೋತ ಸಂಸ್ಕೃತಭಾಷೆ. ಈ ಭಾಷಾಸಾಹಿತ್ಯದ ಸಂಗತಿಗಳ ಅರಿವಿನಿಂದ ಅವನನ್ನು ಸುಸಂಸ್ಕೃತಪ್ರಜೆಯನ್ನಾಗಿ ರೂಪಿಸಲು ಸಾಧ್ಯ, ವಿವೇಕವಂತನನ್ನಾಗಿ ಮಾಡಲು ಸಾಧ್ಯ, ಸದಾಚಾರ-ಸಚ್ಚಾರಿತ್ರ್ಯವಂತನನ್ನಾಗಿ ಬೆಳೆಸಲು ಸಾಧ್ಯ. ಸಂಸ್ಕೃತ ಭಾಷೆಯಲ್ಲಿ ಅಡಗಿರುವ ಅಪಾರ ಜ್ಞಾನಭಂಡಾರವನ್ನು ವಶಪಡಿಸಿಕೊಂಡವರಿಗೆ ಬದುಕಿನಲ್ಲಿ ಯಾವ ಬವಣೆಯೂ ಬರುವುದಿಲ್ಲ.

ಸಂಸ್ಕೃತಾಧ್ಯಯನದಿಂದ ವಿಶ್ವಪ್ರಜ್ಞೆ. ವಿಶ್ವಪ್ರೇಮ ವಿಶ್ವಭ್ರಾತೃತ್ವಮನೋಭಾವ ಮೂಡುತ್ತದೆ. *"ವಸುಧೈವ ಕುಟುಂಬಕಂ"* ಒಂದೇ ವಿಶ್ವ; ಒಂದೇ ಕುಟುಂಬ"ಎಂಬ ವಿಶಾಲ ಚಿಂತನೆ ಮನದುಂಬುತ್ತದೆ. ವಿಶ್ವಚೈತನ್ಯವನ್ನು ಮೆರೆಸಿದ ಭಾಷೆ ಈ ಸಂಸ್ಕೃತ. ಇದರಲ್ಲಿ ಅಡಗಿರುವ ವೈಜ್ಞಾನಿಕ ಮಹತ್ವಗಳನ್ನು ಗುರುತಿಸಿ, ನಿರಂತರ ಅನ್ವೇಷಣೆ ನಡೆಸಿ ಆಧುನಿಕ ತಂತ್ರಜ್ಞಾನಗಳನ್ನು ಸಮಾಜಮುಖಿಯಾಗಿ ಅಳವಡಿಸಿಕೊಟ್ಟವರು ನಮ್ಮ ಮಂತ್ರದ್ರಷ್ಟಾರರು.

ಸಂಸ್ಕೃತಭಾಷಾ ಪ್ರಚಾರ ಹಾಗೂ ಪ್ರಸಾರದಲ್ಲಿ ಕರ್ನಾಟಕದ ಕೊಡುಗೆ ಅಪಾರ. ಇಲ್ಲಿನ ಪ್ರತಿ ಮಠಾಧೀಶರೂ ಸಂಸ್ಕೃತ ವೇದ -ಆಗಮಗಳ ವಿದ್ಯಾಭ್ಯಾಸಕ್ಕೆ ಗಮನವಿತ್ತು ಪೋಷಿಸುತ್ತಿದ್ದಾರೆ. ಈ ಮಹಾಮಹಿಮರ ಸತತ ಪರಿಶ್ರಮ, ಪ್ರೋತ್ಸಾಹ ಧ್ಯೇಯ ಹಾಗೂ ನಿಷ್ಠೆಗಳಿಂದಾಗಿ ಈ ರಾಜ್ಯದಲ್ಲಿ ಸಂಸ್ಕೃತ ಭಾಷಾ ಪ್ರಸಾರ ವಿಶ್ವದ ಗಮನ ಸೆಳೆದಿದೆ. ಇಲ್ಲಿ ವ್ಯಾಸಂಗ ಮಾಡಿ ವಿದ್ವತ್ತನ್ನು ಸಂಪಾದಿಸಿದ ಮಹಾವಿದ್ವಾಂಸರು ಇಂದು ಜರ್ಮನಿ, ಜಪಾನ್, ಫ್ರಾನ್ಸ್ ಮುಂತಾದ ದೇಶಗಳ ವಿಶ್ವವಿದ್ಯಾಲಯಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದಾರೆ. ಜಾಗತಿಕ ಇತಿಹಾಸದಲ್ಲಿ ಅನಿರೀಕ್ಷಿತವಾಗಿ ನಡೆದುಹೋದ ಮಹಾಯುದ್ಧವೊಂದರಲ್ಲಿ ಸೋಲನ್ನನುಭವಿಸಿ ಪಾತಾಳಕ್ಕೆ ಕಚ್ಚಿಹೋಗಿದ್ದ ಜರ್ಮನ್ ಅಂತಹ ರಾಷ್ಟ್ರವೂ ಸಹ ಸಂಸ್ಕೃತ ಭಾಷೆಯಲ್ಲಿ ಮಂತ್ರ ಸ್ವರೂಪದಲ್ಲಿರುವ ಅಮೂಲ್ಯ ತಂತ್ರಜ್ಞಾನಗಳನ್ನು ಸದುಪಯೋಗಪಡಿಸಿಕೊಂಡು ಮತ್ತೆ ವಿಜ್ಞಾನಕ್ಷೇತ್ರದ ಪ್ರಗತಿಯಲ್ಲಿ ಒಂದನೇ ಸ್ಥಾನದಲ್ಲಿ ವಿರಾಜಮಾನವಾಗಿದೆ. ಇಲ್ಲೂ ಸಹ ಕರ್ನಾಟಕರಾಜ್ಯದ ಸಂಸ್ಕೃತ ವಿದ್ವಾಂಸರ ಸೇವೆಯೇ ಮುಂಚೂಣಿಯಲ್ಲಿದೆ. ಹಾಗಾಗಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯಮಟ್ಟದಲ್ಲಿ ಸಂಸ್ಕೃತವ್ಯಾಸಂಗಕ್ಕೆಂದೇ ಈ ರಾಜ್ಯಕ್ಕೆ, ಹೊರ ರಾಜ್ಯಗಳಿಂದ, ಹೊರ ರಾಷ್ಟ್ರಗಳಿಂದ ಸಾವಿರಾರು ಮಂದಿ ಆಸಕ್ತರು ಬಂದು ಶ್ರದ್ಧಾಭಕ್ತಿಗಳಿಂದ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಅಪಾರ ಜ್ಞಾನ ಸಂಪನ್ನರಾಗಿ ಮರಳುತ್ತಿದ್ದಾರೆ.

ಸಾಮಾನ್ಯಶಿಕ್ಷಣದ ಕಲಿಕೆಯ ಜೊತೆಗೆ ಸಂಸ್ಕೃತ ವಿಷಯವನ್ನು ಅಧ್ಯಯನ ಮಾಡುವ ಶಾಲಾಕಾಲೇಜುಗಳ ವಿದ್ಯಾರ್ಥಿಗಳು ಉನ್ನತಶ್ರೇಣಿಗಳಲ್ಲಿ ತೇರ್ಗಡೆಯಾಗುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ.

ದೌರ್ಭಾಗ್ಯವಶಾತ್ ಇಂದು ಶಿಕ್ಷಣ ವ್ಯಾಪಾರೀಕರಣವಾಗುತ್ತಿದೆ. ಎಲ್ಲ ವಿದ್ಯಾರ್ಥಿಗಳೂ ಔದ್ಯೋಗಿಕ ಶಿಕ್ಷಣಕ್ಕೆ ಮಹತ್ವ ನೀಡುತ್ತಿದ್ದಾರೆ. ಬಿಡುವಿಲ್ಲದೇ ದುಡಿಯುತ್ತಿದ್ದಾರೆ. ಮಾನಸಿಕ

ಶಾಂತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ಆದರೂ ಅಳಿದುಳಿದ ಕಿಂಚಿತ್‌ಸಮಯವನ್ನು ಸಂಸ್ಕೃತವ್ಯಾಸಂಗಕ್ಕಾಗಿ ಮೀಸಲಿಡುತ್ತಿದ್ದಾರೆ. ಅದರಿಂದಲೇ ಕಳೆದುಕೊಂಡಿರುವ ಮಾನಸಿಕ ತೃಪ್ತಿ-ನೆಮ್ಮದಿಗಳನ್ನು ಪಡೆಯುತ್ತಿದ್ದಾರೆ. ಇದು ಮಹತ್ವಪೂರ್ಣ ಬೆಳವಣಿಗೆಯಾಗಿದೆ.

ಈ ಮೇಲ್ಕಂಡ ಅಂಶಗಳತ್ತ ಕರ್ನಾಟಕ ಘನಸರ್ಕಾರವು ಗಮನಹರಿಸಬೇಕು. ಸಂಸ್ಕೃತಭಾಷೆಗೆ ಆಗುತ್ತಿರುವ ಅಪಚಾರಗಳನ್ನು ತಡೆಗಟ್ಟಬೇಕು. ತನ್ನ ಎಂದಿನ ಕಾಳಜಿಯನ್ನು ಈ ಭಾಷಾಭಿವೃದ್ಧಿಗೆ ಮೀಸಲಿರಿಸಬೇಕು. ಇತ್ತೀಚೆಗಿನ ಕೆಲವು ತೀರ್ಮಾನಗಳು ಈ ಭಾಷಾ ಬೆಳವಣಿಗೆಗೆ ಕುಠಾರಪ್ರಾಯವಾಗಿವೆ. ಸಂಸ್ಕೃತ -ವೇದ -ಆಗಮಗಳನ್ನು ಬೋಧಿಸುತ್ತಿರುವ ಸಂಸ್ಕೃತ ಶಾಲಾ-ಕಾಲೇಜುಗಳಿಗೆ ಅನುದಾನವನ್ನು ಹಂತಹಂತವಾಗಿ ಕಡಿತಗೊಳಿಸುವಿಕೆ, ಅಧ್ಯಾಪಕರಿಗೆ ವೇತನಾನುದಾನದಲ್ಲಿ ವಿಳಂಬನೀತಿ ಅನುಸರಿಸುವಿಕೆ, ಸಂಸ್ಕೃತವ್ಯಾಸಂಗಮಾಡಿ ಪದವೀಧರರಾಗಿರುವವರಿಗೆ ಉದ್ಯೋಗ ನೀಡದಿರುವಿಕೆ, ಖಾಸಗಿ ಹಾಗೂ ಸರ್ಕಾರಿ ಸಂಸ್ಕೃತ ಶಾಲಾ-ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಸುಮಾರು ಇಪ್ಪತ್ತು ವರ್ಷಗಳಿಂದ ಸ್ಥಗಿತಗೊಳಿಸಿರುವಿಕೆ, ಅಧ್ಯಾಪಕರಿಗೆ ಸೂಕ್ತ ಬಡ್ತಿ ನೀಡದಿರುವಿಕೆ, ಖಾಲಿ ಹುದ್ದೆಗಳನ್ನು ಭರ್ತಿ ಮಾಡದಿರುವಿಕೆ, ರಾಜಮಹಾರಾಜರುಗಳ ಮಹಾಪೋಷಕತ್ವದಲ್ಲಿ ನಡೆದುಬಂದ ಸಂಸ್ಕೃತ ಸ್ನಾತಕರಿಗೆ ಸನ್ಮಾನಿಸುವ ಸಂಬಂಧದ ಘಟಿಕೋತ್ಸವವನ್ನು ರದ್ದುಪಡಿಸಿರುವಿಕೆ, ಸುಮಾರು ಇಪ್ಪತ್ತು ವರ್ಷಗಳಿಂದ ರಾಜ್ಯದ ಸಂಸ್ಕೃತಕಾಲೇಜುಗಳ ವಿದ್ಯಾರ್ಥಿಗಳು ರಾಷ್ಟ್ರಮಟ್ಟದ ಸಂಸ್ಕೃತ ಶಾಸ್ತ್ರ ವಾಕ್ಯಾರ್ಥಿಯೋಗಿತಾ ಸ್ಪರ್ಧೆಗಳಲ್ಲಿ ಭಾಗವಹಿಸಿ ನಿರಂತರವಾಗಿ "ವೈಜಯಂತೀ ಪಾರಿತೋಷಕ"ವನ್ನು ರಾಜ್ಯಕ್ಕೆ ತಂದು ಕೊಡುತ್ತಿದ್ದರೂ ಅವರ ಸಾಧನೆಗಳನ್ನು ಗುರುತಿಸದಿರುವಿಕೆ, ಹೀಗೆ ಅನೇಕ ಸಂಗತಿಗಳಲ್ಲಿ ಉದಾಸೀನ ತೋರುತ್ತಿರುವುದು ಸಂಸ್ಕೃತ ಭಾಷಾಭಿವೃದ್ಧಿಗೆ ಆತಂಕಕಾರಿಯಾಗಿದೆ. ಇತ್ತೀಚೆಗೆ ರಾಜ್ಯದಲ್ಲಿ ತಾನೆ ಮಾಡಿದ ಅಲ್ಪಸಂಖ್ಯಾತ ಭಾಷೆಗಳ ಪುರೋಭಿವೃದ್ಧಿಗೆ ಪೂರಕವಾದ ಆರ್ಥಿಕ ಬೆಂಬಲ, ಸ್ವಾಯತ್ತತೆಗಾಗಿ ಅವುಗಳ ಅಕಾಡೆಮಿಗಳನ್ನು ಸ್ಥಾಪಿಸಲು ಮುಂದಾಗಿರುವ ಕರ್ನಾಟಕ ಘನಸರ್ಕಾರ ಅತ್ಯಂತ ಪ್ರಾಚೀನವಾದ, ಸಂಸ್ಕೃತಿಯ ಪೋಷಕವಾದ, ಅಪಾರ ಜ್ಞಾನರಾಶಿಸಂಪನ್ನವಾದ ಸಂಸ್ಕೃತಭಾಷೆಗೂ ಸ್ವಾಯತ್ತತೆ ಕಲ್ಪಿಸಿ ಪ್ರತ್ಯೇಕ ಅಕಾಡೆಮಿಯೊಂದನ್ನು ಸ್ಥಾಪಿಸುವುದು ಅತ್ಯಂತ ಅವಶ್ಯಕವಾಗಿದೆ. ಇದರಿಂದ ಸಂಸ್ಕೃತಭಾಷೆಯ ಸರ್ವಾಂಗೀಣ ಪುರೋಭಿವೃದ್ಧಿ ಸಾಧ್ಯವಾಗುತ್ತದೆ. ಸಂಸ್ಕೃತಿ ಮೈದುಂಬಿ ನಲಿಯುತ್ತದೆ. ನೈಜ ಸಮಾಜದ ಬೆಳವಣಿಗೆ ಸಾಗುತ್ತದೆ.

*"ಜೀಯಾತ್ ಗೀರ್ವಾಣ ಭಾರತೀ"*

✱ ✱ ✱

# ಕೊಡುಗೈ ದಾನಿ



ಮೈಸೂರು ನಗರದಲ್ಲಿರುವ ಆರಾಧ್ಯಮಹಾಸಭೆಗೂ ದಿವಂಗತರಿಗೂ ಎಲ್ಲಿಲ್ಲದ ನಂಟು. ಆರಾಧ್ಯಮಹಾಸಭೆಗೆ ಒಂದು ಐತಿಹ್ಯವಿದೆ. 1920ರ ದಶಕದಲ್ಲಿ ಆರಾಧ್ಯ ಸಮುದಾಯದ ವಿದ್ಯಾರ್ಥಿಗಳಿಗೆ ಮೈಸೂರು ನಗರದಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ಅನುಕೂಲ ಮಾಡಿಕೊಡಲು ಆರಾಧ್ಯ ಮಹಾಸಭೆ ಹುಟ್ಟಿಕೊಂಡಿತು. ಅನೇಕ ದಾನಿಗಳು ಮಹಾಸಭೆಗೆ ನೆರವಾದರು.ಇವರಲ್ಲಿ ಪ್ರಮುಖರಾದವರು ದಿವಂಗತ ವೇ|| ಬ್ರಂ|| ಶ್ರೀ ಆರ್. ಕುಮಾರಾರಾಧ್ಯಸ್ವಾಮಿಗಳು. ಇವರ ಸ್ಥಳ ಹೆಗ್ಗಡದೇವನಕೋಟೆ ತಾಲ್ಲೂಕಿನ ಜಿನ್ನಹಳ್ಳಿ ಗ್ರಾಮ. ಸ್ವಾತಂತ್ರ್ಯಪೂರ್ವದಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು. ಅಂದಿನ ದಿನಗಳಲ್ಲಿ ಹುರಿಯಾಳಾಗಿ ಕೆಲಸ ಮಾಡಿದವರು. ನಾಯಕತ್ವವನ್ನು ವಹಿಸಿಕೊಂಡು ಸಮಾಜದ ಅಭಿವೃದ್ಧಿಗೆ ಶ್ರಮಿಸಿದವರು. ಇವರಿಗೆ ತಮ್ಮ ಚಿಂತೆ ಇಲ್ಲದೆ ಸಮಾಜದ ಮತ್ತು ನಾಡಿನ ಚಿಂತೆಯೇ ಆಗಿತ್ತು. ವಿದ್ಯೆಗೆ ದೊಡ್ಡ ಶಕ್ತಿ ಇದೆಯೆಂದು ಅರಿತಿದ್ದವರು. ಈ ಕಾರಣಕ್ಕಾಗಿ ಅಂದಿನ ಯುವ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಜೊಂಪನಹಳ್ಳಿ ಗ್ರಾಮದ ತಮ್ಮ ಇಪ್ಪತ್ತೈದು ಎಕರೆ ನೀರಾವರಿ ಸೌಲಭ್ಯವಿರುವ ಜಮೀನನ್ನು ಆರಾಧ್ಯ ಮಹಾಸಭೆಗೆ ದಾನವಾಗಿ ನೀಡಿದರು. ಅದನ್ನು ಇಂದಿಗೂ ಆರಾಧ್ಯಮಹಾಸಭೆ ಕೃತಜ್ಞತೆಯಿಂದ ಸ್ಮರಿಸುತ್ತದೆ.



- ಬಿ. ಕೆ. ಮಲ್ಲಾರಾಧ್ಯ
ಪ್ರೌಢಶಾಲಾ ಮುಖ್ಯ ಶಿಕ್ಷಕರು (ನಿ)
ಮಾಜಿ ಕಾರ್ಯದರ್ಶಿ
ಆರಾಧ್ಯಮಹಾಸಭಾ, ಮೈಸೂರು.

* * *

# ಮಾದರಿ ಹಿರಿಯಜ್ಜ

ಇವರು ನನ್ನ ತಂದೆಯ ತಂದೆ. ಇವರನ್ನು ಕುಮಾರಾರಾಧ್ಯರೆಂದು ಹೆಸರಿಸಿದ್ದರು. ನಾನು ಇವರನ್ನು "ಹಿರಿಯಜ್ಜ" ಎನ್ನುತ್ತೇನೆ. ನನಗೆ ಮತ್ತೊಬ್ಬ ಅಜ್ಜ ಇದ್ದರು, ಅಂದರೆ ಇವರ ತಮ್ಮ. ಇವರು ಚಿಕ್ಕಜ್ಜ. ಇವರಿಬ್ಬರೂ ನಮ್ಮ ಮನೆಯ ಎರಡು ಕಣ್ಣುಗಳು. ಈ ಇಬ್ಬರೂ ಜಿನ್ನಹಳ್ಳಿ ವಾಸಿಗಳು. ನಮ್ಮ ಹಳ್ಳಿ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿದೆ. ಈ ಊರಿನಲ್ಲಿ ಆರಾಧ್ಯರದು ಒಂದೆ ಮನೆ.

ನನ್ನ ಹಿರಿಯಜ್ಜನನ್ನು ಕಂಡರೆ ಊರವರಿಗೆಲ್ಲ ಇಷ್ಟ. ಮನೆಯವರೆಲ್ಲರೂ ಭಕ್ತಿ, ಭಯ ಪಡುತ್ತಿದ್ದರು. ಸಮಾಜಕ್ಕೆ ಇವರನ್ನು ಕಂಡರೆ ಬಲು ಒಲವು. ಹೀಗಿರಲು ಕಾರಣಗಳೇನೆಂದು ನನಗೆ ಯೋಚನೆ ಬಂದಿತು. ಆಗ ಇವರ ವಿಚಾರಗಳನ್ನು ತಿಳಿಯಲು ಉಪಕ್ರಮಿಸಿದೆ. ಬಲು ಆಸಕ್ತನಾದೆ. ಮನೆಯವರಾದ ತಾಯಿ, ತಂದೆ ಮತ್ತು ಅತ್ತೆಯವರನ್ನು ಕೇಳುವುದು, ನಮ್ಮ ಹತ್ತಿರದ ನೆಂಟರಿಷ್ಟರನ್ನು ಪ್ರಶ್ನಿಸುವುದು. ಮತ್ತು ಊರಿನ ತಿಳಿದ ಜನರನ್ನು ಊರಿಗೆ ಹೋದಾಗ ವಿಚಾರಿಸುವುದನ್ನು ರೂಢಿಮಾಡಿಕೊಂಡೆ. ಇದರಿಂದ ಈ ಪುಟ್ಟ ಲೇಖನ ಸೃಷ್ಟಿ.

ಅಜ್ಜ-ಅಜ್ಜಿಯರನ್ನು ನೋಡದ ನಾನು ಇತರರ ಬಾಯಿ ಮಾತಿನಿಂದಷ್ಟೇ ಕೇಳಿ ಸಂತೋಷ ಪಡುತ್ತಿದ್ದೇನೆ. ಜನರ ಮಾತಿನಿಂದ ಅವರೆಂತಹ ಶಿಸ್ತುಬದ್ಧಜೀವನ ನಡೆಸಿದರೆಂದು ಊಹಿಸಬಹುದು. ನನ್ನ ತಾತ ಅಜ್ಜಿಯರು ದೈಹಿಕ -ಮಾನಸಿಕ ಸ್ವಾಸ್ಥ್ಯ ಹೊಂದಿದ್ದರೆಂದು ಅರಿವಾಗುತ್ತದೆ. ನಾಡು-ನುಡಿಯ ಮಮತೆಯುಳ್ಳವರು. ಸಮಾಜದ ಆಗುಹೋಗುಗಳ ಬಗ್ಗೆ ಅವರಿಗೆ ಬಲು ಆಸಕ್ತಿ. ಕಷ್ಟಸಹಿಷ್ಣುತೆಯ ಸ್ವಭಾವ ಉಳ್ಳವರೆಂದು ಎಲ್ಲರ ಬಾಯಿಯ ಮಾತಿನಿಂದ ನನಗೆ ಅರಿವಾಯಿತು. ಪ್ರಕೃತಿ ಮಾತೆಯ ಪ್ರೇಮಿಗಳೆಂದು ತಿಳಿಯಿತು.



- **ಆರಾಧ್ಯ ಪೂರ್ಣ ಚೈತನ್ಯ ರೇಣುಕೇಶ್**
ಮೈಸೂರು.
ದೂ. 9945855167

ಈ ಇಬ್ಬರ ಜೀವನದ ಬಾಳು ಬೆಳಕಾಗಿ ಕಾಣುತ್ತದೆ. ನಮ್ಮೆಲ್ಲರಿಗೂ ಇದು ಮಾರ್ಗ ಸೂಚಿಯಾಗಿ ಬೆಳಕನೀಡುತ್ತದೆ. ಇವರ ಆದರ್ಶ ಅನುಕರಣೀಯ ನಮಗೆ. ಇವರ ಆಶೀರ್ವಾದ ನಮ್ಮೆಲ್ಲರಿಗಿರಲಿ. ಇದು ಉತ್ಪ್ರೇಕ್ಷೆಯ ಮಾತಲ್ಲ. ಮನದಾಳದ ತುಡಿತ. ಇದನ್ನು ತಮ್ಮ ಮುಂದಿಟ್ಟಿದೆ. ತಾತ ಮತ್ತು ಅಜ್ಜಿಯವರು ಚಾರಿತ್ರ್ಯದ ಮನುಷ್ಯೋತ್ತಮರು. ನಾಡಿನ ನಿಷ್ಠಾವಂತ ನಾಗರಿಕರು. ನಮ್ಮ ಕುಟುಂಬಕ್ಕೆ ಭರವಸೆ ನೀಡಿದವರು.

*ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು*
*ಕಲ್ಲಾಗು ಕಷ್ಟಗಳ ಮಳೆಯು ವಿಧಿ ಸುರಿಯೆ*
*ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ*
*ಎಲ್ಲರೊಳಗೊಂದಾಗು - ಮಂಕುತಿಮ್ಮ - ಡಿ.ವಿ.ಜಿ.*

* * *

## ಕರ್ತವ್ಯ :

ಮನುಷ್ಯ ತನ್ನ ಕರ್ತವ್ಯವನ್ನು ಕಿಂಚಿತ್ತು ಆಲಸ್ಯ ವಿಳಂಬಕ್ಕಾಗಲಿ ಆಸ್ಪದಕೊಡದೆ ಶ್ರದ್ಧಾಭಕ್ತಿಯಿಂದ ಸಕಾಲದಲ್ಲಿ ನಿರ್ವಹಿಸಬೇಕು. ಮನುಷ್ಯನಾಗಿ ಹುಟ್ಟಿದಂಥ ವ್ಯಕ್ತಿಗೆ ತನ್ನ ಜೀವಿತಾವಧಿಯಲ್ಲಿ ಕರ್ತವ್ಯವೇ ದೇವರು, ಕರ್ತವ್ಯವೇ ಧರ್ಮ, ಕರ್ತವ್ಯವೇ ಗುರಿ, ಕರ್ತವ್ಯವೇ ತಾಯಿ, ಕರ್ತವ್ಯವೇ ತಂದೆ, ಕರ್ತವ್ಯವೇ ಬಂಧು-ಬಳಗ. ಕರ್ತವ್ಯಕ್ಕೆ ಮಿಗಿಲಾದ್ದು ಪ್ರತಿಯೊಬ್ಬ ಜೀವಿಯ ಪಾಲಿಗೆ ಮತ್ತೊಂದಿಲ್ಲವೆಂದು ಶ್ರೀ ಕೃಷ್ಣಭಗವದ್ಗೀತೆಯಲ್ಲಿ ಹೇಳಿದ್ದಾನೆ. ಕರ್ತವ್ಯವನ್ನು ಚಾಚು ತಪ್ಪದೆ, ಶಿಸ್ತಿನಿಂದ ಪಾಲಿಸುವಂಥ ವ್ಯಕ್ತಿ ತನ್ನ ಜೀವಿತದಲ್ಲಿ ಯಶಸ್ವಿಯಾಗುತ್ತಾನೆ. ಸಾರ್ಥಕಜೀವನವನ್ನು ಯಾರು ಮಾಡುವುದಿಲ್ಲವೋ ಅಂಥವರು ಬೇಗನೆ ಸ್ಥಾನಮಾನಗಳನ್ನು ಕಳೆದುಕೊಳ್ಳುತ್ತಾರೆ. ಅಂತಹವರ ಜೀವನ ವ್ಯರ್ಥಸಾಧ್ಯವಾಗುತ್ತದೆ. ಅವರು ಕಸಕ್ಕಿಂತ ಕೀಳಾಗುತ್ತಾರೆ.

## ಕ್ಷಮಾತೀತ

ಎಚ್ಚೆತ್ತು ನಡೆದರೆ ಮಾನವ
ಉಳಿಸಬಹುದು ಜೀವ, ಸಂಕುಲವ
ದಿಲ್ಲದೆ, ಬುದ್ಧಿವಂತ ಪ್ರಾಣಿಯೆಂಬ
ಅಹಂಕಾರದಲಿ ಮೆರೆಯತೊಡಗಿದರೆ
ಇಡೀ ಜೀವಕುಲದ ವಿನಾಶಕೆ
ಕಾರಣನಾಗುವನು ಕ್ಷಮೆಯಿಲ್ಲದಿದುಕೆ

# ಆರಾಧ್ಯಬಂಧುಗಳು

ಕನ್ನಡನಾಡಿನ ಶಿವೋಪಾಸಕರಲ್ಲಿ "ಆರಾಧ್ಯ" ಎಂಬ ಸಮುದಾಯವು ಸಾಕಷ್ಟು ಪ್ರಾಚೀನವಾದುದು. ಆರಾಧ್ಯರು ಶೈವಬ್ರಾಹ್ಮಣರೆಂದೇ ಪರಿಗಣಿತರಾಗಿದ್ದಾರೆ. *'ಪೂಜೆಗೆ ಯೋಗ್ಯವಾದವನು'* ಎಂಬುದು ಆ ಶಬ್ದಕ್ಕಿರುವ ಅರ್ಥ. ಅದಕ್ಕೆ ತಕ್ಕಂತೆ ಅವರು ರಾಜಮಹಾರಾಜರ, ಪಾಳೆಯಗಾರರ ಹಾಗೂ ತಾವು ವಾಸಮಾಡುತ್ತಿದ್ದ ಪರಿಸರದ ಶ್ರೀಸಾಮಾನ್ಯರ ಗೌರವಾದರಗಳಿಗೆ ಪಾತ್ರರಾಗಿದ್ದರು. ವೇದಶಾಸ್ತ್ರ ಪುರಾಣಗಳಲ್ಲಿ ಪರಿಣತರಾಗಿದ್ದು, ಜ್ಯೋತಿಷ, ಆಯುರ್ವೇದ, ಪೌರೋಹಿತ್ಯ, ವ್ಯವಸಾಯ ಮುಂತಾದ ವಿದ್ಯೆಗಳಲ್ಲಿ ಪಾರಂಗತರಾಗಿದ್ದ ಅವರು ಸರ್ವಜನಾದರಣೀಯರಾಗಿದ್ದರು. ಇಂದಿಗೂ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಮಾಡುತ್ತಿರುವ ಆರಾಧ್ಯರು ತಾವು ಕಲಿತ ವಿದ್ಯೆಯು ಲೋಕ ಹಿತಕ್ಕಾಗಿ ವಿನಿಯೋಗವಾಗಬೇಕೆಂಬ ಕಳಕಳಿಯಿಂದ ಜೀವಿಸುತ್ತಿದ್ದಾರೆ. ನಿರಾಡಂಬರ ಜೀವನಕ್ಕೆ ಒಗ್ಗಿಕೊಂಡಿರುವ ಆರಾಧ್ಯರು ಬಡತನವಿದ್ದರೂ ಚಿಂತೆಯಿಲ್ಲ, ಸಮಾಜದ ಗೌರವಕ್ಕೆ ಪಾತ್ರರಾಗಿ ಬಾಳಬೇಕೆಂಬ ಹಂಬಲದಿಂದ ಸಾಗುತ್ತಿದ್ದಾರೆ. ಆರಾಧ್ಯ ಜನಾಂಗದಲ್ಲಿರುವ ಪುರೋಹಿತವರ್ಗದವರು ತಮ್ಮ ಜನಾಂಗದವರಿಗೆ ಪೌರೋಹಿತ್ಯ ಮಾಡಿಸುವುದಲ್ಲದೆ, ಲಿಂಗಾಯತ ಸಮುದಾಯಕ್ಕೂ, ಒಕ್ಕಲಿಗ ಮುಂತಾದ ಪಂಗಡಗಳಿಗೂ ಗುರುಸ್ಥಾನದಲ್ಲಿದ್ದು ಪೌರೋಹಿತ್ಯ ಮಾಡಿಸುತ್ತಾರೆ. ಆಧುನಿಕ ವಿದ್ಯಾಭ್ಯಾಸ ಮತ್ತು ಆಧುನಿಕ ಉದ್ಯೋಗಗಳು ಮತ್ತು ಜೀವನಪದ್ಧತಿಗಳೆ ಇವರ ಔನ್ನತ್ಯಕ್ಕೆ ಕಾರಣವಾಗಿದೆ. ಕನ್ನಡನಾಡಿನ ಎಲ್ಲಬ್ರಾಹ್ಮಣಸಮುದಾಯಗಳೂ ತಮ್ಮ ಘನತೆ ಗೌರವಗಳಲ್ಲಿ ಹಿನ್ನಡೆಯನ್ನು ಕಂಡಿರುವಲ್ಲಿ ಆರಾಧ್ಯ ಸಮುದಾಯವೂ ಅದಕ್ಕೆ ಹೊರತಾಗಿಲ್ಲ. ಆದರೆ ಆರಾಧ್ಯ ಜನಾಂಗದಲ್ಲಾದ ಅನೇಕ ಮುಖ್ಯವಾದ ಸ್ಥಿತ್ಯಂತರಗಳು ಮಿಕ್ಕಾವ ಬ್ರಾಹ್ಮಣ ಪಂಗಡಗಳಲ್ಲೂ ಆಗಲಿಲ್ಲವೆಂದೆ



**- ಡಾ|| ಕೆ. ಅನಂತರಾಮು**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
# 414, ದೇವಾಂಬಾ ಅಗ್ರಹಾರ,
ಮೈಸೂರು - 570 024.

ಹೇಳಬೇಕು. ಆರಾಧ್ಯರು ಮೈಸೂರು, ಚಾಮರಾಜನಗರ, ಮಂಡ್ಯ, ಹಾಸನ, ಬೆಂಗಳೂರು ಜಿಲ್ಲೆಗಳಲ್ಲಿ ಅತ್ಯಂತ ವಿರಳವಾಗಿ ಚೆದುರಿ ಹೋಗಿದ್ದಾರೆ.

**ಇತಿಹಾಸ ರಚನೆ ಕಷ್ಟಕರವಾಗಿದೆ**

ಆರಾಧ್ಯಜನಾಂಗವು ಹಲವು ಸ್ಥಿತ್ಯಂತರಗಳನ್ನು ಏಳುಬೀಳುಗಳನ್ನು ಕಾಲದಿಂದ ಕಾಲಕ್ಕೆ ಅನುಭವಿಸುತ್ತ ಬಂದಿರುವುದರಿಂದ, ಆ ಜನಾಂಗದ ಇತಿಹಾಸವನ್ನು 'ಹೀಗೆಯೇ ಸರಿ' ಎಂದು ಬರೆಯುವುದು ಅತ್ಯಂತ ಕಷ್ಟಸಾಧ್ಯವಾದ ಕಾರ್ಯವಾಗಿದೆ. 'The Mysore Tribes and Castes' (Vol : 2, 1930) ಎಂಬ ಉದ್ಗ್ರಂಥದಲ್ಲಿ ಎಲ್. ಕೆ. ಎ. ಅಯ್ಯರ್ ಅವರು ಆರಾಧ್ಯ ಜನಾಂಗದ ವಿಚಾರವಾಗಿ ಅಮೂಲ್ಯವಾದ ವಿಷಯಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಆ ವಿವರಗಳಲ್ಲೀಗ ಸಾಕಷ್ಟು ಪರಿವರ್ತನೆಗಳಾಗಿರಬಹುದು. ಸತ್ಯವನ್ನು ನಿರ್ಭೀತಿಯಿಂದ ಹೇಳುವ ವಿದ್ವನ್ಮಣಿ ಎಂ. ಚಿದಾನಂದಮೂರ್ತಿಗಳು (ಜಂಗಮ ಜಾತಿಯಲ್ಲಿ ಅನುಶ್ರೇಣಿ, ಸ್ಥಾವರ:ಜಂಗಮ) ಆ ಜನಾಂಗದ ಮೇಲೆ ಸಾಕಷ್ಟು ಬೆಳಕು ಚೆಲ್ಲಿದ್ದಾರೆ. ಜಿನ್ನಹಳ್ಳಿ ನಾಗಭೂಷಣಾರಾಧ್ಯರು ಆರಾಧ್ಯಜನಾಂಗವನ್ನು ಕುರಿತಂತೆ ವಿಚಾರ ಸಂಕಿರಣವೊಂದನ್ನು ಏರ್ಪಡಿಸಿ, ಆ ಹೊತ್ತಿನಲ್ಲಿ ಮಂಡಿಸಲಾದ ಲೇಖನಗಳನ್ನು ಒಟ್ಟುಗೂಡಿಸಿ 'ಆರಾಧ್ಯ ಪರಂಪರೆ'(1998)ಎಂಬ ಕಿರು ಹೊತ್ತಗೆಯೊಂದನ್ನು ಹೊರತಂದಿದ್ದಾರೆ. ಅವರದೇ ಪ್ರಯತ್ನದಿಂದ ಪ್ರಕಟವಾಗಿರುವ (ಆರಾಧ್ಯ ಕೈಪಿಡಿ - 2001) ಎಂಬ ಹೊತ್ತಗೆಯಲ್ಲಿಯೂ ಆರಾಧ್ಯಜನಾಂಗವನ್ನು ಕುರಿತಂತೆ ವಿವಿಧ ಲೇಖಕರ ಕೆಲವು ಬರಹಗಳಿವೆ. ಆರ್. ಎಂ. ಪುಟ್ಟಸೋಮಾರಾಧ್ಯರ 'ಯಾಜುಷಪ್ರಯೋಗಸಂಗ್ರಹ ಮತ್ತು ಆರಾಧ್ಯಶೈವರ ಸಂಕ್ಷಿಪ್ತ ಇತಿಹಾಸ 1999 ಎಂಬ ಕೃತಿಯಲ್ಲಿಯೂ ಉಪಯುಕ್ತ ಮಾಹಿತಿಗಳಿವೆ. ಈ ಎಲ್ಲ ಮೂಲಗಳನ್ನೂ ಆಧರಿಸಿ, ಜೊತೆಗೆ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ತಮ್ಮ ಸಮುದಾಯದ ಬಗ್ಗೆ ನನಗೆ ತಿಳಿಸಿಕೊಟ್ಟಿರುವ ಕೆಲವು ವಿವರಗಳನ್ನು ಶೇಖರಿಸಿ, ಆರಾಧ್ಯಬಂಧುಗಳ ಸ್ಥೂಲಪರಿಚಯವೊಂದನ್ನು ಈ ಲೇಖನದಲ್ಲಿ ನೀಡಲು ಪ್ರಯತ್ನಿಸಿದ್ದೇನೆ. ಎಲ್. ಕೆ. ಎ. ಅಯ್ಯರ್ ಅವರು "ಆರಾಧ್ಯ ಎಂಬುದು ಮೈಸೂರು ಜಿಲ್ಲೆಯಲ್ಲಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬ್ರಾಹ್ಮಣಪಂಗಡಗಳಲ್ಲೊಂದು"ಎಂದು ಬರೆದಿದ್ದರೆ;ಇತ್ತೀಚೆಗೆ ಸೂರ್ಯನಾಥ ಯು. ಕಾಮತ್ ಅವರ ಪ್ರಧಾನಸಂಪಾದಕತ್ವದಲ್ಲಿ ಪ್ರಕಟವಾಗಿರುವ Karnataka State Gazetter : Mysore District (1988) ಎಂಬ ಗ್ರಂಥದಲ್ಲಿ "ಆರಾಧ್ಯ ಎಂಬುದು ಲಿಂಗಾಯಿತರ ಒಳಪಂಗಡಗಳಲ್ಲೊಂದು" ಎಂದು ಉಲ್ಲೇಖಿಸಲಾಗಿದೆ. ಒಂದಕ್ಕೊಂದು ಭಿನ್ನವಾಗಿ ಈ ನಿರೂಪಣೆ ಆರಾಧ್ಯಜನಾಂಗದಲ್ಲಾಗಿರುವ ಸ್ಥಿತ್ಯಂತರಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಕಿಟ್ಟೆಲ್ಲರು ತಮ್ಮ 'ಕನ್ನಡ -ಇಂಗ್ಲಿಷ್ ನಿಘಂಟು'ವಿನಲ್ಲಿ ಆರಾಧ್ಯ ಎಂಬ ಶಬ್ದಕ್ಕೆ.......... ಪೂಜಿಸಲು ಯೋಗ್ಯನಾದವನು'ಎಂಬ ಅರ್ಥವನ್ನು ಬರೆದಿರುವುದಲ್ಲದೆ "ಆರಾಧ್ಯರು ಶೈವಬ್ರಾಹ್ಮಣಪಂಗಡಗಳಲ್ಲಿ ಒಬ್ಬರಾಗಿದ್ದಾರೆ. ಅವರು ಜನಿವಾರವನ್ನು ಧರಿಸುವವರಾಗಿ ಅದನ್ನು

ಶಿವದಾರ ಎಂದು ಹೇಳುತ್ತಾರೆ" ಎಂದೂ ನಿರ್ದೇಶಿಸಿದ್ದಾರೆ. ಆರಾಧ್ಯ ಎಂಬುದು ಆ ಶಬ್ದಕ್ಕಿರುವ ಸ್ತ್ರೀಲಿಂಗರೂಪವೆಂದೂ ತಿಳಿಸಿಕೊಟ್ಟಿದ್ದಾರೆ.

### ವೇದಗಳನ್ನು ಒಪ್ಪುತ್ತಾರೆ

ಆರಾಧ್ಯ ಬಂಧುಗಳು ವೈದಿಕಬ್ರಾಹ್ಮಣರಂತೆ ಶಿಷ್ಟಾವಂತರಾಗಿ ವೇದಗಳನ್ನು ಒಪ್ಪುತ್ತಾರೆ, ಅಧ್ಯಯನ ಮಾಡುತ್ತಾರೆ. (ನೋಡಿ : ಜಿನ್ನಹಳ್ಳಿ ನಾಗಭೂಷಣಾರಾಧ್ಯ, ನೂತನ ವೈದಿಕ ಶಿವಪೂಜಾವಿಧಿ', 2001) ಬಾಲಕರಿಗೆ ಉಪನಯನ ವಿಧಿಯನ್ನು ನೆರವೇರಿಸುತ್ತಾರೆ. ಆಗ 'ಗಾಯತ್ರೀಮಂತ್ರ'ವನ್ನು ಉಪದೇಶಿಸುತ್ತಾರೆ. ಅಂತೆಯೇ ಲಿಂಗದೀಕ್ಷೆಯೂ ಉಂಟು. ಅಗ್ನಿಯನ್ನು ಹೂಡಿಕೊಂಡು ಹೋಮಹವನಾದಿಗಳನ್ನು ನಡೆಸುತ್ತಾರೆ, ಸೂರ್ಯೋಪಾಸನೆ ಮಾಡುತ್ತಾರೆ. ಯಜ್ಞೋಪವೀತ ಮಾತ್ರವಲ್ಲದೆ ವೀರಶೈವರಂತೆ ಇಷ್ಟಲಿಂಗವನ್ನು ಧರಿಸುತ್ತಾರೆ ಮತ್ತು ಪೂಜಿಸುತ್ತಾರೆ. ಸ್ತ್ರೀಯರಿಗೆ ಲಿಂಗಧಾರಣೆ ಮಾತ್ರ. ಜನಿವಾರವಿಲ್ಲ. ದೇವಾಲಯಗಳಲ್ಲೂ ಸ್ಥಾವರಲಿಂಗಗಳನ್ನು ಪೂಜಿಸುತ್ತಾರೆ. ತಮ್ಮ ಸಮುದಾಯಕ್ಕೆ, ವೀರಶೈವಸಮುದಾಯಕ್ಕೆ, ಒಕ್ಕಲಿಗ ಮತ್ತಿತರ ಕೆಲವು ಹಿಂದೂ ಸಮುದಾಯಗಳಿಗೆ ಪುರೋಹಿತರಾಗಿಯೂ ಕರ್ಮನಿರ್ವಹಣೆ ಮಾಡಿಕೊಡುತ್ತಾರೆ. ವೈದಿಕಬ್ರಾಹ್ಮಣರಲ್ಲಿರುವಂತೆ ಆರಾಧ್ಯರಲ್ಲಿಯೂ ಕೌಶಿಕ, ಭಾರದ್ವಾಜ, ಆತ್ರೇಯಸ, ಕಾಶ್ಯಪ, ಗೌತಮ, ಶಾಂಡಿಲ್ಯ, ಹಾರೀತ ಮುಂತಾದ ಗೋತ್ರಗಳೂ ; ಆಪಸ್ತಂಭ, ಬೋಧಾಯನ, ಆಶ್ವಲಾಯನ ಮುಂತಾದ ಸೂತ್ರಗಳೂ ಇವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬಿತ್ಯಾದಿ ವೇದಶಾಖೆಗಳನ್ನು ಬೇರೆ ಬೇರೆ ಗೋತ್ರ ಸೂತ್ರದವರು ಅಧ್ಯಯನ ಮಾಡುವ ಪರಂಪರೆಯೂ ಇದೆ. (ನೋಡಿ: ಆರಾಧ್ಯಕೈಪಿಡಿ, ಕೆ. ನಂಜುಂಡಾರಾಧ್ಯರ ಲೇಖನ, ಪು 11) ಅಷ್ಟು ಮಾತ್ರವಲ್ಲದೆ ಗೋತ್ರಗಳನ್ನು ಸದಾಶಿವ, ಈಶ್ವರ, ಮಾಹೇಶ್ವರ, ರುದ್ರ, ನೀಲಕಂಠ, ಸೋಮಧರ, ಮೃಡ, ನೀಲಲೋಚನ, ಕಪರ್ದಿ, ಕೃತ್ತಿವಾಸ ಎಂಬಂತೆ ಗುರುತಿಸುವ ಕ್ರಮವೂ ಇದೆ. ಕಾಮಿಕಾಗಮ, ದೀಪಾಗಮ, ವಾತುಲಾಗಮ, ಗೌರವಾಗಮ, ಲಲಿತಾಗಮ, ಕರಣಾಗಮ, ಸಂತಾನಾಗಮ ಎಂಬಂತೆ ತಂತಮ್ಮ ಗೋತ್ರಸೂತ್ರಗಳಿಗೆ ನಿಶ್ಚಯಿಸಿದ ಆಗಮಗಳನ್ನು ಪರಿಶೀಲಿಸುವ ಕ್ರಮವೂ ಇದೆ. (ನೋಡಿ : ಆರಾಧ್ಯಕೈಪಿಡಿ, ಮಲ್ಲಾರಾಧ್ಯರ ಲೇಖನ, ಪು. 10) ಕುಮಾರಾರಾಧ್ಯ, ಷಣ್ಮುಖಾರಾಧ್ಯ, ರೇಣುಕಾರಾಧ್ಯ, ಶ್ರೀಕಂಠಾರಾಧ್ಯ, ಶಂಕರಾರಾಧ್ಯ, ನಾಗಭೂಷಣಾರಾಧ್ಯ, ಬಸವಾರಾಧ್ಯ, ವೇದಾರಾಧ್ಯ, ಚಂದ್ರಶೇಖರಾರಾಧ್ಯ, ಕಾಶೀಆರಾಧ್ಯ, ನಂಜುಂಡಾರಾಧ್ಯ ಎಂಬಂತೆ ಆರಾಧ್ಯವೆಂಬ ಉಪನಾಮವನ್ನು ಧರಿಸುತ್ತಾರೆ. ಆದರೆ ಇತ್ತೀಚಿನ ದಶಕಗಳಲ್ಲಿ ಕೆಲವರು ಆರಾಧ್ಯ ಎಂಬುದನ್ನು ಬಿಟ್ಟು ಚಂದ್ರಮೌಳಿ, ಸುರೇಶ್, ಸ್ವಾಮಿ, ಹರ್ಷವರ್ಧನ, ನಾಗರಾಜು, ರಾಜೇಶ್, ಚೇತನ, ಸಂಜಯ ಎಂಬಂತೆ ನಾಮಕರಣ ಮಾಡುತ್ತಿದ್ದಾರೆ. ಹೆಸರು ಹೊಸದಾದರೂ ಆರಾಧ್ಯ ಎಂಬುದನ್ನು ಬಿಡದಿರುವ ನಿತಿನ್ ಆರಾಧ್ಯ, ನಿರೂಪಾರಾಧ್ಯ, ಪ್ರಮೋದಾರಾಧ್ಯ, ಪ್ರಕಾಶಾರಾಧ್ಯ, ಪ್ರವೀಣ್ ಆರಾಧ್ಯ, ಪ್ರಸನ್ನಾರಾಧ್ಯ, ರವಿ ಆರಾಧ್ಯ ಎಂಬಂತಹ ಹೊಸ ಹೊಸ ಜೋಡಣೆಗಳೂ ಇವೆ. ಆರಾಧ್ಯ ಪೂರ್ಣತೇಜಸ್ವಿ, ಆರಾಧ್ಯ

ಪೂರ್ಣಚೈತನ್ಯ, ರೇಣುಕೇಶ್, ಆರಾಧ್ಯ ಪುನೀತ್, ಆರಾಧ್ಯ ಪವನ್ ಎಂಬಂತೆ ಆರಾಧ್ಯವನ್ನು ಆರಂಭದಲ್ಲಿಯೇ ಜೋಡಿಸಿಕೊಳ್ಳುವ ಪ್ರವೃತ್ತಿ ವಿರಳವಾಗಿ ಕಂಡು ಬಂದಿದೆ. ಸ್ತ್ರೀಯರು ಶಿವರುದ್ರಮ್ಮ, ಅಮ್ಮಣ್ಣಮ್ಮ, ಮಂಗಳಮ್ಮ, ಶರ್ವಾಣಮ್ಮ, ಚೆನ್ನಾಜಮ್ಮ ಎಂಬಂತೆ ಹೆಸರಿನ ಕೊನೆಯಲ್ಲಿ ಅಮ್ಮ ಎಂಬುದನ್ನು ಜೋಡಿಸಿಕೊಳ್ಳುವುದಲ್ಲದೆ ಇಂದ್ರಾಂಬಿಕೆ, ರಾಜಾಂಬಿಕೆ, ಗೌರಾಂಬಿಕೆ, ರತ್ನಾಂಬಿಕೆ, ಭ್ರಮರಾಂಬಿಕೆ, ನೀಲಾಂಬಿಕೆ, ಮಂಜುಲಾಂಬಿಕೆ ಎಂಬಂತೆ 'ಅಂಬಿಕೆ'ಯನ್ನು ಕೂಡಿಸಿಕೊಳ್ಳುತ್ತಾರೆ. ಅಷ್ಟು ಮಾತ್ರವಲ್ಲದೆ ಕನ್ನಡನಾಡಿನ 'ಅರಸು ಜನಾಂಗ'ದಲ್ಲಿ ಹೆಚ್ಚು ಪ್ರಚಲಿತವಾಗಿರುವ 'ಅಮ್ಮಣ್ಣಿ'ಎಂಬುದನ್ನು ಕೂಡ ಪುಟ್ಟಮ್ಮಣ್ಣಿ, ಗೌರಮ್ಮಣ್ಣಿ ಎಂಬಂತೆ ಹೊಂದಿಸಿಕೊಳ್ಳುವುದೂ ಉಂಟು. ಇದಾವುದೂ ಬೇಡವೆಂದು ರೇಖಾ,ರೂಪ, ಕಾವ್ಯ,ದಿವ್ಯ, ಶ್ವೇತಾ, ವಿದ್ಯಾ, ರಾಣಿ, ಅನುಷಾ, ಬೇಬಿ, ಮೇಘ, ಲತಾ, ಗೀತಾ, ಸುಮ ಎಂಬಂತೆ ಪುಟ್ಟ ಪುಟ್ಟ ಹೆಸರುಗಳನ್ನು ಆ ಸ್ತ್ರೀಸಮುದಾಯದಲ್ಲಿ ಜನಪ್ರಿಯಗೊಳಿಸಲಾಗುತ್ತಿದೆ.

**ಪಂಚಪೀಠಪರಂಪರೆ**

ಭರತಖಂಡದಲ್ಲಿ ಪಂಚಪೀಠವೆಂಬ ಧಾರ್ಮಿಕ ಪರಂಪರೆಯೊಂದಿಗೆ ಶಿವನು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪಂಚಮುಖಗಳಿಂದ ಶೋಭಿತನಾಗಿದ್ದಾನೆಂದು ಪುರಾತನ ವೈದಿಕ ಸಾಹಿತ್ಯವು ಬಣ್ಣಿಸಿದೆ. ಶಿವನ ಇಚ್ಛೆಯ ಮೇರೆಗೆ ಈ ಪಂಚಮುಖಗಳಿಂದ ಕ್ರಮವಾಗಿ ರೇಣುಕಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಪಂಚಾಚಾರ್ಯರು ಕಲಿಯುಗದಲ್ಲಿ ಅವತರಿಸಿದರು. ಅವರು ಶಿವಭಕ್ತಿಯ ಪ್ರಚಾರಕ್ಕಾಗಿ ಭರತಖಂಡದ ವಿವಿಧ ಕ್ಷೇತ್ರಗಳಲ್ಲಿ ಸದ್ಧರ್ಮಸಿಂಹಾಸನಗಳನ್ನು ಸ್ಥಾಪಿಸಿದರು. ರೇಣುಕಾರಾಧ್ಯರ 'ವೀರಸಿಂಹಾಸನವು ಋಗ್ವೇದಕ್ಕೆ ಪ್ರತಿನಿಧಿಯಾಗಿ ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಭದ್ರಾನದಿಯ ತೀರದ ಬಾಳೆಹೊನ್ನೂರು ಪಟ್ಟಣದಲ್ಲಿದ್ದು ರಂಭಾಪುರಿ ಸಂಸ್ಥಾನವೆಂದು ಖ್ಯಾತಿವೆತ್ತಿದೆ. ಮರುಳಾರಾಧ್ಯರ 'ಸದ್ಧರ್ಮಸಿಂಹಾಸನ'ವು ಯಜುರ್ವೇದಕ್ಕೆ ಪ್ರತಿನಿಧಿಯಾಗಿ ಮಧ್ಯಪ್ರದೇಶದ ಕ್ಷಿಪ್ರಾನದಿಯ ತೀರದ ಉಜ್ಜಯಿನಿ ಎಂಬ ಶಿವ ಮಹಾಕ್ಷೇತ್ರದಲ್ಲಿದೆ. ಅದು ಈ ಹಿಂದೆ ಯಾವಾಗಲೋ ಕಾರಣಾಂತರಗಳಿಂದ ಕನ್ನಡನಾಡಿನ ಬಳ್ಳಾರಿ ಜಿಲ್ಲೆಯ ಉಜ್ಜಿನಿ ಎಂಬ ಊರಿಗೆ ಸ್ಥಳಾಂತರಗೊಂಡಿದೆ. ಏಕೋರಾಮಾರಾಧ್ಯರ 'ವೈರಾಗ್ಯ ಸಿಂಹಾಸನ'ವು ಉತ್ತರಪ್ರದೇಶದ ಅಮರಗಂಗಾನದಿಯತೀರದ ಕೇದಾರವೆಂಬ ದಿವ್ಯಕ್ಷೇತ್ರದಲ್ಲಿದ್ದು ಸಾಮವೇದಕ್ಕೆ ಪ್ರತಿನಿಧಿಯಾಗಿದೆ. ಪಂಡಿತಾರಾಧ್ಯರ 'ಸೂರ್ಯಸಿಂಹಾಸನ'ವು ಅಥರ್ವಣವೇದಕ್ಕೆ ಪ್ರತಿನಿಧಿಯಾಗಿದ್ದು ಆಂಧ್ರಪ್ರದೇಶದ ಕೃಷ್ಣಾನದಿಯ ತೀರದ ಪುಣ್ಯ ತೀರ್ಥವಾದ ಶ್ರೀಶೈಲದಲ್ಲಿ ವಿರಾಜಮಾನವಾಗಿದೆ. ವಿಶ್ವಾರಾಧ್ಯರ 'ಜ್ಞಾನಸಿಂಹಾಸನ'ವು ಅಜಪವೇದವೆನಿಸುವ ಶೈವಾಗಮಗಳಿಗೆ ಪ್ರತಿನಿಧಿಯಾಗಿದ್ದು ಹಿಂದೂಗಳ ಪವಿತ್ರಧಾಮವೆನಿಸಿದ ಗಂಗಾನದಿಯ ತೀರದ ಕಾಶೀಪಟ್ಟಣವೆಂದು ಪ್ರಸಿದ್ಧವಾಗಿರುವ ವಾರಾಣಸಿಯಲ್ಲಿದೆ. ಅದನ್ನು

'ಜಂಗಮವಾಡಿಮಠ' ಎಂದೂ ಕರೆಯಲಾಗುತ್ತದೆ. ಆರಾಧ್ಯಬಂಧುಗಳು ಈ ಮೇಲೆ ಹೇಳಿದ ಪಂಚಪೀಠಗಳಲ್ಲಿ ಶ್ರದ್ಧಾಭಕ್ತಿಗಳನ್ನಿರಿಸಿಕೊಂಡಿದ್ದಾರೆ. ವಿವಿಧ ಸಂಸ್ಕಾರಕರ್ಮಗಳ ಹೊತ್ತಿನಲ್ಲಿ ಪಂಚಪೀಠಗಳ ಮೂಲಗುರುಗಳನ್ನು ಪ್ರತಿನಿಧಿಸುವ ಐದು ಜಲಭರಿತಕಲಶಗಳನ್ನು ಸ್ಥಾಪಿಸಿಕೊಳ್ಳುತ್ತಾರೆ. ಪೂರ್ವದಿಕ್ಕಿನ ಕಲಶಕ್ಕೆ ರೇಣುಕಾರಾಧ್ಯರನ್ನೂ, ದಕ್ಷಿಣದಿಕ್ಕಿನ ಕಲಶಕ್ಕೆ ಮರುಳಾರಾಧ್ಯರನ್ನೂ, ಪಶ್ಚಿಮದಿಕ್ಕಿನ ಕಲಶಕ್ಕೆ ಏಕೋರಾಮಾರಾಧ್ಯರನ್ನೂ, ಉತ್ತರದಿಕ್ಕಿನ ಕಲಶಕ್ಕೆ ಪಂಡಿತಾರಾಧ್ಯರನ್ನೂ, ನಾಲ್ಕು ದಿಕ್ಕುಗಳ ಕಲಶಗಳ ಮಧ್ಯಭಾಗದಲ್ಲಿಡುವ ಕಲಶಕ್ಕೆ ವಿಶ್ವಾರಾಧ್ಯರನ್ನೂ ಆವಾಹನೆ ಮಾಡಿಕೊಳ್ಳುತ್ತಾರೆ. (ನೋಡಿ : 'ಆರಾಧ್ಯ ಪರಂಪರೆ', ಬಿ. ಎಂ. ಎಂ. ಆರಾಧ್ಯ ಅವರ ಲೇಖನ, ಪು. 10) ಈ ಪಂಚಾಚಾರ್ಯರುಗಳ ಜಯಂತಿಗಳನ್ನೂ ಶ್ರದ್ಧಾಭಕ್ತಿಗಳಿಂದ ಆಚರಿಸುತ್ತಾರೆ. ವೈಶಾಖಶುಕ್ಲತದಿಗೆಯಂದು ಏಕೋರಾಮಾರಾಧ್ಯರ, ವೈಶಾಖಶುಕ್ಲಪಂಚಮಿಯಂದು ದಾರುಕಾರಾಧ್ಯರ, ಮಾಘಕೃಷ್ಣಚತುರ್ದಶಿಯಂದು ವಿಶ್ವಾರಾಧ್ಯರ ಮತ್ತು ಪಂಡಿತಾರಾಧ್ಯರ, ಫಾಲ್ಗುಣಶುಕ್ಲತ್ರಯೋದಶಿಯಂದು ರೇಣುಕಾರಾಧ್ಯರ ಜಯಂತಿಗಳು ನೆರವೇರುತ್ತವೆ. ಏಕಾದಶಿಯ ಉಪವಾಸವ್ರತವೂ ಆರಾಧ್ಯರಿಗುಂಟು. ಮಾಘಮಾಸದ ಕೃಷ್ಣಪಕ್ಷದ ಏಕಾದಶಿಯಂದು ಸಮುದ್ರಮಥನದ ನಿಮಿತ್ತವಾಗಿ ಹೊರಬಂದ ವಿಷವನ್ನು ಶಿವನು ಪಾನಮಾಡಿದನೆಂಬ ಹಿನ್ನೆಲೆಯಲ್ಲಿ ಆ ಏಕಾದಶಿಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ಅಂತೆಯೇ ಆಂಧ್ರಪ್ರದೇಶದ ಯುಗಾದಿಯನ್ನು, ತುಲಾ ಮತ್ತು ಮಾಘಸಂಕ್ರಮಣಗಳನ್ನು ಪರ್ವದಿನಗಳಾಗಿ ಸ್ವೀಕರಿಸಿದ್ದಾರೆ. ಅಷ್ಟು ಮಾತ್ರವಲ್ಲದೆ ದಶವಿಧ ಪಂಡಿತರೆಂಬ ಹತ್ತುಮಂದಿ ಪುಣ್ಯಪುರುಷರನ್ನು ತಮ್ಮ ವಂಶಾವಳಿಗಳ ಮೂಲದಲ್ಲಿ ಆರಾಧ್ಯರು ಸ್ಮರಿಸಿಕೊಳ್ಳುತ್ತಾರೆ. ಆ ವಿವರಗಳನ್ನೆಲ್ಲ ಎಲ್. ಕೆ. ಎ. ಅಯ್ಯರ್ ಅವರು ಒದಗಿಸಿಕೊಟ್ಟಿದ್ದಾರೆ. ಶ್ರೀ ಶೈಲಪಂಡಿತಾರಾಧ್ಯ, ಶಿವಲಿಂಗಮಂಚಣ್ಣ, ಪಂಡಿತಾರಾಧ್ಯ, ಅಮರಕುಂಡ ಮಲ್ಲಿಕಾರ್ಜುನ ಪಂಡಿತಾರಾಧ್ಯ, ಕೆರೆಪದ್ಮರಸಪಂಡಿತಾರಾಧ್ಯ, ಊರ್ಧ್ವಲೋಚನಪಂಡಿತಾರಾಧ್ಯ, ಚೈತನ್ಯ ಪಂಡಿತಾರಾಧ್ಯ, ರಂಭಾಪಂಡಿತಾರಾಧ್ಯ, ಕೂಷ್ಮಾಂಡಪಂಡಿತಾರಾಧ್ಯ, ಪಂಪಾವಿರೂಪಾಕ್ಷ ಪಂಡಿತಾರಾಧ್ಯ, ಶ್ರೀಪತಿಪಂಡಿತಾರಾಧ್ಯ ಎಂದು ಅವರ ಶುಭನಾಮಗಳನ್ನು ಉಲ್ಲೇಖಿಸಿದ್ದಾರೆ. ತಮ್ಮ ಪಾಂಡಿತ್ಯ ಮತ್ತು ಪ್ರೌಢಿಮೆಗಳಿಂದ ಶ್ರೀಧರಆರಾಧ್ಯ, ವೇಮನಆರಾಧ್ಯ ಮತ್ತು ಉದ್ಭಟಆರಾಧ್ಯ ಎಂಬ ಪುರುಷತ್ರಯರು ಕೂಡ ಆರಾಧ್ಯಸಮುದಾಯದ ಆರಾಧ್ಯ ಮೂರ್ತಿಗಳಾಗಿದ್ದಾರೆ. ಈ ದಶವಿಧಪಂಡಿತರ ಗೋತ್ರಸೂತ್ರಾದಿಗಳನ್ನು ಕೆರಗೋಡು ನಂಜುಂಡಾರಾಧ್ಯರು 'ಆರಾಧ್ಯಕೈಪಿಡಿ'ಯಲ್ಲಿ (ಪು. ೧೦) ಸಂಗ್ರಹಿಸಿ ಕೊಟ್ಟಿದ್ದಾರೆ. ಒಂದು ಕಾಲಕ್ಕೆ ಆರಾಧ್ಯಲಕ್ಷಣ ಪರಿಪ್ಲುತವಾಗಿದ್ದು, ವೀರಶೈವವು ತನ್ನ ಪ್ರಭಾವವನ್ನು ವಿಶೇಷವಾಗಿ ಬೀರಿದ ಕಾಲಾವಧಿಯಲ್ಲಿ ಪಂಚಪೀಠವು ವೀರಶೈವಲಕ್ಷಣಗಳನ್ನು ಹೆಚ್ಚಾಗಿ ಜೋಡಿಸಿಕೊಂಡಿತೆಂದು ಭಾವಿಸಬಹುದಾಗಿದೆ. ವೀರಶೈವದಲ್ಲಿಯೂ ಪಂಚಪೀಠಪರಂಪರೆಗೆ ಸೇರಿದವರು ತಾವು ಮಿಕ್ಕ ಲಿಂಗವಂತರಿಗಿಂತ ಹೆಚ್ಚೆಂಬ ಭಾವನೆಯನ್ನು ಹೊಂದಿದ್ದಾರೆ. ಆರಾಧ್ಯರೂ ಕೂಡ ತಾವು ವೀರಶೈವದ ಎಲ್ಲ ಪಂಗಡಗಳಿಗಿಂತಲೂ ಹೆಚ್ಚೆಂದು ಭಾವಿಸುತ್ತಾರೆ. ಪ್ರಸ್ತುತ ಪಂಚಪೀಠಗಳ ಬಗ್ಗೆ ಅವರ ಆಚರಣೆಗಳೇನಿವೆಯೋ ತಿಳಿಯಬೇಕಾಗಿದೆ.

ವೀರಶೈವವು ಪ್ರತಿಪಾದಿಸುವ ಶಕ್ತಿವಿಶಿಷ್ಟಾದ್ವೈತವನ್ನು ; ಭಕ್ತ; ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಸಿದ್ಧಾಂತವನ್ನೂ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ ಮಂತ್ರ ಎಂಬ ಅಷ್ಟಾವರಣಗಳನ್ನೂ ಆರಾಧ್ಯರು ಒಪ್ಪುತ್ತಾರೆಂದು ಕೂಡ ಅಯ್ಯರ್ ಬರೆದಿದ್ದಾರೆ.

**ಉತ್ತರಕ್ರಿಯಾದಿಗಳು**

ಆರಾಧ್ಯರು ಮೃತರ ಕಳೇಬರವನ್ನು ಹುಗಿಯುವ ಪದ್ಧತಿಯಲ್ಲಿ ಉತ್ತರಕ್ರಿಯಾದಿಗಳನ್ನು ನೆರವೇರಿಸುತ್ತಾರೆ. ವ್ಯಕ್ತಿಯೊಬ್ಬನು ಮರಣಹೊಂದಿದಾಗ, ಸ್ನಾನ ಮಾಡಿಸಿ, ಅವನು ಧರಿಸಿದ್ದ ಲಿಂಗವನ್ನು ಶುದ್ಧಗೊಳಿಸಿ, ವಿಭೂತಿಯನ್ನು ಲೇಪಿಸಿ, ಪುನಃ ಅವರ ಕಂಠಕ್ಕೋ ತೋಳಿಗೋ ಕಟ್ಟುತ್ತಾರೆ. ಕಳೇಬರವನ್ನು ಭಸ್ಮರುದ್ರಾಕ್ಷಿಗಳಿಂದ ಅಲಂಕರಿಸಿ, ಚಟ್ಟವನ್ನು ಮಂಟಪದಂತೆ ನಿರ್ಮಿಸಿ, ಅದರೊಳಗೆ ಪದ್ಮಾಸನದಲ್ಲಿ ಬಿಗಿದು ಕೂರಿಸುತ್ತಾರೆ. ಅತ್ತ ರುದ್ರಭೂಮಿಯಲ್ಲಿ ಆಳವಾದ ಕುಳಿಯನ್ನು ತೋಡಿ ಸಿದ್ಧಪಡಿಸಿದ ಬಳಿಕ, ಅಲ್ಲಿಂದಲೇ ನಾಲ್ವರು ಪುರುಷರು ಮೃತನ ಮನೆಗೆ ಬಂದು "ನಾವು ಶಿವದೂತರು, ಶಿವನ ಆಜ್ಞೆಯಂತೆ ಈತನನ್ನು ಶಿವಲೋಕಕ್ಕೆ ಕರೆದೊಯ್ಯಲು ಬಂದಿದ್ದೇವೆ" ಎಂದು ಹೇಳುತ್ತ ಮಂಟಪವನ್ನು ಹೊತ್ತು ಅಗ್ನಿಸಮೇತರಾಗಿ ರುದ್ರಭೂಮಿಯನ್ನು ತಲಪುತ್ತಾರೆ. ಅಲ್ಲಿ ಆರಾಧ್ಯಗುರುಗಳು ಪೂಜಾದಿಗಳನ್ನು ನೆರವೇರಿಸುತ್ತಾರೆ. ತಮ್ಮ ಪಾದವೊಂದನ್ನು ಕಳೇಬರದ ತಲೆಯಮೇಲಿಟ್ಟ ಭಂಗಿಯಲ್ಲಿ ನಿಂತಾಗ ಅವರನ್ನು ಪೂಜಿಸಿ, ನೂತನವಸ್ತ್ರಾದಿಗಳನ್ನಿತ್ತು ಸತ್ಕರಿಸುತ್ತಾರೆ. ತರುವಾಯ ಕುಳಿಯ ಬುಡದಲ್ಲಿ ರೂಪಿಸಿರುವ ಗೂಡಿನೊಳಕ್ಕೆ ಸರಿಯಾಗಿ ಅಳವಡುವಂತೆ ಕಳೇಬರವನ್ನು ಪದ್ಮಾಸನದಲ್ಲಿಯೇ ಕೂರಿಸಿ, ಯಂತ್ರಮಂತ್ರಗಳನ್ನು ಬರೆದ ತಾಮ್ರದ ತಗಡುಗಳನ್ನು ಅದರ ಮೇಲಿರಿಸಿ ಮಣ್ಣು ಮಾಡುತ್ತಾರೆ. (ಸಚಿತ್ರ ಯಂತ್ರಗಳಿಗೆ ಪುಟ್ಟಸೋಮಾರಾಧ್ಯರ ಗ್ರಂಥವನ್ನು ನೋಡಿ) ಆ ಜೀವನು ಕೈಲಾಸವನ್ನು ತಲಪಲು ನೂರೊಂದು ಮೆಟ್ಟಿಲುಗಳನ್ನೇರಿ ಹೋಗಬೇಕಾಗಿದೆಯೆಂಬ ವಿಚಾರದ ಹಿನ್ನೆಲೆಯಲ್ಲಿ, ಬೆಳಕಾಗಲೆಂದು ನೂರೊಂದು ದೀಪಗಳನ್ನು ಸಮಾಧಿಯ ಮೇಲೆ ಬೆಳಗಿಸುತ್ತಾರೆ. ಅಗ್ನಿಯಿಂದ ನೆರವೇರಿಸಬೇಕಾದ ಯಾವುದೇ ಕರ್ಮವಿಲ್ಲದಿದ್ದರೂ ಅದನ್ನು ರುದ್ರಭೂಮಿಗೆ ಒಯ್ಯುವ ಪದ್ಧತಿಯನ್ನು ಉಲ್ಲೇಖಿಸಿರುವ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ('ಆರಾಧ್ಯ ಪರಂಪರೆ', ಪು. 4) ಅದರ ಔಚಿತ್ಯವು ಜಿಜ್ಞಾಸೆಗೆ ಸಿಲುಕಿದೆ ಎಂದು ಬರೆದಿದ್ದಾರೆ. ಉತ್ತರಕ್ರಿಯೆಯ ವಿವರಗಳು ಮತ್ತು ಮಂತ್ರಗಳನ್ನೊಳಗೊಂಡಂತೆ ರಾಮಸಮುದ್ರಂ ಪುಟ್ಟಸೋಮಾರಾಧ್ಯರ ಗ್ರಂಥವಲ್ಲದೆ ಬಸವಾರಾಧ್ಯ (ಶಾಸ್ತ್ರಿ) ಸಾಹಳ್ಳಿ ಅವರು ಪ್ರಕಟಿಸಿರುವ 'ಅಂತ್ಯೇಷ್ಟಿ, ಶ್ರಾದ್ಧವಿಧಿ ಮತ್ತು ನಕ್ಷತ್ರ ಶಾಂತಿ ವಿಧಾನಗಳು' (1999) ಎಂಬ ಗ್ರಂಥ ಕೂಡ ಗಮನಾರ್ಹವಾದುದು.

ಸತ್ತವನ ಸದ್ಗತಿಗಾಗಿ ಆ ದಿನವೇ ಗೋದಾನಮಾಡುವ ಕಾರ್ಯವು ಇರುತ್ತದೆ. ಹನ್ನೊಂದನೆಯ ದಿನದಂದು ಏಕಾದಶರುದ್ರರನ್ನು ಪ್ರತಿನಿಧಿಸುವ ಹನ್ನೊಂದು ಮಂದಿ ಆರಾಧ್ಯ ಪುರುಷರನ್ನು ಆಹ್ವಾನಿಸಿ ಅವರನ್ನು ಭೋಜನಾದಿಗಳಿಂದ, ದಾನದಕ್ಷಿಣೆಗಳಿಂದ,

ತೃಪ್ತಿಪಡಿಸುತ್ತಾರೆ. ಕೈಲಾಸಸಮಾರಾಧನೆಯೆಂದು ಕರೆಯುವ ಹದಿಮೂರನೆಯ ದಿನದಂದು ಇಬ್ಬರು ಆರಾಧ್ಯಪುರುಷರನ್ನು ಪೂಜಿಸಿ, ಊಟಕ್ಕಿಕ್ಕಿದ ಬಳಿಕ, ತಮ್ಮ ಬಂಧುವರ್ಗದವರನ್ನೆಲ್ಲ ಸಂತರ್ಪಣೆಯಿಂದ ಸಂತೋಷಪಡಿಸುತ್ತಾರೆ. ತರುವಾಯ ಸತ್ತದಿನದ ತಿಥಿಯನ್ನು ಪ್ರತಿತಿಂಗಳೂ ವರ್ಷಪರ್ಯಂತ ಇಬ್ಬರು ಆರಾಧ್ಯರನ್ನು ಪೂಜಿಸಿ ಊಟಕ್ಕಿಕ್ಕುವ, ಬಂಧುಗಳಿಗೂ ಭೋಜನಮಾಡಿಸುವ ಕಾರ್ಯ ನೆರವೇರುತ್ತದೆ. ವೈದಿಕಬ್ರಾಹ್ಮಣರಲ್ಲಿ ಈ ಕಾರ್ಯಕ್ರಮವನ್ನು 'ಮಾಸಿಕ' ಎಂದು ಕರೆಯಲಾಗುತ್ತದೆ. ಅಲ್ಲಿಂದ ಮುಂದಕ್ಕೆ ವಾರ್ಷಿಕ ಶ್ರಾದ್ಧಾದಿಗಳೇನನ್ನೂ ಮಾಡದೆ ಶಿವನೊಂದಿಗೆ ಕೂಡಿ ಹೋದ ಜೀವನನ್ನು ಸ್ಮರಿಸುವ ಹಿನ್ನೆಲೆಯಲ್ಲಿ ಅನ್ನಸಂತರ್ಪಣೆ ಸಹಿತವಾದ ಆರಾಧನೆಯನ್ನು ನಡೆಸುತ್ತಾರೆ. ಈ ಆಚರಣೆಗಳೆಲ್ಲ ಒಂದಷ್ಟು ವೈದಿಕವಾದರೆ ಇನ್ನೊಂದಷ್ಟು ವೀರಶೈವಗಳಾಗಿವೆ.

### ಆರಾಧ್ಯರು ಮತ್ತು ಬಸವಣ್ಣನವರು

ಆರ್. ಜಿ. ಭಂಡಾರ್ಕರ್ ಅವರ Virashivism, Saivism and Minor Religious System' ಎಂಬ ಗ್ರಂಥದ ಉಲ್ಲೇಖವನ್ನು ಆಧರಿಸಿ ಅನಂತಕೃಷ್ಣ ಅಯ್ಯರ್ ಅವರು "ಆನಂದಗಿರಿಯು ನೀಡುವ ಸಾಕ್ಷ್ಯಾಧಾರದ ಮೂಲಕ ಆರಾಧ್ಯಜನಾಂಗವು ಆದಿಶಂಕರಾಚಾರ್ಯರ ಕಾಲಕ್ಕೆ ಅಂದರೆ ಕ್ರಿ. ಶ. 9ನೆಯ ಶತಮಾನಕ್ಕೆ ಪೂರ್ವದಲ್ಲಿ ಉದಯಿಸಿದ್ದಿರಬಹುದು" ಎಂದು ಬರೆದಿದ್ದಾರೆ. ಆ ಹೊತ್ತಿನಲ್ಲಿ ಆರಾಧ್ಯಬ್ರಾಹ್ಮಣರ ಧಾರ್ಮಿಕ ಆಚರಣೆಗಳು, ನಂಬಿಕೆ ನಡವಳಿಕೆಗಳು ಹೇಗಿದ್ದುವೊ ತಿಳಿಯದು. 12ನೆಯ ಶತಮಾನದ ಮಧ್ಯದಲ್ಲಿ ಬಸವಣ್ಣನವರ ಪ್ರಭಾವದಿಂದಾಗಿ ಆರಾಧ್ಯರಲ್ಲಿ ಸಾಕಷ್ಟು ಪರಿಷ್ಕಾರಗಳು ತಲೆದೋರಿರಬಹುದು.

ಎನ್. ಬಸವಾರಾಧ್ಯರು ತಾವು ಸಂಪಾದಿಸಿರುವ ನೀಲಕಂಠಾಚಾರ್ಯ ವಿರಚಿತ 'ಆರಾಧ್ಯಚಾರಿತ್ರ'ಕ್ಕೆ ಬರೆದಿರುವ ಮುನ್ನುಡಿಯಲ್ಲಿ ಕರ್ನಾಟಕದಲ್ಲಿ "ಲಿಂಗಯಜ್ಞೋಪವೀತಗಳೆರಡನ್ನೂ ಧರಿಸಿದ್ದ ಆರಾಧ್ಯಬ್ರಾಹ್ಮಣವೆಂಬ ಒಂದು ಸಂಪ್ರದಾಯ ಇದ್ದಿರಬಹುದೆಂದು ತೋರುತ್ತದೆ. ಅಥವಾ ಇವರು ವೀರಶೈವನಿಷ್ಠೆಯುಳ್ಳ ಬ್ರಾಹ್ಮಣ ಪಂಗಡಕ್ಕೆ ಸೇರಿದವರಾದರೂ ಆಗಿದ್ದಿರಬಹುದು. ಬಸವಣ್ಣ, ಶ್ರೀಪತಿ ಪಂಡಿತ, ವೇಮನಾರಾಧ್ಯ, ಪಾಲ್ಕುರಿಕೆ ಸೋಮನಾರಾಧ್ಯ ಇವರೇ ಮೊದಲಾದವರು ಮೊದಲು ಈ ಸಂಪ್ರದಾಯಕ್ಕೆ ಸೇರಿದ್ದು ತರುವಾಯ ವೀರ ಶೈವರಾದಂತೆ ಅವರ ಚರಿತ್ರೆಯಿಂದ ತಿಳಿದುಬರುತ್ತದೆ" ಎಂದು ಬರೆದಿದ್ದಾರೆ. ಹೀಗೆ ಮೂಲತಃ ಆರಾಧ್ಯಬ್ರಾಹ್ಮಣರೆಂದು ತಿಳಿಯಲಾಗಿರುವ ಬಸವಣ್ಣನವರೊಡಗೂಡಿ ಆರಾಧ್ಯಬ್ರಾಹ್ಮಣರು ವೀರಶೈವಕ್ಕೆ ನಿಶ್ಚಿತವಾದೊಂದು ರೂಪವನ್ನು ಕೊಡಲು ಸಹಕರಿಸಿದರು ಎಂದು ಬ್ರೌನ್ ಎಂಬ ವಿದ್ವಾಂಸನ ವಿಚಾರವನ್ನು ಅಯ್ಯರ್ ಅವರು ಉದ್ಧರಿಸಿದ್ದಾರೆ. ನಿಶ್ಚಯಾತ್ಮಕವಾದ, ಯಾವುದೇ ಸಂಧಾನಕ್ಕೆ ಸಗ್ಗದಿರುವಂತಹ, ವೈದಿಕ ಬ್ರಾಹ್ಮಣಕ್ಕೆ ಪ್ರತಿಯಾಗಿ ನಿಲ್ಲುವಂತಹ ಲಕ್ಷಣಗಳನ್ನು

ಆರಾಧ್ಯರು ಬಸವಣ್ಣನವರೊಡಗೂಡಿ ಆವಾಹನೆ ಮಾಡಿದರು. "ಇಷ್ಟೆಲ್ಲ ಮಾಡಿದ ಆರಾಧ್ಯರು ತಾವು ಪೂರ್ಣಪ್ರಮಾಣದ ವೀರಶೈವರಾಗದೆ ಒಂದಷ್ಟು ವೈದಿಕ ಆಚರಣೆಗಳನ್ನೂ ಉಳಿಸಿಕೊಂಡರಲ್ಲ, ನಮ್ಮನ್ನು ತಿದ್ದಿ ಆದುದೇನು " ಎಂದು ಲಿಂಗಾಯಿತರು ಆರಾಧ್ಯರ ಮೇಲೆ ಮುನಿಸಿಕೊಂಡರೆಂಬ ಅರ್ಥಬರುವ ಮಾತುಗಳನ್ನು ಕೂಡ ಬ್ರೌನ್‌ಮಹಾಶಯನು ಬರೆದಿದ್ದಾನೆ.

**ತ್ರಿಮತಸ್ಥಬ್ರಾಹ್ಮಣರು ಮತ್ತು ಆರಾಧ್ಯರು**

ಕನ್ನಡನಾಡಿನಲ್ಲಿ 'ತ್ರಿಮತಸ್ಥರು' ಎಂದು ಕರೆಯುವ ಸ್ಮಾರ್ತರು, ಶ್ರೀ ವೈಷ್ಣವರು, ವೈಷ್ಣವರು ಅಥವಾ ಮಾಧ್ವರು ಎಂಬ ಮೂರು ಗುಂಪಿನ ಬ್ರಾಹ್ಮಣರು ಪ್ರಧಾನವಾಗಿ ನೆಲೆಯಾಗಿದ್ದಾರೆ. ಅವರು ಕ್ರಮವಾಗಿ ಆದಿಶಂಕರಾಚಾರ್ಯ, ರಾಮಾನುಜಾಚಾರ್ಯ ಮತ್ತು ಮಧ್ವಾಚಾರ್ಯರ ಶಿಷ್ಯಕೋಟಿಗೆ ಸೇರಿದವರಾಗಿದ್ದಾರೆ. ವೇದಾಗಮಶಾಸ್ತ್ರಪುರಾಣಗಳಲ್ಲಿ ನಿಷ್ಠೆ ಗಾಯತ್ರೀಮಂತ್ರದಲ್ಲಿ ನಿಷ್ಠೆ, ಉಪನಯನಾದಿ ಷೋಡಶಸಂಸ್ಕಾರಗಳಲ್ಲಿ ನಿಷ್ಠೆ, ಯಜ್ಞೇಶ್ವರನನ್ನು ಹೂಡಿಕೊಂಡು ಹೋಮಹವನಾದಿಗಳನ್ನು ನೆರವೇರಿಸುವುದು. ವಿಧವಾವಿವಾಹವಿಲ್ಲದಿರುವುದು, ಅಗ್ನಿಸಂಸ್ಕಾರದ ಮೂಲಕ ಉತ್ತರಕ್ರಿಯಾದಿಗಳನ್ನು ನೆರವೇರಿಸುವುದು, ಪಿಂಡಪ್ರದಾನ ಪೂರ್ವಕವಾಗಿ ಪಿತೃಶ್ರಾದ್ಧಾದಿಗಳನ್ನು ವಾರ್ಷಿಕಕರ್ಮವಾಗಿ ಆಚರಿಸುವುದು - ಈ ಮುಂತಾದುವು ಅವರಿಗೆಲ್ಲ ಸಮಾನ ಲಕ್ಷಣಗಳಾಗಿವೆ. ಈ ಮೊದಲೇ ಪರಿಶೀಲಿಸಿದಂತೆ ವೇದಶಾಸ್ತ್ರ ಪುರಾಣಗಳಲ್ಲಿ ನಂಬಿಕೆ, ಗಾಯತ್ರೀಮಂತ್ರದಲ್ಲಿ ನಂಬಿಕೆ, ಹೋಮಹವನಗಳನ್ನು ನಡೆಸುವುದು, ಯಜ್ಞೋಪವೀತ ಧರಿಸುವುದು. ಚಾತುರ್ವರ್ಣ್ಯದಲ್ಲಿ ನಂಬಿಕೆ, ವಿಧವಾವಿವಾಹವಿಲ್ಲದಿರುವುದು ಈ ಮೊದಲಾದ ವೈದಿಕಲಕ್ಷಣಗಳನ್ನು ಉಳಿಸಿಕೊಂಡು ಆರಾಧ್ಯರು ಈ ಬ್ರಾಹ್ಮಣ್ಯಕ್ಕೆ ಹತ್ತಿರವಾಗಿದ್ದಾರೆ. ಅಲ್ಲಿಯೂ ಭಸ್ಮಧಾರಿಗಳೂ, ಶಿವೋಪಾಸಕರೂ (ವಿಷ್ಣುವಿನ ಜೊತೆಗೆ) ಆದ ಸ್ಮಾರ್ತರಿಗೆ ಹತ್ತಿರವಾಗಿದ್ದಾರೆ.

ಆದರೆ ಶಿವನನ್ನು ಮಾತ್ರವೇ ಆರಾಧಿಸುವುದು, ತ್ರಿಮತಸ್ಥ ಗುರುಪರಂಪರೆಯನ್ನಾಗಲಿ ತತ್ತ್ವಗಳನ್ನಾಗಲಿ ಸ್ವೀಕರಿಸದೆ ಪಂಚಪೀಠ ಆದಿಗುರುಪರಂಪರೆಯನ್ನು ಗೌರವಿಸುವುದು, ಷಟ್ ಸ್ಥಲಸಿದ್ಧಾಂತಕ್ಕೆ ಬದ್ಧರಾಗಿರುವುದು, ಸತ್ತವರನ್ನು ಸುಡದೆ ಹೂಳುವುದು, ವಾರ್ಷಿಕ ಶ್ರಾದ್ಧಾದಿಗಳನ್ನು ಮಾಡುವುದು, ಎಳ್ಳು-ದರ್ಭೆ ಮುಂತಾದ ವಸ್ತುಗಳನ್ನು ತಮ್ಮ ಆಚರಣೆಗಳಲ್ಲಿ ಬಳಸದಿರುವುದು, ವಿಧವೆಯರಿಗೆ ಮುಂಡನಾದಿಗಳನ್ನು ಮಾಡಿಸದಿರುವುದು - ಈ ಮುಂತಾದ ಆರಾಧ್ಯಲಕ್ಷಣಗಳು ಅವರನ್ನು ತ್ರಿಮತಸ್ಥಬ್ರಾಹ್ಮಣಸಮುದಾಯದಿಂದ ಬೇರ್ಪಡಿಸಿ ವೀರಶೈವಕ್ಕೆ ಹತ್ತಿರವಾಗಿಸಿರುವ ಸಂಗತಿಗಳಾಗಿವೆ. ಹೀಗೆ ಆರಾಧ್ಯ ಅತ್ತ ಪರಿಪೂರ್ಣವಾಗಿ ವೈದಿಕವೂ ಅಲ್ಲದೆ; ಪೂರ್ಣವಾಗಿ ವೀರಶೈವವೂ ಅಲ್ಲದೆ ಅವೆರಡರ ಕೆಲಕೆಲವು ಲಕ್ಷಣಗಳನ್ನು ಮೈಗೂಡಿಸಿಕೊಂಡ ಸಮ್ಮಿಶ್ರಸ್ವರೂಪ, ಸಮನ್ವಯಸ್ವರೂಪದ ವಿಶಿಷ್ಟಪಂಥವಾಗಿ ಬಸವಣ್ಣನವರ ಕಾಲದಿಂದ ಅರಳಿಕೊಂಡಿತು ಎಂದು ತಿಳಿಯಬಹುದಾಗಿದೆ.

**ಆರಾಧ್ಯಬಂಧುಗಳ ಏಳುಬೀಳುಗಳು**

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಮುನ್ನ ಮೈಸೂರು ಪ್ರಾಂತ್ಯದಲ್ಲಿ ಆರಾಧ್ಯರು ಮಾಂಡಲಿಕರ, ಪಾಳೆಯಗಾರರ ಆಶ್ರಯವನ್ನು ಪಡೆದು ನೆಮ್ಮದಿಯಿಂದಿದ್ದರು. ಆದರೆ ಆಮೇಲಿನ ಮುಸಲ್ಮಾನರ ಆಕ್ರಮಣಗಳು ಅವರನ್ನು ಪದಚ್ಯುತಗೊಳಿಸಿದುವು. ತರುವಾಯದಲ್ಲಿ ಅವರು ತಮ್ಮ ವಿದ್ವತ್ತು ಹಾಗೂ ಗುರುಸ್ಥಾನದ ಬಲದಿಂದ ವಿಜಯನಗರ ಸಾಮ್ರಾಜ್ಯವನ್ನು ಆಶ್ರಯಿಸಿದರು. ಅಲ್ಲಿಯೂ ಅವರು ಗೌರವಪೂರ್ಣವಾದ ಸ್ಥಾನಗಳನ್ನು ಅಲಂಕರಿಸಿದರು. ಆದರೆ ಅಲ್ಲಿಯೂ ದುಃಖ ತಪ್ಪಲಿಲ್ಲ. ವಿಜಯನಗರಸಾಮ್ರಾಜ್ಯವು ಅಳಿದು ಹೋದ ಬಳಿಕ ಮೈಸೂರು ಅರಸರನ್ನು ಅರಸಿಕೊಂಡು ಬಂದರು. ಚಿಕ್ಕದೇವರಾಜ ಒಡೆಯರ ಆಳ್ವಿಕೆಯವರಿಗೆ (1673-1704) ಈ ಅರಸು ಮನೆತನವು ಶೈವದಲ್ಲಿ ವಿಶೇಷ ನಂಬಿಕೆಯಿಟ್ಟಿದ್ದುದರಿಂದ ಆರಾಧ್ಯರು ರಾಜಗುರುಗಳಾಗಿ ಹೆಚ್ಚಿನ ತೇಜಸ್ಸಿನಿಂದ ಬೆಳಗುತ್ತ ದೊರೆಗಳ ಗೌರವಾದರಗಳಿಗೆ ಪಾತ್ರರಾಗಿದ್ದರು. ಈ ವಿವರಗಳನ್ನು ನೀಡುವ ಸಂದರ್ಭದಲ್ಲಿ ಅಯ್ಯರ್ ಅವರು ಮಂಡ್ಯ ತಾಲ್ಲೂಕು ಮತ್ತು ಎಳಂದೂರು ತಾಲ್ಲೂಕುಗಳಲ್ಲಿ ಆರಾಧ್ಯರ ಅಗ್ರಹಾರಗಳಿದ್ದುವೆಂದು ಉಲ್ಲೇಖಿಸಿದ್ದಾರೆ. ಅವು ಮೈಸೂರರಸರ ಕಾಲದಲ್ಲಿ ರಚಿಸಲಾದ ಅಗ್ರಹಾರಗಳಾಗಿರಬಹುದೆಂದು ಭಾವಿಸಲು ಅವಕಾಶವಿದೆ.

ರಾಮಸಮುದ್ರಂ ಪುಟ್ಟಸೋಮಾರಾಧ್ಯರು ತಮ್ಮ 'ಯಾಜುಷಪ್ರಯೋಗಸಂಗ್ರಹ ' ಮತ್ತು ಆರಾಧ್ಯಶೈವರ ಸಂಕ್ಷಿಪ್ತ ಇತಿಹಾಸ (1999) ಎಂಬ ಕೃತಿಯಲ್ಲಿ ಮೈಸೂರು ಅರಸರ ಮೂಲಪುರುಷರಾದ ಯದುರಾಯರು ಮತ್ತು ಕೃಷ್ಣರಾಯರಿಗೆ ಅಂದಿನ ರಾಜಮನೆತನವನ್ನು ಪರಿಚಯಿಸಿದವರು ಒಬ್ಬ ಆರಾಧ್ಯಜಂಗಮ ಒಡೆಯರೇ ಆಗಿದ್ದಾರೆ. ಹಾಗಾಗಿ ಮೈಸೂರು ಅರಸರು ತಮ್ಮ ಹೆಸರಿನ ಜೊತೆಯಲ್ಲಿ 'ಒಡೆಯರು' ಎಂಬುದನ್ನು ಜೋಡಿಸಿಕೊಂಡರು ಎಂದು ಬರೆದಿದ್ದಾರೆ. ಅವರೇ ಮುಂದುವರಿದು ಚಿಕ್ಕದೇವರಾಜ ಒಡೆಯರ ತಾಯಿ ಅಮೃತಾಂಬೆಯವರ ಮನೆತನಕ್ಕೆ ಯಳಂದೂರು ಸೋಮಾರಾಧ್ಯರು ಗುರುಗಳಾಗಿದ್ದರು. ಕಂಠೀರವ ನರಸರಾಜ ಒಡೆಯರ ಆಪ್ತರಲ್ಲಿ ಶ್ರೋತ್ರಿಯರಾದ ಪಂಡಿತಾರಾಧ್ಯರೆಂಬುವರು ಇದ್ದರು ; ನಾಲ್ವಡಿ ಕೃಷ್ಣರಾಜ ಒಡೆಯರ ತಂದೆ ಚಾಮರಾಜಒಡೆಯರ ಆಪ್ತರಲ್ಲಿ ಜಂತಗಹಳ್ಳಿ ಬಸವಾರಾಧ್ಯರೂ ಒಬ್ಬರಾಗಿದ್ದರು ಎಂಬಿತ್ಯಾದಿ ವಿವರಗಳನ್ನು ಶೋಧಿಸಿ ಕೊಟ್ಟಿದ್ದಾರೆ. ಅವರೇ ಮುಂದುವರಿದು ಭುಜಾಂಗಾರಾಧ್ಯ ಎಂಬುವರಿಂದ, ಚಾಮರಾಜನಗರಜಿಲ್ಲೆಯ ಮಹದೇಶ್ವರಬೆಟ್ಟವನ್ನು ಪುಣ್ಯಕ್ಷೇತ್ರವಾಗಿಸಿರುವ ಮಲೆಯಮಹದೇಶ್ವರರಿಗೆ ಅವರ ಪೂರ್ವಾಶ್ರಮದಲ್ಲಿ ಶೈವದೀಕ್ಷೆಯಾಯಿತು. ಉಮ್ಮತ್ತೂರಿನ (ಚಾಮರಾಜನಗರ ಜಿಲ್ಲೆ) ವೀರನಂಜರಾಜಒಡೆಯರು ಮತ್ತು ಕೆಳದಿನಾಯಕರು ಆರಾಧ್ಯಗುರುಗಳಿಂದ ಶೈವದೀಕ್ಷೆ ಪಡೆದರು ಎಂದು ವರ್ಣಿಸಿದ್ದಾರೆ. ಈ ವಿವರಗಳೆಲ್ಲ ಒಂದು ಕಾಲಕ್ಕೆ ಆರಾಧ್ಯಗುರುಗಳು ತಪೋಧನರೂ ವರ್ಚಸ್ವಿಗಳೂ ಆಗಿದ್ದರೆಂಬುದನ್ನು ಶ್ರುತಪಡಿಸುತ್ತವೆ.

ಚಿಕ್ಕದೇವರಾಜಒಡೆಯರ ಕಾಲದಲ್ಲಿ ಜಂಗಮರ ಮೇಲೆ ಎರಗಿದ ವಿಪತ್ತೊಂದು ಹೃದಯವಿದ್ರಾವಕವೇ ಸರಿ. ಚಿಕ್ಕದೇವರಾಜರು ರಾಜ್ಯದ ಆದಾಯವನ್ನು ಅಭಿವೃದ್ಧಿಪಡಿಸಲು ರೈತರ ಮೇಲೆ ಹಲವು ಸಣ್ಣಪುಟ್ಟ ತೆರಿಗೆಗಳನ್ನು ಹೇರಿದರು. ಸಣ್ಣಪುಟ್ಟದಾದರೂ ಅವು ರೈತರಿಗೆ ಕಿರುಕುಳವನ್ನುಂಟುಮಾಡುವ, ಅವರನ್ನು ರೇಗಿಸುವ ಸ್ವರೂಪದಿಂದ ಕೂಡಿದ್ದುವು. ಈಗೇನು ಮಾಡುವುದು ಎಂದು ರೈತರು ಒಳಗೊಳಗೇ ಕುದಿಯುತ್ತಿದ್ದರು. ಅಂತಹ ಹೊತ್ತಿನಲ್ಲಿ ಜಂಗಮ ಗುರುಗಳು ಅವರ ಕೋಪಾಗ್ನಿಗೊಂದಿಷ್ಟು ಗಾಳಿಬೀಸಿದರು. ಅದರ ಪರಿಣಾಮವಾಗಿ ರೈತರು 'ನಾವು ಬಿತ್ತುವುದೇ ಇಲ್ಲ, ನಾವು ಬೆಳೆಯುವುದೇ ಇಲ್ಲ' ಎಂದು ಘೋಷಿಸಿಬಿಟ್ಟರು. ಇವರೆಲ್ಲ ಎಲ್ಲಿಗೋ ಗುಳೆಹೋಗುತ್ತಿದ್ದಾರೆನ್ನುವಂತೆ ಗ್ರಾಮಗಳನ್ನು ತೊರೆ ತೊರೆದು ಅಲ್ಲಲ್ಲಿ ಗುಂಪುಗುಂಪಾಗಿ ನೆರೆಯತೊಡಗಿದರು. ಆಗ ಚಿಕ್ಕದೇವರಾಜರು ಈ ಆಂದೋಳನದ ಮುಂಚೂಣಿಯಲ್ಲಿ ಜಂಗಮಗುರುಗಳಿರುವುದನ್ನರಿತು "ನೀವೆಲ್ಲರೂ ನಂಜನಗೂಡಿಗೆ ಬನ್ನಿ, ರೈತರ ಸಮಸ್ಯೆಗಳನ್ನು ಕುರಿತು ಅಲ್ಲಿ ಚಿಂತನ - ಮಂಥನ ನಡೆಸೋಣ" ಎಂದು ಕರೆಕಳುಹಿಸಿದರು. ವಿಲ್ಕ್ಸ್ ಮಹಾಶಯನು ಬರೆದಿರುವ History of Mysore ಎಂಬ ಗ್ರಂಥದಿಂದ ಈ ಘಟನೆಯನ್ನು ಅಯ್ಯರ್ ಅವರು ಮೇಲೆತ್ತಿಕೊಟ್ಟಿದ್ದಾರೆ.

ಜಂಗಮಗುರುಗಳೊಡನೆ ವಿಚಾರ ವಿನಿಮಯ ನಡೆಸುವ ನೆಪದಲ್ಲಿ ಅವರನ್ನೆಲ್ಲ ಮುಗಿಸಿಬಿಡುವ ಭಯಾನಕ ಸಂಚೊಂದು ನಂಜನಗೂಡಿನಲ್ಲಿ ರೂಪುಗೊಂಡಿತು. ವಿಶಾಲವಾದ ಬಯಲಿನಲ್ಲಿ ಡೇರೆಗಳನ್ನು ಸಂಕೀರ್ಣವಾಗುವಂತೆ ಹಾಕಿ, ಅದರ ಮಧ್ಯದಲ್ಲಿ ಎಲ್ಲಿಯೋ ತುಂಬಾ ಆಳವಾದ ಗುಂಡಿಯೊಂದನ್ನು ತೋಡಲಾಗಿತ್ತು. ಏನೋ ವಿಚಾರವಿನಿಮಯಕ್ಕೆ ಗಣ್ಯರು ನೆರೆದಿದ್ದಾರೆ. ಎಂಬಂತಹ ವಾತಾವರಣವನ್ನು ಅಲ್ಲಿ ಸೃಷ್ಟಿಸಲಾಗಿತ್ತು. ನಡೆದು ಬಂದ ಜಂಗಮರನ್ನು ಭಕ್ತಿಗೌರವಗಳಿಂದ ಸ್ವಾಗತಿಸಿದರು. ಜಂಗಮರಿಗೆ ಆ ಡೇರೆಯ ಒಂದು ಭಾಗದಲ್ಲಿಯೇ ಊಟೋಪಚಾರಗಳ ವ್ಯವಸ್ಥೆಯನ್ನು ಮಾಡಲಾಗಿತ್ತು. ಕೊಂಚ ತಡೆ ತಡೆದು ಜಂಗಮಗುರುಗಳನ್ನು ವಿರಳವಾಗಿ ಪ್ರಸಾದಕ್ಕೆ ಕಳುಹಿಸುವಂತೆ ಮೃತ್ಯುಕೂಪದ ಕಡೆಗೆ ಕಳುಹಿಸಲಾಯಿತು. ತಮಗೊಪ್ಪಿಸಿದ ಕೆಲಸವನ್ನು ಸದ್ದುಗದ್ದಲವಿಲ್ಲದೆ ಅತ್ಯಂತ ಚಾತುರ್ಯದಿಂದ ನಿರ್ವಹಿಸಬಲ್ಲ ಶಿರಶ್ಛೇದಕರನ್ನು ಮೃತ್ಯುಕೂಪದ ಸುತ್ತ ನಿಲ್ಲಿಸಲಾಗಿತ್ತು. ಅದರ ಮೂಲಕವೇ ಹಾದುಹೋಗುಬೇಕಾದಂತೆ ಮಾಡಿದ್ದ ವ್ಯವಸ್ಥೆಯಲ್ಲಿ ನಾನೂರು ಜಂಗಮಗುರುಗಳು ಬಲಿಯಾಗಿ ಬಿಟ್ಟರು. ಒಂದೊಂದೇ ಏಟಿಗೆ ಕೊಲೆಗಾರರು ಅವರ ತಲೆಗಳನ್ನು ಕಡಿದು ಮೃತ್ಯುಕೂಪದೊಳಕ್ಕೆ ತಳ್ಳಿಬಿಟ್ಟರು. ಇಲ್ಲೆಲ್ಲ ಅಧಿಕಾರಿಗಳು ವಿಚಾರವಿನಿಮಯಕ್ಕೆ ಸೇರಿದ್ದಾರೆ ; ಅಲ್ಲೆಲ್ಲ ಗಣ್ಯ ಸಾರ್ವಜನಿಕರು ಸಭಾಕಲಾಪಗಳನ್ನು ವೀಕ್ಷಿಸಲು ನೆರೆದಿದ್ದಾರೆ ; ಅತ್ತ ಕಡೆ ಜಂಗಮ ಗುರುಗಳೆಲ್ಲ ಪ್ರಸಾದ ಮಾಡಿಕೊಳ್ಳುತ್ತಿದ್ದಾರೆ ; ದೊರೆಗಳ ಸವಾರಿ ಇನ್ನೇನು ಆಗಮಿಸುವುದರಲ್ಲಿದೆ ಎನ್ನುವ ಹಾಗೆ ವಾತಾವರಣ ಸೃಷ್ಟಿಯಾಗಿತ್ತೇ ಹೊರತು, ಜಂಗಮ ಗುರುಗಳನ್ನು ಯಮಪುರಿಗೆ ಅಟ್ಟುವ ಕಾರ್ಯ ಅವ್ಯಾಹತವಾಗಿ ನಡೆಯುತ್ತಿದೆ ಎಂಬ ಸುಳಿವು ಯಾರಿಗೂ ಸಿಗಲಿಲ್ಲ.

ಇತ್ತ ಮಾರಣಹೋಮ ನಡೆಯುತ್ತಿದ್ದರೆ ಅತ್ತ ಅದೇ ಯಮಗಂಡಕಾಲದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಎಲ್ಲೆಲ್ಲಿ ಜಂಗಮರ ಮಠಗಳಿವೆಯೊ ಅವುಗಳನ್ನು ನೆಲಸಮ ಮಾಡಿಬಿಡಬೇಕು; ಬಿತ್ತೆವು, ಬೆಳೆಯೆವು ಎಂದು ಗುಂಪು ಕೂಡುವ ರೈತರ ಸಂಘಟನೆಯನ್ನು ನಿರ್ದಾಕ್ಷಿಣ್ಯವಾಗಿ ಬಗ್ಗುಬಡಿಯಬೇಕು ಎಂದು ಸೇನೆಗೆ ಆಜ್ಞೆನೀಡಲಾಗಿತ್ತು. ಸಕಲ ಸಿದ್ಧತೆಗಳಿಂದ ಹೊರಟ ಸೇನೆಯು ನಂಜನಗೂಡಿನಲ್ಲಿ ಜಂಗಮ ಗುರುಗಳ ಮಠಗಳನ್ನು ಹುಡುಹುಡುಕಿ ನೆಲಸಮ ಮಾಡಿಬಿಟ್ಟಿತು. ಏಳುನೂರು ಮಠಗಳು ಹಾಗೆ ನೆಲಸಮವಾದುವು ಎಂದು ವಿಲ್ಕ್ಸ್ ಮಹಾಶಯನು ಉಲ್ಲೇಖಿಸಿದ್ದಾನೆ. ಆ ಹೊತ್ತಿನಲ್ಲಿ 'ಯಳಂದೂರು ಪಂಡಿತನೆಂದು ಪ್ರಖ್ಯಾತನಾಗಿದ್ದ, ಜ್ಯೋತಿಷ್ಯದಲ್ಲಿ ತುಂಬಾ ನಿಷ್ಣಾತನಾಗಿದ್ದ ವಿಶಾಲಾಕ್ಷಪಂಡಿತನು ಚಿಕ್ಕದೇವರಾಜರ ಮಂತ್ರಿಯಾಗಿದ್ದನು. ಅವನು ಜೈನಧರ್ಮೀಯನಾಗಿದ್ದನು. ದೊರೆಯು ಅದುವರೆಗೂ ತಾನು ನಂಬಿನಡೆಯುತ್ತಿದ್ದ ಜಂಗಮರತತ್ತ್ವಗಳನ್ನು ಬದಿಗೊತ್ತಿ, ಜೈನ ತತ್ತ್ವಗಳನ್ನು ಆಶ್ರಯಿಸುತ್ತಾನೆ ಎಂಬ ಸುದ್ದಿಯೂ ಆಗ ರಾಜ್ಯದಲ್ಲಿ ಹಬ್ಬಿತು. ಅದರ ಪರಿಣಾಮವಾಗಿ ವಿಶಾಲಾಕ್ಷಪಂಡಿತನು ವಿರೋಧಿಗಳ ಕ್ರೋಧಕ್ಕೆ ತುತ್ತಾದನು. ಕಗ್ಗೊಲೆಯ ರೂವಾರಿತ್ವದ ಅಪರಾಧ ಅವನ ತಲೆಗೇ ಕಟ್ಟಿತು. ಒಂದು ದಿನ ವಿಶಾಲಾಕ್ಷ ಪಂಡಿತನು ಅರಮನೆಯಿಂದ ಮನೆಗೆ ಮರಳುವಾಗ ಯಾರೋ ಅವನನ್ನು ಇರಿದುಬಿಟ್ಟರು. ಮನೆಯನ್ನು ತಲಪಿ ಸಾವಿನ ಹಾಸುಗೆಯ ಮೇಲೆ ಮಲಗಿದಾಗ ಸುದ್ದಿ ತಿಳಿದು, ಚಿಕ್ಕದೇವರಾಜ ದೊರೆಗಳು ಅಂತಿಮ ದರ್ಶನಕ್ಕೆಂದು ಓಡೋಡಿ ಬಂದರು. "ಇನ್ನು ನನ್ನ ಗತಿ ತೀರಿತು. ಇಲ್ಲಿಂದ ಮುಂದಕ್ಕೆ ತಿರುಮಲಯ್ಯಂಗಾರ್ಯನನ್ನು ಮಂತ್ರಿಸ್ಥಾನಕ್ಕೆ ನೇಮಿಸಿಕೊಳ್ಳಿ, ಅವನು ವಿವೇಕಿಯೂ, ಪ್ರಾಮಾಣಿಕನೂ, ನ್ಯಾಯನಿಷ್ಠನೂ ಆಗಿದ್ದಾನೆ. ತಾವು ನನ್ನ ಮೇಲೆ ಇರಿಸಿದ್ದ ಪ್ರೀತಿವಿಶ್ವಾಸಗಳಿಗೆ ನಾನು ಕೃತಜ್ಞನಾಗಿದ್ದೇನೆ" ಎಂದು ಹೇಳಿ ಕೊನೆಯುಸಿರೆಳೆದನು. ದೊರೆಗಳು ಪಂಡಿತನು ಹೇಳಿದಂತೆಯೇ ಮಾಡಿದರು. ಆ ಘಟನೆಯು ಮೈಸೂರರಸರು ಶ್ರೀ ವೈಷ್ಣವ ಪ್ರಭಾವಲಯವನ್ನು ಪ್ರವೇಶಿಸಲು ಕಾರಣವಾಯಿತು. ಮೈಸೂರು ಪ್ರಾಂತ್ಯದಲ್ಲಿ ಜಂಗಮರ ಅಂದರೆ ಆರಾಧ್ಯರ ಪ್ರಭಾವ ಅಳಿದು ಹೋಗಲು ಮತ್ತು ಅವರು ಅಪಾರವಾದ ಕಷ್ಟನಷ್ಟಗಳಿಗೆ ಗುರಿಯಾಗಲು ಕೂಡ ಅದೇ ಘಟನೆಯ ಮೂಲವಾಯಿತು.

ಈ ಘಟನೆಯಿಂದ ತಲ್ಲಣಗೊಂಡು ಅಳಿದುಳಿದ ಆರಾಧ್ಯಗುರುಗಳು ಮತ್ತು ಗೃಹಸ್ಥರು ಇನ್ನೇನು ವಿಪತ್ತು ಕಾದಿದೆಯೋ ಎಂದು ತಲೆ ಮರೆಸಿಕೊಂಡು ಚೆಲ್ಲಾಪಿಲ್ಲಿಯಾಗಿ ಓಡಿಬಿಟ್ಟರು. ಜನಿವಾರ ಮತ್ತು ಇಷ್ಟಲಿಂಗಗಳೆರಡನ್ನೂ ಧರಿಸಿಕೊಂಡಿದ್ದ ಅವರು, ಜನಿವಾರವನ್ನು ವಿಸರ್ಜಿಸಿ ಇಷ್ಟಲಿಂಗವನ್ನು ಮಾತ್ರವೇ ಇಟ್ಟುಕೊಂಡು ತಾವು ಲಿಂಗಾಯಿತರೆಂದೆ ಹೇಳಿಕೊಂಡು ರಕ್ಷಿತರಾದರು. ಕೆಲವರು ಲಿಂಗಾಯಿತರಲ್ಲಿ ಆಶ್ರಯ ಪಡೆದುಕೊಂಡು ಅವರಂತಾದರು. ಹೀಗಾಗಿ ಇಂದಿಗೂ ಆರಾಧ್ಯ ಎಂಬ ಉಪನಾಮ ಕೆಲವರಲ್ಲಿ ಉಳಿದಿದ್ದೂ ಅವರು ಲಿಂಗಾಯಿತರೇ ಆಗಿದ್ದಾರೆ ಎಂಬಿತ್ಯಾದಿ ವಿವರಗಳನ್ನು ಜಿನ್ನಹಳ್ಳಿ ನಾಗಭೂಷಣಾರಾಧ್ಯರು ನನಗೆ ತಿಳಿಸಿದ್ದಾರೆ. ಅಷ್ಟು ಮಾತ್ರವಲ್ಲದೆ ವಿಲ್ಕ್ಸ್ ಮಹಾಶಯನು ಆರಾಧ್ಯಗುರುಗಳು ಎಂದು ಹೇಳದೆ ಜಂಗಮ ಗುರುಗಳು ಎಂದು ಹೇಳಿದ್ದರೂ ಅದು ಆರಾಧ್ಯಜನಾಂಗಕ್ಕೆ ಅನ್ವಯಿಸುವಂಥದು, ಆಗ

ಆರಾಧ್ಯರನ್ನು ಜಂಗಮರು ಎಂದೂ ಕರೆಯುತ್ತಿದ್ದರು, ಏಳುನೂರು ಮಠಗಳು ಎಂದರೆ ಏಳುನೂರು ಮನೆಗಳು ಎಂದೇ ಅರ್ಥ ; ಗೃಹಸ್ಥರಾದ ಆರಾಧ್ಯಗುರುಗಳು ವಾಸಮಾಡುತ್ತಿದ್ದ ಮನೆಗಳನ್ನು ಮಠ ಎಂದೇ ಕರೆಯಲಾಗುತ್ತದೆ ; ಈಗ ನಮ್ಮದು 'ಜಿನ್ನಹಳ್ಳಿಗುರುಮಠ' ಎಂಬಿತ್ಯಾದಿ ಸಂಗತಿಗಳನ್ನು ಅವರು ನನಗೆ ತಿಳಿಸಿಕೊಟ್ಟಿದ್ದಾರೆ. 'ಆರಾಧ್ಯಕವಚ'ದಲ್ಲಿ ಆರಾಧ್ಯರಿಗಿರುವ ಹದಿಮೂರು ನಾಮಾಂತರಗಳಲ್ಲಿ ಶಿವದ್ವಿಜ, ಸ್ಥಿರಜಂಗಮ ಎಂಬುವೂ ಸೇರಿವೆ (ನೋಡಿ : ಚೇತನ್‌ಪ್ರಭು, 'ಆರಾಧ್ಯ ಪರಂಪರೆ : ಪು. 27). ಈ ದುರ್ಘಟನೆ ಬಹಳ ಹಿಂದಿನಿಂದಲೂ ಆರಾಧ್ಯ ಸಮುದಾಯದಲ್ಲಿ ಕರ್ಣಾಕರ್ಣಿಯಾಗಿ ಪ್ರಚಲಿತವಾಗಿದೆ. ಕೆ. ಬಿ. ಪುಟ್ಟಸ್ವಾಮಿ ಆರಾಧ್ಯರು ಇದು ತಮ್ಮ ಜನಾಂಗಕ್ಕೆ ಬಂದೊದಗಿದ ದುರ್ಘಟನೆಯೆಂದು 'ಆರಾಧ್ಯ ಪರಂಪರೆ'ಯಲ್ಲಿ (ಪು. 45) ವರ್ಣಿಸಿದ್ದಾರೆ.

### ಆರಾಧ್ಯರ ಕೆಲವು ಪುಣ್ಯಕ್ಷೇತ್ರಗಳು

ಚಾಮರಾಜನಗರ ಜಿಲ್ಲೆ ಮತ್ತು ತಾಲ್ಲೂಕಿಗೆ ಸೇರಿದ ಹರದನಹಳ್ಳಿ ಎಂಬುದು ಆರಾಧ್ಯರ ಪುಣ್ಯಕ್ಷೇತ್ರಗಳಲ್ಲೊಂದು. ಅಲ್ಲಿ ಗೋಸಲೇಶ್ವರ, ಸಿದ್ಧಲಿಂಗೇಶ್ವರ, ದಿವ್ಯಲಿಂಗೇಶ್ವರರ ಸನ್ನಿಧಾನಗಳಿವೆ. ಅಲ್ಲಿ ಗೋಸಲೇಶ್ವರರೆಂಬ ಆರಾಧ್ಯಗುರುಗಳು ನೆಲೆಸಿದ್ದ ಕಾಲಕ್ಕೆ ಅವರ ಆಶೀರ್ವಾದದಿಂದ ಸಿದ್ಧಲಿಂಗೇಶ್ವರರೆಂಬ ಪುಣ್ಯಪುರುಷರ ಜನನವಾಯಿತು. ತರುವಾಯದಲ್ಲಿ ಸಿದ್ಧಲಿಂಗೇಶ್ವರರು ಗೋಸಲೇಶ್ವರ ಗುರುಗಳ ಶಿಷ್ಯರಾಗಿ ಬೆಳೆದರು. ತಮ್ಮ ಪವಾಡಗಳಿಂದ ಗುರುವನ್ನೇ ಆಚ್ಚರಿಗೊಳಿಸಿ, ಅವರ ಅನುಜ್ಞೆಯಂತೆ ದೇಶಸಂಚಾರವನ್ನು ಕೈಗೊಂಡು, ಅನೇಕ ಕಡೆ ಮಠಗಳನ್ನು ಸ್ಥಾಪಿಸಿ, ಕೊನೆಗೆ ಇಂದಿನ ತುಮಕೂರು ಜಿಲ್ಲೆಯ ಎಡೆಯೂರಿನಲ್ಲಿ ಐಕ್ಯರಾದರು. ಇಂದು ಎಡೆಯೂರು ವೀರಶೈವದ ಪ್ರಸಿದ್ಧ ಪುಣ್ಯಕ್ಷೇತ್ರವಾಗಿ ಬೆಳಗುತ್ತಿದೆ. ಗೋಸಲೇಶ್ವರಗುರುಗಳು ಅಂತಹ ಪುಣ್ಯಪುರುಷರನ್ನು ಬೆಳಕಿಗೆ ತಂದರೆಂದು ಬಿ. ಸಿ. ಮಲ್ಲಾರಾಧ್ಯರು ಆ ಮಹಿಮಾತಿಶಯಗಳನ್ನು 'ಆರಾಧ್ಯಕೈಪಿಡಿ'ಯಲ್ಲಿ (ಪುಟ. 21) ಸಾರಪೂರ್ಣವಾಗಿ ವಿವರಿಸಿದ್ದಾರೆ. ಹೀಗೆಯೇ ಚಾಮರಾಜನಗರ ಜಿಲ್ಲೆಗೆ ಸೇರಿದ ಮೊಳೂರಿನ ಬಸವೇಶ್ವರ ಸನ್ನಿಧಾನವೂ ಕೂಡ ಆರಾಧ್ಯರಿಗೆ ಪವಿತ್ರವಾದುದು.

ಚಾಮರಾಜನಗರ ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲೊಂದಾದ ಯಳಂದೂರಿನ ಗೌರೀಶಂಕರದೇವಾಲಯ, ಆ ಪಟ್ಟಣದಲ್ಲಿಯೇ ಇರುವ ಕನ್ನಡ ಕವಿ, ಷಡಕ್ಷರದೇವನ ಸಮಾಧಿ; ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಚಿಲುಕವಾಡಿ ಬೆಟ್ಟದಲ್ಲಿರುವ ಕನ್ನಡದ ನಿಜಗುಣಶಿವಯೋಗಿಗಳ ಸನ್ನಿಧಾನ ಮತ್ತು ಅಲ್ಲಿಯೇ ಇರುವ ಶಂಭುಲಿಂಗೇಶ್ವರ ಗುಡಿಗಳು ಈ ಮುಂತಾದುವು ಆರಾಧ್ಯರಿಗೆ ಪುಣ್ಯಸ್ಥಳಗಳಾಗಿವೆ.

ಚಾಮರಾಜನಗರ ಜಿಲ್ಲೆ ಮತ್ತು ತಾಲ್ಲೂಕಿಗೆ ಸೇರಿದ ಬಸವನಪುರವೆಂಬ ಗ್ರಾಮದಲ್ಲಿ ಆರಾಧ್ಯಪರಂಪರೆಯ ಮಠವೊಂದು ಕ್ರಿ. ಶ. 1760ರಲ್ಲಿ ಸ್ಥಾಪನೆಗೊಂಡು ಐವರು ಗುರುಗಳು ಆ ಸಂಸ್ಥಾನವನ್ನು ಅಲಂಕರಿಸಿದರೆಂಬುದು ಗಮನಾರ್ಹವಾದ ವಿಚಾರ. ಅದು 'ಜಂಗಮವಾಟಿ

ಜಗದಾಚಾರ್ಯವಿಶ್ವಾರಾಧ್ಯಶಿವಯೋಗೀಂದ್ರಮಹಾಪೀಠ' ಎಂಬ ಹೆಸರನ್ನು ತಳೆದಿತ್ತು. ಅದನ್ನೇರುವ ಎಲ್ಲರಿಗೂ 'ವಿಶ್ವಾರಾಧ್ಯಶಿವಯೋಗೀಂದ್ರ' ಎಂದೇ ನಾಮಕರಣವಾಗುತ್ತಿತ್ತು. ಐದನೆಯ ವಿಶ್ವಾರಾಧ್ಯಶಿವಯೋಗೀಂದ್ರರು ಶಿವೈಕ್ಯರಾಗುವುದರೊಂದಿಗೆ (1945) ಆ ಗುರುಪೀಠವು ಲುಪ್ತವಾಗಿಹೋಯಿತು. ಅದರ ವಿವರಗಳನ್ನು (ಆರಾಧ್ಯ ಕೈಪಿಡಿ' ಪು. 22) ಆರ್. ಎಂ. ಪುಟ್ಟಸೋಮಾರಾಧ್ಯರು ಸಂಗ್ರಹಿಸಿ ಕೊಟ್ಟಿದ್ದಾರೆ.

## ಆರಾಧ್ಯಶೈವರು

ಈ ಮೊದಲೇ ಉಲ್ಲೇಖಿಸಲಾಗಿರುವ ಆರ್. ಎಂ. ಪುಟ್ಟಸೋಮಾರಾಧ್ಯರ 'ಯಾಜುಷಪ್ರಯೋಗಸಂಗ್ರಹ ಮತ್ತು ಆರಾಧ್ಯಶೈವರ ಸಂಕ್ಷಿಪ್ತ ಇತಿಹಾಸ' ಎಂಬುದು ಪ್ರಧಾನವಾಗಿ ಆರಾಧ್ಯಬ್ರಾಹ್ಮಣ ಷೋಡಶಸಂಸ್ಕಾರಗಳಿಗೆ ಸಂಬಂಧಿಸಿದ ವೇದ ಮಂತ್ರಗಳನ್ನೊಳಗೊಂಡ ಅತ್ಯಂತ ಉಪಯುಕ್ತವಾದ ಕೃತಿ. ಅಲ್ಲಿ ಆರಾಧ್ಯರನ್ನು ಆರಾಧ್ಯ ಬ್ರಾಹ್ಮಣ ಎನ್ನದೆ ಆರಾಧ್ಯಶೈವ ಎಂದು ಕರೆಯಲಾಗಿದೆ. ಅದರಲ್ಲಿ ಪ್ರಾಸಂಗಿಕವಾಗಿ ಆರಾಧ್ಯ ಬಂಧುಗಳ ಸಂಕ್ಷಿಪ್ತ ಇತಿಹಾಸವನ್ನೂ ಜೋಡಿಸಿದ್ದಾರೆ. ಅವರ ಶೋಧನೆಯ ಮುಖ್ಯಾಂಶಗಳನ್ನು ಈ ಮುಂದಿನಂತೆ ಪರಿವಿಡಿಸಬಹುದು : (1) ದಕ್ಷಿಣ ಭಾರತದ ಪ್ರಸಿದ್ಧ ಇತಿಹಾಸಕಾರರಾದ ಕೆ. ಎ. ನೀಲಕಂಠಶಾಸ್ತ್ರಿ ಅವರು ಉಲ್ಲೇಖಿಸಿರುವ ಆರಾಧ್ಯಶೈವ ಎಂಬ ಚೌಕಟ್ಟಿಗೆ ಆರಾಧ್ಯ ಬ್ರಾಹ್ಮಣರು ಒಳಪಡುತ್ತಾರೆ. ಆದಿಶಂಕರಾಚಾರ್ಯರಿಗಿಂತಲೂ ಪೂರ್ವದಲ್ಲಿ ಲಿಂಗ ಮತ್ತು ಯಜ್ಞೋಪವೀತಗಳೆರಡನ್ನೂ ಧರಿಸುತ್ತಿದ್ದ 'ಶಾಂಭವವೃತಿ'ಗಳೆಂಬ ಕಾಶ್ಮೀರಶೈವರು ಉತ್ತರಭಾರತ ಮತ್ತು ಮಧ್ಯಭಾರತಗಳಲ್ಲಿದ್ದರು. ಶಂಕರರ ಪ್ರಭಾವದಿಂದ ಅವರಲ್ಲಿ ಕೆಲವರು ಲಿಂಗವನ್ನು ತೊರೆದು ಯಜ್ಞೋಪವೀತವನ್ನು ಮಾತ್ರವೇ ಉಳಿಸಿಕೊಂಡು ಸ್ಮಾರ್ತಬ್ರಾಹ್ಮಣ ವೈದಿಕಸಮುದಾಯದಲ್ಲಿ ಲೀನವಾದರು. ಹಾಗೆ ಲೀನವಾಗದೆ ಶಾಂಭವವೃತಿಗಳಾಗಿಯೇ ಉಳಿದವರನ್ನು 12ನೇ ಶತಮಾನದಲ್ಲಿ ದ್ರಾಕ್ಷಾರಾಮದ ಭೀಮೇಶ್ವರ ಕ್ಷೇತ್ರದ ಮಲ್ಲಿಕಾರ್ಜುನ ಪಂಡಿತರು 'ಆರಾಧ್ಯಶೈವ'ರೆಂದು ಅಭಿವೃದ್ಧಿಪಡಿಸಿದರು. (2) ವಿಜಯನಗರ ಸಾಮ್ರಾಜ್ಯದ ಏಳಿಗೆಯ ಕಾಲದಲ್ಲಿ ಲಕ್ಕಣದಂಡೇಶನ ಪ್ರೋತ್ಸಾಹದಿಂದ ದ್ರಾಕ್ಷಾರಾಮಪರಿಸರದ ಕೆಲವು ಆರಾಧ್ಯ ಶೈವಕುಟುಂಬಗಳು ವಿಜಯನಗರಕ್ಕೆ ಬಂದು ಅಲ್ಲಿಂದ ಹಾಗೆಯೇ ಧರ್ಮಪ್ರಸಾರ ಮಾಡುತ್ತ ಬೆಂಗಳೂರು, ಮಂಡ್ಯ, ಮೈಸೂರು ಮುಂತಾದ ಜಿಲ್ಲೆಗಳ ಕೆಲವು ಊರುಗಳಲ್ಲಿ ನೆಲೆಸಿದರು. ಹೀಗೇ ಆರಾಧ್ಯಬ್ರಾಹ್ಮಣರು ಆಂಧ್ರದೇಶದಿಂದ ಕರ್ನಾಟಕಕ್ಕೆ ವಲಸೆಬಂದವರಾಗಿದ್ದಾರೆ. (3) ಸ್ಮಾರ್ತದಲ್ಲಿ ಲೀನವಾಗಿದ್ದ ಶಾಂಭವವೃತಿಗಳ ಪಂಗಡಕ್ಕೆ ಬಸವಣ್ಣನವರು ಸೇರಿದವರಾಗಿದ್ದರು. ಅವರ ಪ್ರಭಾವದಿಂದ ಸ್ಮಾರ್ತಲೀನ ಶಾಂಭವವೃತಿಗಳು ಯಜ್ಞೋಪವೀತವನ್ನು ತೊರೆದು ಲಿಂಗಧಾರಿಗಳಾಗಿ ವೀರಶೈವರಾದರು. (4) ಶಿವಯೋಗಿಶಿವಾಚಾರ್ಯರ 'ಸಿದ್ಧಾಂತ ಶಿಖಾಮಣಿ'ಯು ನಿರೂಪಿಸಿರುವ ಶಕ್ತಿವಿಶಿಷ್ಟಾದ್ವೈತಕ್ಕಿಂತ ಹೆಚ್ಚಾಗಿ ಶ್ರೀಪತಿಪಂಡಿತರು

ನಿರೂಪಿಸಿರುವ ದ್ವೈತಾದ್ವೈತ ಅಥವಾ ನಿಜಗುಣಶಿವಯೋಗಿಗಳು ನಿರೂಪಿಸಿರುವ 'ಶಂಭುಲಿಂಗವೇ ತಾನಾದ' ಶುದ್ಧಾದ್ವೈತವನ್ನು ಆರಾಧ್ಯಶೈವರು ಸ್ವೀಕರಿಸಿದ್ದಾರೆ. (5) 1900 ರಲ್ಲಿ ಆರಾಧ್ಯರಲ್ಲಿಯೇ ಕೆಲವು ಕರ್ಮಾಚರಣೆಗಳ ವಿಷಯದಲ್ಲಿ ಭಿನ್ನತೆಗಳನ್ನು ಹೊಂದಿದ್ದ ಎರಡು ಬಗೆಯ ಕುಟುಂಬಸ್ಥರಿದ್ದರು.

**ಆರಾಧ್ಯರು - ಜಂಗಮರು ಮತ್ತು ಆಂಧ್ರಆರಾಧ್ಯಬ್ರಾಹ್ಮಣರು**

ಕನ್ನಡಾಂಬೆಯ ಕಣ್ಮಣಿ ಎಂ. ಚಿದಾನಂದಮೂರ್ತಿಗಳು ಆರಾಧ್ಯರ ವಿಚಾರವಾಗಿ ತಮ್ಮ ಕ್ಷೇತ್ರಕಾರ್ಯದ ಮೂಲಕ ಅನೇಕ ಮಹತ್ವದ ಸಂಗತಿಗಳನ್ನು ಹೊರಗಡೆಹಿದ್ದಾರೆ :

(1) ಇಂದಿನ ಕರ್ನಾಟಕದ ಆರಾಧ್ಯರು ಲಿಂಗಾಯಿತ ಸಮಾಜದೊಂದಿಗೆ ಪೂರ್ಣ ಹೊಂದಿಕೊಂಡಿರುವುದಲ್ಲದೆ, ತಾವೂ ಲಿಂಗಾಯತರೆಂದೇ ಭಾವಿಸಿದ್ದಾರೆ. ಅವರಲ್ಲಿ ಕೆಲವರು ಉಪನಯನಸಂಸ್ಕಾರ ಉಳಿಸಿಕೊಂಡೂ, ಜನಿವಾರಧರಿಸಿಕೊಂಡೂ, ವೇದಗಳ ಬಗ್ಗೆ ಶ್ರದ್ಧೆಯಿಟ್ಟುಕೊಂಡೂ ಲಿಂಗಾಯತರಲ್ಲಿ ಒಂದಾಗಿದ್ದಾರೆ. ತುಮಕೂರು ಪ್ರದೇಶದ ಕೆಲವು ಆರಾಧ್ಯರು ಜನಿವಾರವನ್ನು ತೊರೆದಿದ್ದಾರೆ. ಹೆಸರಿಗೆ ಆರಾಧ್ಯರಾದರೂ ಉಳಿದಂತೆ ಅವರ ಆಚಾರ ವಿಚಾರಗಳೆಲ್ಲ ಜಂಗಮರವೇ ಆಗಿವೆ.

(2) ಕೆಲವು ವರ್ಷಗಳ ಹಿಂದೆ ತಾವು ಬ್ರಾಹ್ಮಣರ ಜೊತೆ ಸೇರಬೇಕೋ ಲಿಂಗಾಯಿತರ ಜೊತೆ ಸೇರಬೇಕೋ ಎಂಬ ಚರ್ಚೆ ಬಂದಾಗ ಬಹುಸಂಖ್ಯಾತರಾದ ಲಿಂಗಾಯತರ ಜೊತೆ ಇರುವುದೇ ಕ್ಷೇಮ ಎಂಬ ತೀರ್ಮಾನಕ್ಕೆ ಬಂದರಂತೆ. ಯಾವ ಗುಂಪಿಗೂ ಸೇರುವುದು ಬೇಡ, ಪ್ರತ್ಯೇಕವಾಗಿ 'ಆರಾಧ್ಯ'ರೆಂದೇ ಇದ್ದುಬಿಡೋಣ ಎಂಬ ಸಲಹೆಯೂ ಆ ಹೊತ್ತಿನಲ್ಲಿ ಮೂಡಿಬಂದಿತ್ತಂತೆ.

(3) ಆರಾಧ್ಯರಲ್ಲಿ ಕೆಲವರು ಇಷ್ಟಲಿಂಗವನ್ನುಳಿಸಿಕೊಂಡು ಜನಿವಾರವನ್ನು ತೊರೆದಿರುವುದು ತಾವು ಲಿಂಗಾಯತರ ಕುಚೋದ್ಯಕ್ಕೆ ಗುರಿಯಾಗುತ್ತೇವೆ ಎಂಬ ಭೀತಿಯ ಕಾರಣವಾಗಿದೆ ಎನ್ನಲಾಗಿದೆ. ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿದ್ದ, ಆರಾಧ್ಯ ಪಂಗಡಕ್ಕೆ ಸೇರಿದ್ದ ಜೆ. ಬಿ. ಮಲ್ಲಾರಾಧ್ಯರು ಜನಿವಾರವನ್ನೂ ಉಳಿಸಿಕೊಂಡಿದ್ದಾರೆಂಬ ಸಂದೇಹ ಮತ್ತು ಅಸಮಾಧಾನಕ್ಕೆ ಗುರಿಯಾಗಿದ್ದರಂತೆ.

(4) ಆರಾಧ್ಯಪುರೋಹಿತರು ಮದುವೆ, ಗೃಹಪ್ರವೇಶ ಮುಂತಾದ ಕರ್ಮಗಳಲ್ಲಿ ನಡೆಸುವ ಅಗ್ನಿಮುಖ ಪೂರ್ವಕವಾದ ಹೋಮಗಳನ್ನು ಅವೀರಶೈವವಾದರೂ ದಕ್ಷಿಣ ಕರ್ನಾಟಕದ ಕೆಲವು ಲಿಂಗಾಯತರು ಒಪ್ಪಿ ನೆರವೇರಿಸಿಕೊಳ್ಳುತ್ತಾರೆ. (ಮದುವೆಯ ಮಂತ್ರಗಳಿಗೆ ಬಸವಾರಾಧ್ಯ (ಶಾಸ್ತ್ರಿ) ಅವರ 'ವಿವಾಹ ಪ್ರಕರಣ' ಎಂಬ (2002) ಪ್ರತ್ಯೇಕ ಗ್ರಂಥವೇ ಇದೆ). ಆದರೆ ಬೆಂಗಳೂರಿನಂತಹ ಮಹಾನಗರಗಳಲ್ಲಿ ಕೆಲವು ಲಿಂಗಾಯತರು ಉತ್ತರ ಕರ್ನಾಟಕದ ಜಂಗಮಪುರೋಹಿತರನ್ನೆ ಹುಡುಕಿ ಆಹ್ವಾನಿಸುತ್ತಾರೆ.

(5) ಆರಾಧ್ಯರು ಆಂಧ್ರಪ್ರದೇಶದಿಂದ ಯಾವಾಗಲೋ ವಲಸೆ ಬಂದವರಾಗಿದ್ದು, ಕ್ರಮೇಣ ತೆಲುಗು ಭಾಷೆಯನ್ನು ಮರೆತಿರಬಹುದು ; ಇಲ್ಲವೆ ಮೊದಲಿನಿಂದಲೂ ಕನ್ನಡವನ್ನೇ ಮಾತನಾಡುವ ಜನರಾಗಿದ್ದಿರಬಹುದು.

(6) ತಮ್ಮ ಮನಸ್ಸಿನ ಅಂತರಾಳದಲ್ಲಿ ಜಂಗಮರ ಬಗ್ಗೆ ಆರಾಧ್ಯರು ಸ್ವಲ್ಪ ಕೆಳಮನೋಭಾವವನ್ನು ಹೊಂದಿರುವಂತೆ ತೋರುತ್ತದೆ. ಆದರೆ ತಾವಿಬ್ಬರೂ ಅಲ್ಪಸಂಖ್ಯಾತರಾಗಿರುವುದರಿಂದ, ತಾವಿಬ್ಬರೂ ಲಿಂಗವಂತಸಮಾಜದ ಪುರೋಹಿತ ವರ್ಗದವರಾಗಿರುವುದರಿಂದ, ಭಿನ್ನಾಚಾರಗಳನ್ನು ಹೊಂದಿದ್ದರೂ ಪರಸ್ಪರ ವಿವಾಹಸಂಬಂಧಗಳನ್ನು ಒಪ್ಪಿಕೊಂಡಿದ್ದಾರೆ. ಜಂಗಮರಿಗಿಂತ ಹೆಚ್ಚಿನ ಸಂಸ್ಕೃತನಿಷ್ಠೆ ಆರಾಧ್ಯರಿಗಿದೆ.

(7) ಆಂಧ್ರದೇಶದಲ್ಲಿ ಇಷ್ಟಲಿಂಗ, ಯಜ್ಞೋಪವೀತಗಳೆರಡನ್ನೂ ಧರಿಸಿರುವ ಆರಾಧ್ಯ ಬ್ರಾಹ್ಮಣರು ತಕ್ಕಷ್ಟು ಸಂಖ್ಯೆಯಲ್ಲಿದ್ದಾರೆ. ಕರ್ನಾಟಕದ ಆರಾಧ್ಯಬ್ರಾಹ್ಮಣರಿಗಿಂತ ಆಚರಣೆಗಳ ವಿಷಯದಲ್ಲಿ ಶುದ್ಧರೂಪವನ್ನು ಹೆಚ್ಚಾಗಿ ಅವರು ಉಳಿಸಿಕೊಂಡಂತಿದೆ. ಅವರಿಗೆ ತಾವು ಪರಿಪೂರ್ಣವಾಗಿ ಬ್ರಾಹ್ಮಣರ ಒಂದು ಪಂಗಡ ಎಂಬ ವಿಶ್ವಾಸವಿದೆಯೇ ಹೊರತು ತಮ್ಮ ಬ್ರಾಹ್ಮಣ್ಯದ ಬಗ್ಗೆ ಯಾವುದೇ ಸಂದೇಹಗಳು ಅವರಿಗಿಲ್ಲ. ಜನಿವಾರವು ದೇಹ ಸಂಬಂಧಿಯಾಗಿದ್ದು, ಕರ್ಮದ್ಯೋತಕವೆಂದೂ ಇಷ್ಟಲಿಂಗವು ಆತ್ಮಸಂಬಂಧಿಯಾಗಿದ್ದು ಜ್ಞಾನದ್ಯೋತಕವೆಂದೂ ಅವರು ಭಾವಿಸುತ್ತಾರೆ. ಇಲ್ಲಿನ ಆರಾಧ್ಯರಂತೆಯೇ ಶವವನ್ನು ಹೂಳುತ್ತಾರೆ. ವಿಧವೆಯರಿಗೆ ಕೇಶಮುಂಡನ ಮಾಡಿಸುವುದಿಲ್ಲ. ಬಸವಸಮಾಜದ ಲಿಂಗವಂತರೊಡನೆ ವಿವಾಹಸಂಬಂಧಗಳನ್ನು ಬೆಳೆಸುವುದಿಲ್ಲ. ತಾವು ಬ್ರಾಹ್ಮಣವರ್ಗದಲ್ಲಿ ಹೆಚ್ಚೆಂಬ ನಂಬುಗೆಯಿಂದ ಬೇರೆ ಬ್ರಾಹ್ಮಣರ ಮನೆಗಳಲ್ಲಿ ಊಟೋಪಚಾರ ಮಾಡುವುದಿಲ್ಲ.

**ಆರಾಧ್ಯ ಸಂಘಟನೆಗಳು**

ಮೈಸೂರು, ಮಂಡ್ಯ ಮತ್ತು ಬೆಂಗಳೂರು ನಗರಗಳಲ್ಲಿ ಆರಾಧ್ಯಬಂಧುಗಳು ತಮ್ಮದೇ ಸಂಘಟನೆಗಳನ್ನು ರೂಪಿಸಿಕೊಂಡು ಶೈಕ್ಷಣಿಕ ಚಟುವಟಿಕೆಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿದ್ದಾರೆ. ಆ ಪೈಕಿ ಮೈಸೂರು ನಗರದಲ್ಲಾಗಿರುವ ಬೆಳವಣಿಗೆ ಗಮನಾರ್ಹವಾದುದು. 1920ರಲ್ಲಿಯೇ 'ಅಖಿಲಭಾರತಆರಾಧ್ಯಬ್ರಾಹ್ಮಣಮಹಾಸಭಾ' ಎಂಬ ಸಂಸ್ಥೆಯು ಸ್ಥಾಪನೆಗೊಂಡಿತು. ಇಂದು ಆ ಸಭೆಯು ಮೈಸೂರಿನ ಝಾನ್ಸಿರಾಣಿಲಕ್ಷ್ಮೀಬಾಯಿ ರಸ್ತೆಯಲ್ಲಿ ಸ್ವತಂತ್ರವಾದ ಕಟ್ಟಡವೊಂದನ್ನು ಹೊಂದಿದ್ದು, ಅಲ್ಲೊಂದು ವಿದ್ಯಾರ್ಥಿನಿಲಯವಿದೆ. ಅದರ ಜೊತೆಗೆ 'ವಿಶ್ವಭಾರತಿ' ಎಂಬ ಸಂಸ್ಕೃತ ಪಾಠಶಾಲೆಯೂ ಇದೆ. ಈ ಮಹಾಸಭಾದ ಆಶ್ರಯದಲ್ಲಿ 'ಆರಾಧ್ಯಧರ್ಮೋಜ್ಜೀವಿನಿ' ಎಂಬ ಮಾಸಪತ್ರಿಕೆಯು ಕೆ. ಸಿ. ನಂಜುಂಡಾರಾಧ್ಯರ ಸಂಪಾದಕತ್ವದಲ್ಲಿ ಸ್ವಲ್ಪಕಾಲ ಪ್ರಕಟವಾಯಿತು. ಇತ್ತೀಚೆಗೆ ಈ ಸಂಘಟನೆಯು ತನ್ನ ಹೆಸರಿಗೆ ಕೂಡಿಕೊಂಡಿದ್ದ 'ಬ್ರಾಹ್ಮಣ' ಎಂಬುದನ್ನು ಕೈಬಿಟ್ಟು 'ಆರಾಧ್ಯಮಹಾಸಭಾ' ಎಂಬ ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತಿದೆ. ಆರಾಧ್ಯಜನಾಂಗದ ಇತಿಹಾಸ,

ಆರಾಧ್ಯ ಜನಾಂಗದ ಪ್ರಸಿದ್ಧ ಪುರುಷರು, ಆರಾಧ್ಯ ಪುರೋಹಿತರು, ಆರಾಧ್ಯಕುಟುಂಬಗಳ ಸಮಗ್ರ ವಿವರಗಳು ಈ ಮುಂತಾದ ಉಪಯುಕ್ತ ವಿವರಗಳನ್ನೊಳಗೊಂಡ ಆರಾಧ್ಯಧರ್ಮಸಭಾಟ್ರಸ್ಟ್ ರಿ. ಮೈಸೂರು ಎಂಬ ಮಹಾಸಭಾದ ಉಪಸಂಘಟನೆಯೊಂದು 'ಆರಾಧ್ಯಕೈಪಿಡಿ' (2001) ಎಂಬೊಂದು ಹೊತ್ತಗೆಯನ್ನು ಹೊರತಂದಿದೆ. ಈ ಮೇಲೆ ಹೇಳಿದ ಸಂಘಟನೆಯ ಜೊತೆಗೆ 'ಆರಾಧ್ಯಶೈವಧರ್ಮಪುನರುತ್ಥಾನಸಮಿತಿ' ಸ್ಥಾಪನೆಗೊಂಡು ಕಾರ್ಯೋನ್ಮುಖವಾಗಿದೆ.

ಮಂಡ್ಯ ನಗರದಲ್ಲಿ 'ಕರ್ನಾಟಕರಾಜ್ಯ ಆರಾಧ್ಯಯುವಜನಸಮಿತಿ' ರೂಪುಗೊಂಡು ಆರಾಧ್ಯಜನಾಂಗದ ಸಂಘಟನೆಯತ್ತ ಗಮನ ಹರಿಸುತ್ತಿದೆ. ಬೆಂಗಳೂರಿನಲ್ಲಿ ಆರಾಧ್ಯ ವಿವಿಧೋದ್ದೇಶ ಸಂಸ್ಥೆಯು ಸ್ಥಾಪನೆಗೊಂಡು ಅದು ಶೈಕ್ಷಣಿಕ ಹಾಗೂ ಇತರ ಕ್ಷೇತ್ರಗಳಲ್ಲಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳುತ್ತಿದೆ. ಸ್ವತಂತ್ರವಾದ ಕಟ್ಟಡವನ್ನು ನಿರ್ಮಿಸಿಕೊಳ್ಳುವತ್ತ ಹೆಜ್ಜೆಹಾಕುತ್ತಿದೆ.

## ವರ್ತಮಾನ ಮತ್ತು ಭವಿಷ್ಯತ್ತು

ಕರ್ನಾಟಕ ಸರ್ಕಾರದ ದಾಖಲೆಗಳಲ್ಲಿ ಆರಾಧ್ಯ ಎಂಬುದೀಗ ಪ್ರತ್ಯೇಕ ಜಾತಿಪಂಗಡವಾಗಿ ಉಳಿದಿಲ್ಲ. 1981ರವರೆಗೂ ಆರಾಧ್ಯಕ್ಕೆ ಸ್ವತಂತ್ರವಾದ ಉಲ್ಲೇಖವಿತ್ತೆಂದೂ, ಆಮೇಲಿನ ಸೆನ್‌ಸಸ್ ಪಟ್ಟಿಯಿಂದ ಅದು ಲುಪ್ತವಾಗಿದೆಯೆಂದೂ ಜಿನ್ನಹಳ್ಳಿ ನಾಗಭೂಷಣಾರಾಧ್ಯರು ತಿಳಿಸಿದ್ದಾರೆ. ಜನಗಣತಿಯ ಕಾಲದಲ್ಲಿ ಕೆಲವರು ತಾವು ಆರಾಧ್ಯರು ಎಂದು ಬರೆಯಿಸಿ ಮತ್ತೆ ಕೆಲವರು ತಾವು ಗುರುಸ್ಥಲದವರು, ಮಠಪತಿಗಳು, ಜಂಗಮರು ಎಂದು ಬರೆಯಿಸಿದ್ದೇ ಕಾರಣವಾಗಿ ಏನೇನೋ ತೊಡಕುಗಳುಂಟಾಗಿರಬಹುದು. (ನೋಡಿ : ರಾಮಸಮುದ್ರಂ ಪುಟ್ಟಸೋಮಾರಾಧ್ಯರ 'ಯಾಜುಷಪ್ರಯೋಗಸಂಗ್ರಹ ಮತ್ತು ಆರಾಧ್ಯಶೈವರ ಸಂಕ್ಷಿಪ್ತ ಇತಿಹಾಸ', ಪು. ೧೦೨) ಆರಾಧ್ಯರು ತಮ್ಮನ್ನು ವೀರಶೈವರೆಂದು ಭಾವಿಸಿಕೊಂಡು ತಾವು ವೀರಶೈವರಲ್ಲಿ ಆರಾಧ್ಯಪಂಗಡ ಎಂಬುದಾಗಿಯೂ ಕೆಲವರು ಬರೆಯಿಸಿರಬೇಕು. ಆರಾಧ್ಯರು ತಮ್ಮನ್ನು ವೀರಶೈವ ಬ್ರಾಹ್ಮಣ, ವೀರಶೈವಆರಾಧ್ಯಬ್ರಾಹ್ಮಣ ಎಂಬುದಾಗಿಯೂ ನಿರ್ದೇಶಿಸಿಕೊಂಡಿರುವುದು ಕಂಡುಬಂದಿದೆ.

ಆರಾಧ್ಯಜನಾಂಗಕ್ಕೆ ಸೇರಿದ ಸರ್ದಾರ್ ಜೆ. ಬಿ. ಮಲ್ಲಾರಾಧ್ಯ ಎಂಬುವವರು ಕರ್ನಾಟಕ ಸರ್ಕಾರದಲ್ಲಿ ಮತ್ತು ತರುವಾಯ ಮೈಸೂರು ಅರಮನೆಯಲ್ಲಿ ಉನ್ನತ ಅಧಿಕಾರ ಸ್ಥಾನಗಳನ್ನು ನಿರ್ವಹಿಸಿದವರು ; ಅಖಿಲಭಾರತಆರಾಧ್ಯಬ್ರಾಹ್ಮಣ ಮಹಾಸಭೆಗೂ (1939), ತರುವಾಯ ಆರಾಧ್ಯಮಹಾಸಭೆಗೂ (1969) ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದರು. ರಾಜಕಾರಣವನ್ನು ಪ್ರವೇಶಿಸಿ ಸರ್ಕಾರದಲ್ಲಿ ವಿರೋಧಪಕ್ಷದ ಮುಖಂಡರಾಗಿದ್ದರು. ಅಷ್ಟು ಮಾತ್ರವಲ್ಲದೆ 'ಅಖಿಲಭಾರತವೀರಶೈವಮಹಾಸಭೆ' ಗೂ (1981) ಅಧ್ಯಕ್ಷರಾಗಿದ್ದರು. ಅತ್ಯಲ್ಪ ಸಂಖ್ಯೆಯಲ್ಲಿರುವ ಆರಾಧ್ಯರು ಸ್ವತಂತ್ರ ಪಂಗಡವಾಗಿದ್ದರೆ ಅವರು ಮುಂದುವರಿಯುವುದು

ಕಷ್ಟ ; ಬಹುಸಂಖ್ಯಾತರಾದ ವೀರಶೈವರೊಡನೆ ಗುರುತಿಸಿಕೊಂಡರೆ ಅವರಿಗೆ ಶ್ರೇಯಸ್ಸಾಗುತ್ತದೆ ಎಂದು ನಿಶ್ಚಯಿಸಿ, ಜನಗಣತಿಯ ಹೊತ್ತಿನಲ್ಲಿ "ಲಿಂಗಧಾರಿಗಳೆಲ್ಲರೂ ವೀರಶೈವ ಅಥವಾ ಲಿಂಗಾಯತ ಎಂದು ಬರೆಸಿ" ಎಂದು ಪ್ರಚಾರಪತ್ರಿಕೆಗಳನ್ನು ಹೊರಡಿಸಿದರು (ನೋಡಿ : 'ಆರಾಧ್ಯ ಪರಂಪರೆ', ಪು.53). ಅದೂ ಆರಾಧ್ಯ ಎಂಬುದು ತನ್ನ ಸ್ವತಂತ್ರ ನಿರ್ದೇಶನವನ್ನು ಕಳೆದುಕೊಂಡಿದೆ. 1988ರಲ್ಲಿ ಪ್ರಕಟವಾಗಿರುವ ಮೈಸೂರು ಜಿಲ್ಲೆಯ ಗೆಜೆಟಿಯರ್‌ನಲ್ಲಿ 'ಆರಾಧ್ಯವು ವೀರಶೈವರ ಪಂಗಡಗಳಲ್ಲೊಂದು' ಎಂದೇ ಬರೆಯಲಾಗಿದೆ.

"ಅನೇಕ ವಿದ್ಯಾರ್ಥಿಗಳು ಪ್ರೌಢಶಾಲೆಗಳಿಗೆ ಸೇರುವಾಗ 'ಜಾತಿ' ಎನ್ನುವ ಕಾಲಂನಲ್ಲಿ'ಆರಾಧ್ಯ' ಎಂದು ನಮೂದಿಸಿ, ಕೆಲಸಕ್ಕೆ ಸೇರ್ಪಡೆಯಾಗುವಾಗ 'ಆರಾಧ್ಯ' ಎನ್ನುವ ಜಾತಿಪಂಗಡ ಸರ್ಕಾರದ ಈಗಿನ ಪಟ್ಟಿಗಳಲ್ಲಿ ಇಲ್ಲದಿರುವುದರಿಂದ ಜಾತಿ ದೃಢೀಕರಣ ಪತ್ರ ಪಡೆಯಲಾಗದೆ ಬಹಳ ಕಷ್ಟನಷ್ಟಗಳನ್ನು ಅನುಭವಿಸಿರುವ ಅನೇಕ ನಿದರ್ಶನಗಳಿವೆ " ಎಂದು ಚನ್ನವೀರಾರಾಧ್ಯರು ('ಆರಾಧ್ಯ ಪರಂಪರೆ', ಪು. 40) ಬರೆದಿದ್ದಾರೆ. ಆರ್ಥಿಕವಾಗಿ ಸ್ಥಿತಿವಂತರಲ್ಲದ ಆರಾಧ್ಯರು 'ಆರಾಧ್ಯಶೈವಧರ್ಮಪುನರಾತ್ಥಾನಸಮಿತಿ'ಯೆಂಬ ಸಂಘಟನೆಯಡಿಯಲ್ಲಿ ತಮ್ಮನ್ನು ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ಜಾತಿಪಟ್ಟಿಯಲ್ಲಿ ಸೇರ್ಪಡಿಸಬೇಕೆಂದು (1999) ಸರ್ಕಾರವನ್ನು ಒತ್ತಾಯಿಸಿದರು. ಆದರೆ ಈ ಮೊದಲು 'ಬ್ರಾಹ್ಮಣ' ಎಂಬ ಗುಂಪಿನಲ್ಲಿದ್ದ ಆರಾಧ್ಯರು ಹಿಂದುಳಿದವರಾಗುವುದಾದರೂ ಹೇಗೆ ! ಆರಾಧ್ಯರ ಆ ಪ್ರಯತ್ನ ಫಲಕಾರಿಯಾಗಲಿಲ್ಲ ಹೋಗಲಿ ಹಿಂದುಳಿದ ಪಂಗಡಕ್ಕೆ ಸೇರಿಸುವುದು ಬೇಡ ; ಈ ಹಿಂದೆ ಇದ್ದಂತೆ 'ಆರಾಧ್ಯ' ಎಂದು ಜಾತಿಪಟ್ಟಿಯಲ್ಲಿ ಸ್ವತಂತ್ರವಾಗಿ ಉಲ್ಲೇಖಿಸಿ ಎಂದು, ಆರಾಧ್ಯರು ಇತ್ತೀಚೆಗೆ ಸರ್ಕಾರದ ಮುಂದೆ ಮತ್ತೊಂದು ಮನವಿ ಸಲ್ಲಿಸಿದ್ದಾರೆ. ಈ ವಿಚಾರಗಳನ್ನೆಲ್ಲ ಪರಿಶೀಲಿಸಿದರೆ ಈಗ ಆರಾಧ್ಯರು ಬ್ರಾಹ್ಮಣದೊಡನೆಯಾಗಲಿ, ವೀರಶೈವದೊಡನೆಯಾಗಲಿ ಗುರುತಿಸಿಕೊಳ್ಳದೆ ಸ್ವತಂತ್ರ ಪಂಗಡವಾಗಿ ಸಾಂಸ್ಕೃತಿಕವಾಗಿ ಬೆಳೆಯಬೇಕೆಂಬ ಆಸೆ ಹೊತ್ತಿರುವಂತೆ ತೋರುತ್ತದೆ. ಅವರ ಪ್ರಯತ್ನಗಳಿಗೆ ಯಶಸ್ಸನ್ನು ಕೋರೋಣ! ತಮ್ಮ ಜನಾಂಗಕ್ಕೆ ಉಂಟಾಗಿರುವ ಹಿನ್ನಡೆಗೆ ಆರಾಧ್ಯರು ತಮ್ಮನ್ನು ತಾವು ದೂರಿಕೊಳ್ಳುತ್ತಿದ್ದಾರೆಯೆ ಹೊರತು ಅನ್ಯರಾರನ್ನೂ ದೂರುತ್ತಿಲ್ಲವೆಂಬುದು 'ಆರಾಧ್ಯ ಪರಂಪರೆಯ, ಲೇಖನಗಳಿಂದ ವ್ಯಕ್ತವಾಗುತ್ತದೆ.

**ಕೆಲವು ಅಭಿಪ್ರಾಯಗಳು**

ಆರಾಧ್ಯರು ಅಲ್ಪತೃಪ್ತರು ಹಾಗೂ ಸಂಕೋಚಸ್ವಭಾವದವರು. ಸಮಾಜವು ಪೂಜ್ಯಸ್ಥಾನವನ್ನು ನೀಡಿದಷ್ಟರಿಂದಲೆ ಹೆಮ್ಮೆಪಟ್ಟುಕೊಂಡು ಸುಮ್ಮನಾದರು. ಪೌರೋಹಿತ್ಯ, ಶಿಷ್ಯಾರ್ಜನೆ, ಆಯುರ್ವೇದಚಿಕಿತ್ಸೆ ಮೊದಲಾದ ಸರಳವೃತ್ತಿಗಳನ್ನೆ ಅವಲಂಬಿಸಿ, ಬಂದ ಅಲ್ಪಾದಾಯದಲ್ಲೆ ತೃಪ್ತಿಪಟ್ಟು ಇಂದಿಗೂ ಮುಂದುವರಿಯದೆ, ಅನ್ಯ ವೃತ್ತಿಗಳನ್ನು ಅವಲಂಬಿಸದೆ ಸಮಾಜದಲ್ಲಿ ಹಿಂದುಳಿದ ಜನಾಂಗವಾಗಿರುವುದನ್ನು ಕಾಣಬಹುದು ಎಂದು ಪ್ರಸ್ತುತ

ಸ್ಥಿತಿಗತಿಗಳನ್ನು ರೇವಣಾರಾಧ್ಯರು ("ಆರಾಧ್ಯಪರಂಪರೆ', ಪು. 36) ವಿಮರ್ಶಿಸಿದ್ದಾರೆ. "ವ್ಯವಸಾಯದಲ್ಲಿ ನಿರತರಾಗಿರುವ, ಒಕ್ಕಲಿಗರ ಜೊತೆಯಲ್ಲಿ ಗುರುಶಿಷ್ಯ ಬಾಂಧವ್ಯ ಹೊಂದಿರುವ ಆರಾಧ್ಯರು ಹಿಂದಿನಿಂದಲೂ ಒಕ್ಕಲುಮಕ್ಕಳ ಹಿತೈಷಿಗಳಾಗಿ, ಮಾರ್ಗದರ್ಶಕರಾಗಿ ದುಃಖದುಮ್ಮಾನದ ಸಂದರ್ಭದಲ್ಲಿ ಸಾಂತ್ವನ ಹೇಳುತ್ತ ಬಂದಿದ್ದಾರೆ. ಆರ್ಥಿಕವಾಗಿ ಬಳಲುತ್ತಿದ್ದರೂ ಇತರರ ಶ್ರೇಯಸ್ಸನ್ನೇ ಸದಾ ಹಂಬಲಿಸುತ್ತ ಬದುಕುತ್ತಿದ್ದಾರೆ ಎಂದು ಅರ್ಜುನಪುರಿ ಅಪ್ಪಾಜಿ ಗೌಡರು ('ಆರಾಧ್ಯಕೈಪಿಡಿ', ಪು. 14) ಬರೆದಿದ್ದಾರೆ. 'ತ್ರಿಶಂಕುಸ್ಥಿತಿಯಲ್ಲಿ ಆರಾಧ್ಯಜನಾಂಗ' ಎಂಬ ಲೇಖನದಲ್ಲಿ (ಅಂಬರೀಶ್ ಪತ್ರಿಕೆ, ಮೈಸೂರು, ಜೂನ್ 2001) "ಸ್ವಾಮಿ ದಾಸನೂರು ಅವರು 'ಆರಾಧ್ಯರ ಪಂಚಪೀಠಗಳಲ್ಲಿ ವೀರಶೈವವು ವ್ಯಾಪಕವಾಯಿತು. ಈ ಜನಾಂಗವನ್ನು ಮುಂದುವರಿಸುವಂತಹ ನೇತಾರ ದೊರಕಲಿಲ್ಲ. ಸಂಘಟನೆಗಳನ್ನು ಮಾಡಲಿಲ್ಲ. ಜನರಲ್ಲಿ ವಿಚಾರಗಳನ್ನು ತುಂಬಲಿಲ್ಲ, ಪ್ರೇರೇಪಿಸಲಿಲ್ಲ. ಜೆ. ಬಿ. ಮಲ್ಲಾರಾಧ್ಯರಂತಹ ವ್ಯಕ್ತಿಗಳು ಕೂಡ ತಮ್ಮನ್ನು ವೀರಶೈವದಲ್ಲೇ ಗುರುತಿಸಿಕೊಂಡದ್ದು ಹಿನ್ನಡೆಗೆ ಕಾರಣವಾಯಿತು" ಎಂದು ಮುಂತಾಗಿ ನೊಂದು ಬರೆದಿದ್ದಾರೆ.

"They are a cultured and peace loving community and occupy a decent position among Hindus"- ಸುಸಂಸ್ಕೃತರೂ, ಶಾಂತಿಪ್ರಿಯರೂ ಆದ ಆರಾಧ್ಯ ಜನಾಂಗದವರು ಹಿಂದೂಧರ್ಮೀಯರ ನಡುವೆ ಗೌರವಪೂರ್ಣವಾದ ಸ್ಥಾನವನ್ನು ತಮ್ಮದಾಗಿಸಿಕೊಂಡಿದ್ದಾರೆ. - ಎಂದು ಎಲ್. ಕೆ. ಎ. ಅಯ್ಯರ್ ಅವರು ಹಲವು ದಶಕಗಳ ಹಿಂದೆ ಹೇಳಿದ ಮಾತು ಅಂದಿಗೆ ಹೇಗೋ ಇಂದಿಗೂ ಅಷ್ಟೇ ಸಾರ್ಥಕವಾಗಿ ಅನ್ವಯಿಸುತ್ತದೆ.

ಆರಾಧ್ಯವೆಂಬುದು ಕನ್ನಡನಾಡಿನ ಧರ್ಮೋದ್ಯಾನದಲ್ಲಿ ಅರಳಿದ ಚೆಲುವಾದೊಂದು ಹೂವು. ಅದು ಈಗಾಗಲೇ ನಿಶ್ಚಯಿಸಿಕೊಂಡಿರುವಂತೆ ಬ್ರಾಹ್ಮಣದಲ್ಲಾಗಲಿ, ವೀರಶೈವದಲ್ಲಾಗಲಿ ಗುರುತಿಸಿಕೊಳ್ಳದೆ *'ನಾನು ಯಾರು'* ಎಂದು ವ್ಯಾವಹಾರಿಕವಾಗಿ ಪ್ರಶ್ನಿಸಿಕೊಂಡು, ಸ್ವಾವಲಂಬಿಯಾಗಿ ಮುನ್ನಡೆದರೆ ಕನ್ನಡಸಂಸ್ಕೃತಿಯ ಸೊಬಗು ಇಮ್ಮಡಿಸುತ್ತದೆ. ವಿವಿಧತೆಯಲ್ಲಿ ಏಕತೆಎಂಬ ತತ್ತ್ವದಂತೆ ಆರಾಧ್ಯ ಬಂಧುಗಳು ತಮ್ಮ ಸಂಸ್ಕೃತಿ ಸಂಸ್ಕಾರಗಳನ್ನು ಸಂರಕ್ಷಿಸಿಕೊಳ್ಳುವ ಮೂಲಕ ಕನ್ನಡಾಂಬೆಯ ಸಿರಿಮುಡಿಯ ಸುಂದರ ಸುಮವಾಗಿ ಕಂಪುಚೆಲ್ಲುವ ಸುದಿನಗಳು ಬೇಗನೆ ಸಾಕ್ಷಾತ್ಕಾರವಾಗಿಲಿ ಎಂದು ಆಶಿಸುತ್ತೇನೆ.

* * *

# ಶ್ರೀ ಗಾಯಿತ್ರಿ ಸ್ವರೂಪ ನಿರ್ವಚನ

- ಉಮ್ಮತ್ತೂರು ರಾಜಗುರು ನೀಲಕಂಠಾರಾಧ್ಯರು (ಕ್ರಿ. ಶ. 1480)

ಗಾಯತ್ರಿ ಸೂರ್ಯಪರವೆಂದು “ಪೇಳ್ದುದೆಸ”–
ಲಾಯರ್ಥವಲ್ತು ‘ತತ್ಸವಿತುರ್ವರೇಣ್ಯಮೆ’ಂ–
ದಾಯತಿಯಿಂ ‘ಭರ್ಗೋದೇವಸ್ಯ ಧೀಮಹಿ
ಧಿಯೋ ಯೋ ನಃ ಪ್ರಚೋದಯಾತ್ತೆ’ಂದೆನೆ
ಈಯರ್ಥದಲ್ಲಿ ಭರ್ಗಸ್ಸೆಂದು ಸಾಂತಮಂ
ಮಾಯಾಮೋಹಿತರೆಣಸುತ್ತೆ ಶ್ರುತಿ-ಸ್ಮೃತಿ
ನ್ಯಾಯವ ವಿಚಾರಿಪರೆಂತೆನೆ ಕೇಳು ಮೈ–
ತ್ರಾಯಣಿಯಂ ‘ಯದೇಷ ರುದ್ರೋ ಭರ್ಗಾಖ್ಯೋ’
ಧ್ಯೇಯನೆಂದು ‘ವದಂತಿ ಬ್ರಹ್ಮವಾದಿನ’ ಎಂದು–
ದಾಯನ್ವಯಂ ಕೇಳು ‘ದೇವಸ್ಯ ಸವಿತುರ್ವರ್–
ಗ್ಯೋ ಯೋ ಭರ್ಗೋನೋ ಧಿಯಃ ಕ್ರಮಾತ್’ಪರಿ–
ಯಾಯದಿಂ ‘ಪ್ರಚೋದಯಾತ್ತಂ ವರೇಣ್ಯಮೆ’ಂ–
ದಾಯುಮೇಶನನೆ ‘ಧೀಮಹಿ’ಯೆಂದಕಾರಾಂತ–
ಪ್ರಾಯದಿಂ ಪ್ರಬಲಸ್ಮೃತ್ಯುಕ್ತಿಗಳುಂಟಾಗಿ
ಆಯಾಸಮೇಂ ‘ದ್ವಿತೀಯಃ ಪಾದೋ ಭರ್ಗಮ–
ಯೋ’ಯೆಂದು ತಲವಕಾರೋಪನಿಷತ್ ಪೇಳ್ದು–
ದಾಯುಮರಂ ‘ಹರಸ್ಸ್ಮರಹರೋ ಭರ್ಗ’ ಎಂ–
ದೊಯ್ಯಾರದಿಂ ಭರ್ಗನೀಶನೆಂದುದು ಮತ್ತೆ
“ಗಾಯತ್ರ್ಯಾಃ ಯತ್ಪರಂ ತತ್ತ್ವಮೇ’ಂದೆನುತೊಲ್ದು”
‘ಮಾಯಾರಿಸ್ಸ ಮಹೇಶ್ವರ’ ಎಂದುಮಾದಿತ್ಯ
ಕಾಯಜರಿಪು ಶ್ರುತಿಸ್ಮೃತಿಪೌರಾಣ ನಿ–
ಕಾಯದಿಂ ಭರ್ಗಾಖ್ಯನಸ್ತೆ ‘ವೇದಮಾತಾ ಚ
ಗಾಯತ್ರೀ’ಯೆನಲದಱಿಂ ಶಾಸ್ತ್ರಪೌರಾಣಾ–
ಮ್ನಾಯಂಗಳೀಶನಂ ಪೊಗಳ್ದುವೆಂಬುದಱಿಯದೆ
ಬಾಯಕನರಕದೊಳ್ ಮುಳುಗಿ ತೇಲುವುದದು
ಪ್ರಿಯಮೇ ನಿನಗೆ ಕೇಳೆಲೊ । ದುರ್ವಾದದ
ಶ್ರೇಯಸ್ಸದೇನು ಪೇಳೆಲೋ । ಸರ್ವೇಶನ
ಸ್ವಾಯುಕ್ತವೇಕೆ ತಾಳೆಲೊ । ದುರ್ವಾಗ್ಮಮು–
ದಾಯುವಿನ್ನೆಳ್ಕೊಡಬೇಡೆಲೊ । ಸಕಲಮಂ ನೀಂ
ಜ್ಞೇಯನ ನಿಂದೆಯನೇ [ನೀ]ಮಾಡಿಕೊಳ ॥

* * *

# ನಂದಾ ದೀಪ

*"ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯ ದೇವೋ ಭವ, ಅಥಿತಿದೇವೋ ಭವ"* ಎಂದು ಸ್ಮರಿಸುವ ಪದ್ಧತಿ ಈಗಲೂ ನಮ್ಮಲ್ಲಿ ಪ್ರಚಾರದಲ್ಲಿದೆ. ಪಾಶುಪತಶೈವ ಶಿವಾದ್ವೈತ ಸಂಪ್ರದಾಯದಲ್ಲಿ ಸ್ವಯಂ ಆಚಾರ್ಯಪುರುಷ ಪದ್ಧತಿಯು ರೂಢಿಯಲ್ಲಿದೆ. ಈ ಬಗೆಯ ಮನೆತನದವರು ನಾಡಿನ ಎಲ್ಲೆಡೆ ವಿರಳವಾಗಿ, ಸಜ್ಜನರಾಗಿ ಬದುಕನ್ನು ನಡೆಸಿಕೊಂಡು ಬರುತ್ತಲಿದ್ದಾರೆ. ಇವರ ಪುರಾತನರು ಕಾಶಿ ಮತ್ತು ಆಂಧ್ರ ಪ್ರದೇಶದಿಂದ ಈ ಕಡೆಗೆ ಬಂದವರಾಗಿರುತ್ತಾರೆ. ವೈದಿಕ ಮನೆತನದವರುಗಳಾಗಿರುತ್ತಾರೆ ಎಂದು ತಿಳಿದು ಬರುತ್ತದೆ. ಇವರು ರಾಜರುಗಳ ವಂಶಕ್ಕೆ ಗುರುಗಳಾಗಿ, ಮಾತನಾಡುವ ಕಲೆಯಲ್ಲಿ ಚತುರರಾಗಿ ಬರವಣಿಗೆಯಲ್ಲಿ ಪರಿಶ್ರಮ ಉಳ್ಳವರಾಗಿರುವುದು ತಿಳಿದುಬರುತ್ತದೆ. ಇಂತಹ ಹಿನ್ನೆಲೆಹೊಂದಿದ *"ಆರಾಧ್ಯರ"* ವಂಶದ ವ್ಯಕ್ತಿತ್ವವನ್ನು, ಕಾರ್ಯಸಾಧನೆಯನ್ನು ಈಗಲೂ ಆ ಸಮಾಜದಲ್ಲಿ ಅಲ್ಲಲ್ಲಿ ಕಾಣಬಹುದು ಎಂಬಂಶವು ಜನಾಭಿಪ್ರಾಯವಾಗಿದೆ.

***ರೇವಣಸಿದ್ಧ ಪುತ್ರೋ ಽಹಂ ರೇವಣಾರಾಧ್ಯನಾಮತಃ***
***ರಚಯಾಮಿ ಪ್ರಹರ್ಷೇಣ ಶತವಾದಸಮಾಹೃತಂ***
***ರಘುನಾಯಕ ಬೋಧಾರ್ಥಂ ಶಿವಾಧಿಕ್ಯಶಿಖಾಮಣಿಮ್***

ಎಂಬಂತೆ ಸೋಸಲೆಯ ಗುರುಮಠದ ವಂಶಸ್ಥರಾದ ಶ್ರೀ ರೇವಣ ಸಿದ್ಧಶಾಸ್ತ್ರಿಗಳ ಪೂರ್ವಜರು ಶ್ರೀ ವಿಶ್ವನಾಥಾಚಾರ್ಯರು ಶ್ರೀ ರೇಣುಕಾಚಾರ್ಯರ ವಂಶಕ್ಕೆ ಸೇರಿದವರು. ಅವರ ನಂತರ ಶ್ರೀ ಕಾಶೀಪತಿ ಅವರಪುತ್ರ ಶ್ರೀ ವೀರಾರ್ಯ ಮತ್ತು ಶ್ರೀ ಸುರೇಶ್ವರಾಚಾರ್ಯ. ಇವರ ಮಗ ಶ್ರೀ ವೀರಣಾಚಾರ್ಯ ಅವರ ಪುತ್ರ ಶ್ರೀರೇವಣಸಿದ್ಧಶಾಸ್ತ್ರಿಗಳು. ಶಾಸ್ತ್ರಾರ್ಥ ದಿಗ್ದಂತಿಗಳಾದ ಪಿತೃಪಿತಾಮಹರೆಲ್ಲರೂ ವಿಜಯನಗರ, ಮೈಸೂರು ಮತ್ತು ಸ್ಥಾನಿಕಪ್ರಭುಗಳ ಆಸ್ಥಾನದ ಗೌರವಕ್ಕೆ ಪಾತ್ರರಾಗಿದ್ದವರು ಇಂತಹ ವಂಶಸ್ಥರಾದ ನಮ್ಮ ಪುರಾತನರು ಮೈಸೂರು ಜಿಲ್ಲೆ ತಿರುಮಕೂಡಲು ನರಸೀಪುರದ ಪಕ್ಕದ ಸೋಸಲೆಗ್ರಾಮದವರು.



**ಜಿನ್ನಹಳ್ಳಿ ನಾಗಭೂಷಣಾರಾಧ್ಯ**
ಪತ್ರಕರ್ತರು
# 285, ಮಧುವನ, 10ನೆ ಕ್ರಾಸ್,
ಶ್ರೀರಾಂಪುರ, 2ನೆ ಹಂತ,
ಮೈಸೂರು -23. ☎ : 2362204.

ಅಲ್ಲಿಂದ ಜಿನ್ನಹಳ್ಳಿಗೆ ಕರೆಸಲ್ಪಟ್ಟವರು. ಕಾರಣ ಸದರಿ ಜಿನ್ನಹಳ್ಳಿ ಗ್ರಾಮದ ಶ್ರೀ ಮಹದೇಶ್ವರರು ಗ್ರಾಮದ ಯಜಮಾನರ ಕನಸಿನಲ್ಲಿ ಬಂದು ಈ ಗ್ರಾಮದ ಗುರುವು ಹಾಲಿ ತಿರುಮಕೂಡಲು ನರಸೀಪುರದ ಸೋಸಲೆ ಗ್ರಾಮದ ಗುರುಮಠದವರು. ಅಲ್ಲಿಂದ ಅವರನ್ನು ಕರೆತನ್ನಿ ಎಂದು ಸೂಚಿಸಿದ ಮೇರೆಗೆ ಕಾರ್ಯ ನಡೆದಂತಾಗಿದೆ ಎಂದು ನಮ್ಮ ಹಿರಿಯರಿಂದ ತಿಳಿದು ಬಂದಿದೆ. ಸೋಸಲೆ ಗುರುಮಠದಿಂದ ಶ್ರೀ ಮಹದೇಶ್ವರರ ಕೃಪಾಕಟಾಕ್ಷದಿಂದ ಜಿನ್ನಹಳ್ಳಿಗೆ ಬಂದ ಗುರುಮಠದ ಪರಂಪರೆಯಲ್ಲಿ ದಿ|| ವೇ|| ಬ್ರಂ|| ಶ್ರೀ ರೇವಣಾರಾಧ್ಯರು ಮತ್ತವರ ಧರ್ಮಪತ್ನಿ ಶ್ರೀಮತಿ ಬಸವಾಜಮ್ಮನವರ ಮೂರನೆಯ ಗರ್ಭಾಂಬುಧಿಯಲ್ಲಿ ಪುತ್ರರತ್ನ ದಿ|| ವೇ||ಬ್ರಂ|| ಶ್ರೀ ಜಿನ್ನಹಳ್ಳಿ ಆರ್. ಕುಮಾರಾರಾಧ್ಯರು ಜನಿಸಿದರು. ಇವರ ಕುಟುಂಬ ದಿ|| ಶ್ರೀಮತಿ ಪಾರ್ವತಮ್ಮ ಹೆಬ್ಬಲಗುಪ್ಪೆ ಇವರುಗಳ ಪುಣ್ಯ ಜೀವನದ ಸವಿನೆನಪು ಈ ನನ್ನ ಲೇಖನವಾಗಿದೆ.

*ಶತೇಷು ಜಾಯತೇ ಶೂರಃ ಸಹಸ್ರೇಷುಚ ಪಂಡಿತಃ |*
*ವಕ್ತಾ ದಶಸ ಹಸ್ರೇಷು ದಾತಾ ಭವತಿ ವಾ ನ ವಾ ||*

ಈ ಸುಭಾಷಿತದಂತೆ ನೂರುಜನಕ್ಕೆ ಒಬ್ಬ ಶೂರ ಸಿಗಬಹುದು, ಸಾವಿರಕ್ಕೆ ಒಬ್ಬಪಂಡಿತ ಸಿಗಬಹುದು. ಹತ್ತುಸಾವಿರಕ್ಕೆ ಒಬ್ಬ ವಾಗ್ಮಿ ಸಿಗಬಹುದು, ದಾನಿ ಸಿಗುವುದು ಮಾತ್ರ ಬಹಳ ವಿರಳ. ಅಸಂಖ್ಯರಲ್ಲಿ ಅಂತಹ ಒಬ್ಬ ಇರಬಹುದು ಅಥವಾ ಇಲ್ಲದಿರಬಹುದು ಎನ್ನುತ್ತದೆ.

ಮನುಷ್ಯನಿಗೆ ದಾನಸ್ವಭಾವಕ್ಕಿಂತ ದೊಡ್ಡತಪಸ್ಸು, ಸಾಧನೆ ಮತ್ತೊಂದಿಲ್ಲ ಎನ್ನುವುದು ಮಹಾಜ್ಞಾನಿಗಳ ನಿರ್ಣಯ. ದಾನಮಾಡಬೇಕು, ಇನ್ನೊಬ್ಬರಿಗೆ ತಿಳಿಯದಂತೆ ರಹಸ್ಯ ಇರಬೇಕು ಎಂಬುದು ಉಕ್ತಿಗಳ ಹಿತೋಕ್ತಿ. ಮನುಷ್ಯರಿಗೆ ದಾನಮಾಡು ಎಂದರೆ ಸಿಟ್ಟಿಗೇಳುವರು, ದಂಡಕ್ಕೆ ಮಾತ್ರ ಕೊಡುವರು ಎಂದು ಹಾಸ್ಯವಾಗಿ ಕನ್ನಡದ ಕವಿ ನುಡಿದಿದ್ದಾನೆ. ಒಬ್ಬ ವ್ಯಕ್ತಿ ಎಷ್ಟುಕೊಡುತ್ತಾನೆ ಎನ್ನುವುದಕ್ಕಿಂತ ಎಷ್ಟು ಇರುವವ ಎಷ್ಟನ್ನು ದಾನ ಕೊಡುತ್ತಾನೆ ಎನ್ನುವುದು ಮುಖ್ಯ ಎಂದಿದ್ದಾನೆ. ಅನ್ನದಾನಕ್ಕೆ ಸಾಟಿಯಾದ್ದು ಯಾವುದೂ ಇಲ್ಲ. ಅನ್ನದಾನಕ್ಕಿಂತ ಮಿಗಿಲಾದ ದಾನಯಾವುದೂ ಇಲ್ಲ. ಈ ಜಗದೊಳಗೆ ಅನ್ನವೇ ಪ್ರಾಣವೆನ್ನಲು ಅಡ್ಡಿಯಿಲ್ಲ. ಅನ್ನವೇ ಶ್ರೇಷ್ಠವೆಂದಿದ್ದಾನೆ. ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ ಎನ್ನುತ್ತಾನೆ ಸರ್ವಜ್ಞಕವಿ. ನಿಜದಾನದಿಂದ ಸಿಗುವಂಥಹ ಸಂತೃಪ್ತಿ ಅಷ್ಟಿಷ್ಟಲ್ಲ. ಅದನ್ನು ತಾನು ಅನುಭವಿಸಬೇಕು. ಹೇಳುವುದರಿಂದ ತಿಳಿಯಲಾಗದು.

ಸತ್ಯಕ್ಕಾಗಿ ರಾಜ್ಯ, ಹೆಂಡತಿ, ಕರುಳಕುಡಿ ಅಷ್ಟೇ. ಏನು ತನ್ನನ್ನೇ ತಾನು ಮಾರಿಕೊಂಡ ದಾನ ಶ್ರೇಷ್ಠರಿದ್ದ ಪುಣ್ಯಭೂಮಿ ನಮ್ಮ ಭವ್ಯಭಾರತ ಎಂದಿದ್ದಾರೆ ಹಿರಿಯರು. ಅಂತಹ ವ್ಯಕ್ತಿಯ ಬದುಕಿನಲ್ಲಿ ನಡೆಯುವ ಅಪರೂಪದ ಘಟನೆಗಳು, ರಸಮಯ ಸನ್ನಿವೇಶಗಳು ಅನೇಕ ವೇಳೆ ಮನುಷ್ಯನ ವ್ಯಕ್ತಿತ್ವದ ಮೇಲೆ ಹೊಸಬೆಳಕು ಚೆಲ್ಲುತ್ತದೆ ಎಂಬುದು ಪ್ರಾಕೃತಿಕ ಸತ್ಯ. ಇಂತಹ ಸ್ವಭಾವ ಜನ್ಯವಾದ ನನ್ನ ಪೂಜ್ಯ ತಂದೆತಾಯಿಯವರ ಸ್ಮರಣೆಯು ನನಗೆ ಅಷ್ಟೇ ಆನಂದವನ್ನು ನೀಡುತ್ತಲಿದೆ.

ಜಿನ್ನಹಳ್ಳಿ ಗುರುಮಠದ ಶ್ರೀ ಆರ್. ಕುಮಾರಾರಾಧ್ಯರ ಮಹಾದಾನವಿಲಾಸ ಮೆಚ್ಚುವಂಥದ್ದಾಗಿದೆ. ಅದೆಂದರೆ ಜೊಂಪನಹಳ್ಳಿ ಸರ್ವೆ16ರಲ್ಲಿ ಮೈಸೂರಿನ ಆರಾಧ್ಯಮಹಾಸಭೆಗೆ

25 ಎಕರೆ, ಹಂಪಾಪುರದ ಸರಕಾರಿ ಆಸ್ಪತ್ರೆಗೆ 15ಎಕರೆ ಮತ್ತು ಶ್ರೀ ಕೆಂಡಗಣ್ಣಸ್ವಾಮಿ ಗದ್ದಿಗೆಗೆ 1ಎಕರೆ ಜಮೀನನ್ನು ದಾನವಾಗಿ ಶ್ರೀ ಸ್ವಾಮಿಯವರ ಹೆಸರಿಗೆ ಪಡಿತರ ದೀಪಾರಾಧನೆಯ ಖರ್ಚಿಗಾಗಿ ಸಂಬಂಧಿಸಿದ ಸಬ್‌ರಿಜಿಸ್ಟ್ರಾರ್‌ರವರಲ್ಲಿ ದಾನಪತ್ರ ಮಾಡಿಸಿರುತ್ತಾರೆ. ಇದಲ್ಲದೆ ಮೈಸೂರಿನ ಶಾರದಾನಿಕೇತನಹಾಸ್ಟೆಲ್ ಹಾಗೂ ಜೈನಬೋರ್ಡಿಂಗ್‌ಗಳಿಗೂ ದಾನ ಮಾಡಿರುತ್ತಾರೆಂದು ಆ ಸಂಸ್ಥೆಯವರು ನಮ್ಮಲ್ಲಿ ತಿಳಿಸಿರುತ್ತಾರೆ. ಶ್ರೀಯುತ ಜಿನ್ನಹಳ್ಳಿ ಆರಾಧ್ಯರು ಮೈಸೂರಿನ ಆರಾಧ್ಯಮಹಾಸಭಾದ ಆಡಿಟರ್‌ರವರಾಗಿಯೂ ಕಾರ್ಯನಿರ್ವಹಿಸಿರುತ್ತಾರೆ ಎಂದು ತಿಳಿಸಲು ಹೆಮ್ಮೆಯಾಗುತ್ತದೆ. ಮತ್ತು ಇದೆ ಆರಾಧ್ಯ ಮಹಾಸಭಾದ ಪ್ರಾಂತೀಯಸಭೆಗೆ ಇವರನ್ನು ಆರಿಸಿ ಅಧ್ಯಕ್ಷರನ್ನಾಗಿ ಆಡಳಿತ ಮಂಡಳಿ ಸೂಚಿಸಿರುತ್ತದೆ.

ಜಗತ್ತಿನ ಧರ್ಮಗಳಲ್ಲಿ ದಾನದ ಪಾತ್ರ ಅತಿಹೆಚ್ಚು. ದಾನಮಾಡುವುದು ಕರ್ತವ್ಯವೆಂದು ಪ್ರತಿಪಾದಿಸಿರುತ್ತದೆ. ದಾನವನ್ನು ನೀಡುವುದು ವೈಯಕ್ತಿಕ ವಿಚಾರವಾಗಿದೆ. ಧರ್ಮ ವ್ಯಕ್ತಿಯನ್ನು ದಾನಮಾಡುವಂತೆ ಪ್ರೇರೇಪಿಸುತ್ತದೆ. ದಾನಮಾಡುವ ವ್ಯಕ್ತಿಯ ಮನಸ್ಸಿನಲ್ಲಿ ಸಹಜ ಅನುಕಂಪವಿರಬೇಕು. ಆಗ ಆತನ ಆತ್ಮದಲ್ಲಿ ದಾನಬುದ್ಧಿ ಪ್ರಾರಂಭಗೊಳ್ಳುತ್ತದೆ. ಅನ್ಯರ ಕಷ್ಟಕಂಡು ಮರುಕಪಡುವ ಹೃದಯವಿರಬೇಕು. ಆಗ ದಾನದ ಅರಿವಾಗಿ ಅತ್ತ ಮನಸ್ಸು ಆಸಕ್ತಿವಹಿಸುತ್ತದೆ. ಮನುಷ್ಯನಿಗೆ ಕಷ್ಟಸುಖಗಳ ಅರಿವಾಗುವಂತಹ ಮನೋಭಾವನೆಗಳು ಹಾಗೂ ಪರಿಸರಗಳು ಚಿಕ್ಕಂದಿನಿಂದಲೂ ಆ ಮಾರ್ಗದಲ್ಲಿ ಹೊಂದಿಕೊಂಡಿರಬೇಕು. ಅಂತಹವರಿಗೆ ಸಹಾನುಭೂತಿಯು ಮನದಲ್ಲಿ ಮೂಡಿ ಅಚಲವಾದ ಸಂಕಲ್ಪದಿಂದ ತೃಪ್ತರಾಗಿ ದಾನಿಯಾಗುತ್ತಾರೆ. ಅಂತಹ ದೃಢಮನಸ್ಸಿಗರು ನನ್ನ ತಂದೆಯವರು.

ದಾನಿಯು ನೀಡಿದ ವಸ್ತು ಯಾವುದಾದರೂ ಒಂದು ರೂಪದಲ್ಲಿ ದಾನಿಯ ಅದೃಷ್ಟ ದ್ರವ್ಯವಾಗಿ ಅವನನ್ನು ಕಷ್ಟದಲ್ಲಿ ಕಾಪಾಡುತ್ತದೆ *"ದಾನಕ್ಕಿಂತ ಸಮನಾದ ಐಶ್ವರ್ಯ ಬೇರಾವುದೂ ಇಲ್ಲ; ಸನ್ನಡತೆಗಿಂತ ಅನ್ಯ ಒಡವೆಯಿಲ್ಲ; ಸಂತೋಷಕ್ಕೆ ಸಮನಾದ ಸಂಪತ್ತಿಲ್ಲ."* ಎಂದು ನಾಣ್ಣುಡಿಯು ಸೂಚಿಸುತ್ತದೆ. ಕೊಡುವ ಗುಣ ಆ ಹೃದಯದ ಔದಾರ್ಯದ ಪ್ರತೀಕವಾಗಿರುತ್ತದೆ. ಮಮಕಾರ ತೊರೆದರೆ ಕೊಡುವ ಗುಣ ಮೈಗೂಡುವುದು. ಹಂಚಿಕೊಂಡು ಬದುಕುವ ಗುಣವನ್ನೆ ದಾನ -ಧರ್ಮ ಎಂದು ಕರೆಯುತ್ತಾರೆ. ಸಂಪತ್ತನ್ನು ತ್ಯಾಗ ಭಾವನೆಯಿಂದ ಅನುಭವಿಸಬೇಕು. ಅದೆಂತೆಂದರೆ ಅನ್ಯರಿಗಾಗಿ ಮರ ಫಲಬಿಡುವಂತೆ, ಹಸು ಹಾಲುಕೊಂಡುವಂತೆ, ನದಿ ನೀರು ಹರಿಸುವಂತೆ, ಅನ್ಯರ ಒಳಿತಿಗಾಗಿ ತ್ಯಾಗಕ್ಕೆ ನಾವು ಮುಂದಾಗಬೇಕು ಎಂದು ಉಪನಿಷತ್‌ವಾಣಿ ಸಾರುತ್ತದೆ. ಹಾಗೆಯೇ ಭೋಜರಾಜನ ಆಸ್ಥಾನಕವಿಯ ಕತೆಯ ನೆನಪು ಹೀಗಿದೆ. ವೃದ್ಧನೊಬ್ಬ ಉರಿಬಿಸಿಲಿನಲ್ಲಿ ಬರಿಗಾಲಲ್ಲಿ ನಡೆದು ಬರುವುದನ್ನು ಆಸ್ಥಾನಕವಿ ಕಂಡು ಮರುಗಿ ತನ್ನ ಗಜ ಚರ್ಮದ ಚಪ್ಪಲಿಯನ್ನುಆ ವೃದ್ಧನಿಗೆ ಕೊಟ್ಟು, ತಾನು ಬರಿಕಾಲಿನಲ್ಲಿ ಬರುವುದನ್ನು ಕಂಡ ಮಾವುತನು ಅವರನ್ನು ಆನೆಯ ಮೇಲೆ ಕೂರಿಸಿಕೊಂಡು ರಾಜನ ಬಳಿ ಕರೆತಂದ. ಇದನ್ನು ಕಂಡ ಭೋಜರಾಜ ಸಂತಸಗೊಂಡ. ಬಡವನಿಗೆ ನೀಡಿದ ಪಾದರಕ್ಷೆಯ ಫಲವಾಗಿ ಆನೆಯ ಮೇಲೆ ಅರಮನೆಗೆ ಬಂದ ಭಾಗ್ಯ ಲಭಿಸಿತು. ಕೊಟ್ಟದ್ದು ಬೆಳೆಸುತ್ತದೆ. ದಾನಮಾಡಿ ಪುಣ್ಯವನ್ನು

ಸಂಗ್ರಹಿಸಬೇಕು. ಅದು ಆಪತ್ತಿನಲ್ಲಿ ರಕ್ಷಿಸುತ್ತದೆ. ಆದುದರಿಂದ ದಾಸಿಯಾದವನಿಗೆ ಹಾನಿಯೆಂಬುದಿಲ್ಲವೆಂದು ಅರಿವಾಗಬೇಕು. ಅಂತಹ ಪರಮಪೂಜ್ಯರು ನನ್ನ ತಂದೆ

*ದಾನಂ ವಿಭೂಷಣಂ ಲೋಕೇ ದಾನಂ ದುರ್ಗತಿನಾಶಕಮ್ |*
*ದಾನಂ ಸ್ವರ್ಗಸ್ಯ ಸೋಪಾನಂ ದಾನಂ ಶಾಂತಿಕರಂ ಶುಭಮ್ ||*

ಈ ಸುಭಾಷಿತದಲ್ಲಿ ದಾನದ ಮಹತ್ವವನ್ನು ಹಾಡಿ ಹೊಗಳಿದೆ. ದಾನಕ್ಕಿಂತ ಮಿಗಿಲಾದ ಆಭರಣ ಮನುಷ್ಯನಿಗೆ ಈ ಭೂಮಿಯಲ್ಲಿ ಮತ್ತೊಂದಿಲ್ಲ. ಇದು ಪಾಪವನ್ನು ಪರಿಹಾರ ಮಾಡಿ ಪುಣ್ಯಪ್ರದಾನ ಮಾಡುತ್ತದೆ. ನಮ್ಮ ಜೀವಿತಾವಧಿಯಲ್ಲಷ್ಟೇ ಅಲ್ಲದೆ ಸಾವಿನ ನಂತರವೂ ಸ್ವರ್ಗಕ್ಕೆ ಈ ದಾನವೇ ಸೋಪಾನವಾಗುತ್ತದೆ. ಅಂತಿಮವಾಗಿ ಶಾಂತಿ ಮತ್ತು ಶುಭವನ್ನು ಪಡೆಯಬಹುದು. ದಾನಕ್ಕಿಂತ ದೊಡ್ಡ ಧರ್ಮ ಮತ್ತೊಂದಿಲ್ಲವೆಂದು ಸೂಚಿಸಿದೆ. ಅಂತಹ ಮನೋಭಾವ ಬೆಳೆಸಿಕೊಂಡಿದ್ದವರು ಜಿನ್ನಹಳ್ಳಿ ಆರ್. ಕುಮಾರಾರಾಧ್ಯರೆಂದರೆ ಆಶ್ಚರ್ಯವಿಲ್ಲ. ಇವರ ದಾನಗುಣ ಅಮೂಲ್ಯವಾದ್ದು, ಅಪರೂಪವಾದ್ದು. ದಾನವನ್ನು ಒಂದಲ್ಲ ಒಂದು ಬಗೆಯಾಗಿ ಪಡೆಯಲು ಬಯಸುತ್ತಾರೆಯೆ ಹೊರತು ಕೊಡುವವರು ವಿರಳ. ದಾನ ಮಾಡುವುದಕ್ಕೂ ಪುಣ್ಯಬೇಕು. ಅದು ಹಣೆಯಲ್ಲಿ ಬರೆದಿರಬೇಕು. ತಿನ್ನುವ ಅನ್ನದಲ್ಲಿನ ತುತ್ತೊಂದನ್ನು ಹಸಿದು ಬಂದವನಿಗೆ ದಾನ ಮಾಡುವ ನಡಾವಳಿ ನಮ್ಮ ಸನಾತನ ಭಾರತೀಯ ಸತ್ಸಂಪ್ರದಾಯ. ಇದನ್ನು ಆರಾಧ್ಯರಲ್ಲಿ ಜನ ಕಂಡು ಕೊಂಡಿದ್ದರು. ದಾನ ಮಾಡುವುದರಿಂದ ಲಭ್ಯವಾಗುವ ಸಂತೃಪ್ತಿ, ಸಮಾಧಾನವನ್ನು ದೊಡ್ಡ ಆರಾಧ್ಯರು ಪಡೆದುಕೊಳ್ಳುತ್ತಿದ್ದರು. ಇಂತಹ ಅತ್ಯಮೂಲ್ಯವಾದ ದಾನಗುಣವು ಯಾರಿಗೇ ಆಗಲಿ ಹುಟ್ಟನೊಂದಿಗೆ ಬರಬೇಕೆ ಹೊರತು ಅಭ್ಯಾಸದಿಂದ ಅಲ್ಲ ಎಂಬುದನ್ನು ಜಿನ್ನಹಳ್ಳಿ ಆರಾಧ್ಯರಲ್ಲಿ ಕಾಣಬಹುದು. ಇಂತಹ ವ್ಯಕ್ತಿಯು ವಿರಳ, ಅದರಲ್ಲಿಯೂ ನಮ್ಮ ಸಮಾಜದಲ್ಲಿ ಇನ್ನೊಬ್ಬರನ್ನು ಕಾಣುವುದು ಕಷ್ಟ.

ಶ್ರೀ ಆರ್. ಕುಮಾರಾರಾಧ್ಯರನ್ನು ಜನರು ಬಹಳ ಗೌರವಪೂರ್ವಕವಾಗಿ ಸಂಭೋಧಿಸುತ್ತಿದ್ದಾರೆ. ದೊಡ್ಡಬುದ್ಧಿಯವರು, ದೊಡ್ಡಆರಾಧ್ಯರು, ದೊಡ್ಡಗುರುಗಳು, ದೊಡ್ಡ ಅಯ್ಯನವರುಗಳೆಂದು ಸಂಬೋಧಿಸುತ್ತಿದ್ದುದು ಉಂಟು. ನಾನೂ ಸಹ ನನ್ನ ತಂದೆಯವರನ್ನು "ಬುದ್ಧಿ" ಎಂದೇ ಕರೆಯುತ್ತಿದ್ದೆ. ಇವರನ್ನು ನೋಡಿದ್ದವರಿಗೆಲ್ಲ ಅವರ ವ್ಯಕ್ತಿತ್ವ ಇಂದಿಗೂ ಕಣ್ಣಿಗಷ್ಟೇ ಅಲ್ಲ, ಮನದಲ್ಲೂ ನೆಟ್ಟಿರುತ್ತದೆ. ಅಂತಹ ಮಹಾನ್ ವ್ಯಕ್ತಿತ್ವ ಅವರದಾಗಿತ್ತು.

ಶ್ರೀಯುತ ದೊಡ್ಡಆರಾಧ್ಯರು ಕಪ್ಪುಬಣ್ಣದ ಎತ್ತರದ ಆಳು. ತೆಳ್ಳನೆಯ ಮೈಕಟ್ಟು ಉಳ್ಳವರು. ಒಳ್ಳೆಯತೇಜಸ್ಸು ಹೊಂದಿದ್ದರು. ಅವರು ಬೆಳಗಿನ ಜಾವವೆದ್ದು ಕಪಿಲಾನದಿಗೆ ಹೋಗಿ ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ತಮ್ಮ ಜಮೀನಿನಲ್ಲಿದ್ದ ಬೇಲದ ಮರಗಳಲ್ಲಿ ಬಿದ್ದ ಹಣ್ಣುಗಳನ್ನು ಆರಿಸಿ ತೆಗೆದುಕೊಂಡು ಬರುವಾಗ ದಾರಿಯಲ್ಲಿ ಸಿಗುವ ಮಕ್ಕಳಿಗೆ ಕೊಟ್ಟುಕೊಂಡು ಬರುವ ಪದ್ದತಿ ಅವರಲ್ಲಿ ರೂಢಿಯಾಗಿತ್ತು. ಹಾಗೆಯೇ ಅವರು ಬೇರೆ ಹೊರ ಊರುಗಳಿಗೆ ಹೋಗುವ ಸಂದರ್ಭ ಬಂದಾಗಲೆಲ್ಲ ಮನೆಯಿಂದ ಒಂದು ತೆಂಗಿನಕಾಯಿ ಕೈಯಲ್ಲಿ ಹಿಡಿದು ಹೊರಟರೆ ಊರಿನಲ್ಲಿ ಇದನ್ನು ಕಂಡ ಮಕ್ಕಳು ಹಾಗೂ ದೊಡ್ಡವರಿಗೆ ಬುದ್ಧಿಯವರು ಊರ ಮುಂದಿನ ಶ್ರೀ ಮುರುಡಬಸಪ್ಪದೇವರಿಗೆ ಇಡುಗಾಯಿ ಒಡೆಯಲು ಹೋಗುತ್ತಿದ್ದಾರೆ

ಎಂದು ತಿಳಿದು ಅವರ ಹಿಂದೆ ಸಾಲುಗಟ್ಟಿ ಹೊರಡುವುದು ವಾಡಿಕೆಯಾಗಿತ್ತು. ದೇವರಿಗೆ ಇಡುಗಾಯಿ ಒಡೆದು ನಂತರ ಬಂದ ಎಲ್ಲರಿಗೂ ದೇವರ ಪ್ರಸಾದ ಹಂಚಿ ಕಳುಹಿಸುವ ರೂಢಿ ಅವರದಾಗಿತ್ತು.

ದೊಡ್ಡಬುದ್ಧಿಯವರು ಬಳಸುವ ಉಡುಪು ಬಹಳ ಸರಳ ಹಾಗೂ ಸ್ವಚ್ಛ. ದಿನ ನಿತ್ಯ ಬಿಳಿಯ ಜುಬ್ಬ ಮತ್ತು ಕಚ್ಚೆ ಪಂಚೆ. ವಿಶೇಷ ಸಭೆ, ಸಮಾರಂಭಗಳಿಗೆ ಮತ್ತು ಕಾರ್ಯನಿರ್ವಹಣೆಗೆ ನ್ಯಾಯಾಲಯಕ್ಕೆ ಹೋಗುವಾಗ ಮಾತ್ರ ಒಂದು ಸಾದ ಬಿಳಿ ಮೈಸೂರು ಪೇಟ ಮತ್ತು ನೀಲಿಬಣ್ಣದ ಕ್ಲೋಸ್‌ಕಾಲರ್ ಕೋಟು. ಇದರಮೇಲೆ ಒಂದು ಬಿಳಿ ಶಲ್ಯಹಾಕುವುದು ವಾಡಿಕೆಯಾಗಿತ್ತು. ಅವರು ತಮ್ಮ ಮನೆಯಲ್ಲಿ ಕೂರಲು ಕೃಷ್ಣಾಜಿನ ಬಳಸುತ್ತಿದ್ದರು

ದೊಡ್ಡ ಗುರುಗಳು ಹಲವು ಕ್ಷೇತ್ರಗಳಲ್ಲಿ ಜೀವಸವೆಸಿದವರು. ತಮ್ಮ ಜೀವನದುದ್ದಕ್ಕೂ ಸರಳತೆ, ಸೌಜನ್ಯತೆ, ಧಾರ್ಮಿಕತೆ, ನ್ಯಾಯ, ನೀತಿ ಸಮ್ಮತವಾಗಿ ನಡೆದುಕೊಂಡವರು. ಸದಾಕಾಲ ಸಮಾಜದ ಹಿತವನ್ನು ಚಿಂತಿಸುತ್ತಿದ್ದರು. ತಮಗಿಂತ ಕಷ್ಟದಲ್ಲಿರುವವರನ್ನು ಕಂಡರೆ ಕೈಲಾದ ಸಹಕಾರ, ನೆರವು ನೀಡುವುದರ ಮೂಲಕ ಅವರಿಗೆ ತಾತ್ಕಾಲಿಕ ಸಹಾಯ ನೀಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದರು. ಅದರಿಂದ ಆನಂದವನ್ನು ಅನುಭವಿಸಿ ಮನೋತೃಪ್ತಿಯನ್ನು ಹೊಂದುವ ಪ್ರವೃತ್ತಿಯವರು. ಇದು ಇವರ ಸ್ವಭಾವಜನ್ಯವಾದ ಬದುಕು.

ದೊಡ್ಡಅಯ್ಯನವರು ದೈವವನ್ನು ನಂಬಿದ್ದವರು. ಹಿರಿಯರಲ್ಲಿ ಹಾಗೂ ವಿದ್ವಜ್ಜನರಲ್ಲಿ ಅವರಿಗೆ ಅಪಾರ ಗೌರವ. ಆಚಾರ - ವಿಚಾರಗಳನ್ನು, ಸಂಪ್ರದಾಯವನ್ನು ಅವರು ಅಚ್ಚುಕಟ್ಟಾಗಿ ಜೀವನದಲ್ಲಿ ಪಾಲಿಸಿಕೊಂಡುಬಂದವರು. ಗ್ರಾಮ, ನಾಡು, ದೇಶ, ಭಾಷೆ ಅಭಿಮಾನಿಗಳು ಎಂಬುದನ್ನು ಅವರ ಕೆಲಸದಲ್ಲಿ ತೋರಿಸಿ ಮಾದರಿಯಾಗಿ ಬಾಳಿ ಬದುಕಿದವರು. ಇವರು ಜೀವನದಲ್ಲಿ ಋಜುತ್ವ, ಸತ್ಯವಂತಿಕೆ, ಸರಳತೆ, ಪ್ರಾಮಾಣಿಕತೆ ಹೀಗೆ ಎಲ್ಲ ಮೌಲ್ಯಗಳನ್ನು ಕಾಪಾಡಿಕೊಂಡು ಜೀವನನಿಭಾಯಿಸಿದವರು. ಇವರ ಆದರ್ಶದ ಕಟ್ಟುಪಾಡುಗಳಿಂದ ಇವರ ಕುಟುಂಬ ಶ್ರೀಮತಿ ಪಾರ್ವತಮ್ಮ ಹೆಬ್ಬಲಗುಪ್ಪೆ ಇವರಿಗೂ ಶಾಖ ತಾಕದೆ ಬಿಡಲಿಲ್ಲ. ಅವರು ಅದೆಲ್ಲವನ್ನು ಸಹಿಸಿಕೊಂಡು ಸಹಧರ್ಮಿಣಿಯಾಗಿ ಬಾಳಿದರು. ಮನೆ ಬೆಳಗಿದರು. ಆರಾಧ್ಯರ ಜೀವನದ ಏರಿಳಿತಗಳಲ್ಲಿ ಉತ್ತಮ ಸಹಬಾಳ್ವೆಯ ಸಂಗಾತಿಯಾಗಿ ಜೀವನ ನಡೆಸಿದರು.

ಶ್ರೀಯುತ ದೊಡ್ಡಆರಾಧ್ಯರು ದಿನಕ್ಕೆರಡು ಮೂರು ಗಂಟೆಗಳ ಬರವಣಿಗೆ ಮಾಡುತ್ತಿದ್ದರು. ಸರಪಳಿ ಅಕ್ಷರ, ನೋಡಲು ಬಹಳ ಚಂದವಿತ್ತು. ಇವರ ಮಾತು ನೇರ ಹಾಗೂ ಸ್ವಚ್ಛ . ಅಂತೆಯೇ ಬರವಣಿಗೆಯೂ ಹರಿತ. ಆದರೂ ಇತರರಿಗೆ ತೃಪ್ತಿಯನ್ನು ನೀಡುತ್ತಿತ್ತು. ಅವರ ಹೃದಯ ಪರಿಶುದ್ಧವಾಗಿತ್ತು. ಆರಾಧ್ಯರು ಆಡುವುದು ಮಾಡುವುದು ಒಂದೆ ಆಗಿತ್ತು. ಮಾತಿನ ಮೂಲಕ ನಕ್ಕುನಗಿಸುವ ಸಹಜ ರಸಿಕತೆಯಿಂದ ಕೂಡಿದ್ದರೂ ಒಮ್ಮೊಮ್ಮೆ ಸಿಡಿದು ಕೋಪಗೊಳ್ಳುವ ಸ್ವಭಾವದವರು. ಬರವಣಿಗೆಯಲ್ಲಿ ಯಾರಿಗೂ ನೋವನ್ನು, ಅನ್ಯಾಯವನ್ನು ಮಾಡಿದವರಲ್ಲ. ಆದ್ದರಿಂದ ಸುತ್ತಮುತ್ತಲ ಪ್ರದೇಶದ ಜನ ಇವರ ಬಳಿ ಬಂದು ಕಾಗದ ಪತ್ರ ಬರೆಸುವ ವಾಡಿಕೆಯಾಗಿತ್ತು. ಇವೆಲ್ಲ ಈಗ ದಂತಕಥೆ, ಬರೇ ನೆನಪು.

ಶ್ರೀಯುತ ದೊಡ್ಡಬುದ್ಧಿಯವರು ಜಿನ್ನಹಳ್ಳಿ ಕೋ-ಆಪರೇಟಿವ್ ಸೊಸೈಟಿಯನ್ನು ಸ್ಥಾಪಿಸಿ ಅದರ ಅಧ್ಯಕ್ಷರಾಗಿದ್ದು ಅದನ್ನು ಬೆಳೆಸಿದರು. ಇವರ ನಾಲಿಗೆಯು ಇವರ ನಿಯಂತ್ರಣದಲ್ಲಿದ್ದು ಸಚ್ಚಾರಿತ್ರ್ಯ ಹಾಗೂ ಪರರ ಹಣಕ್ಕೆ ಆಸೆಪಡದೆ, ಸ್ವತಃ ದುಡಿದ ಸಂಪಾದನೆಯಿಂದ ಸಂತೃಪ್ತಜೀವನ ನಡೆಸಿ ಬಾಳಿದವರು. ಊರಿನ ಪ್ರಮುಖರಲ್ಲಿ ಇವರನ್ನು ಒಬ್ಬರಾಗಿ ಗುರುತಿಸುತ್ತಿದ್ದರು. ಬರವಣಿಗೆ ಎಂದರೆ ಆರಾಧ್ಯರನ್ನೇ ಎಲ್ಲರೂ ಅಪೇಕ್ಷೆ ಪಡುತ್ತಿದ್ದರು. ಆರಾಧ್ಯರು ಮನೆಯಿಂದ ಹೊರಟರೆ ದಾರಿಯ ಇಕ್ಕೆಲಗಳಲ್ಲಿ ಕುಳಿತವರು ಎದ್ದು ನಿಂತು ಗೌರವ ಸೂಚಿಸುತ್ತಿದ್ದರು. ದಾರಿಯಲ್ಲಿ ಬಂದವರು ಪಕ್ಕಕ್ಕೆ ಸರಿದು ಗೌರವಿಸುತ್ತಿದ್ದರು.

ಶ್ರೀ ಆರ್. ಕುಮಾರಾರಾಧ್ಯರು, ಹೆಗ್ಗಡದೇವನಕೋಟೆ ತಾಲ್ಲೂಕು ಹಂಪಾಪುರದ ವಿಲೇಜ್‌ಮುನ್‌ಸೀಫ್ ಕೋರ್ಟ್‌ನ ನ್ಯಾಯಾಧೀಶರಾಗಿ 1944-1945 ರಿಂದ 1953-1954 ರವರೆಗೆ ಹೆಚ್. ಡಿ. ಕೋಟೆ, ನಂಜನಗೂಡು,ಹುಣಸೂರು ಮೈಸೂರು ತಾಲ್ಲೂಕುಗಳಲ್ಲಿಯೂ ತಮ್ಮ ಪ್ರಾಮಾಣಿಕಸೇವೆಯಿಂದ ಜನಸಾಮಾನ್ಯರನ್ನು ಜಾಗೃತಗೊಳಿಸಿದವರು.

ಕನ್ನಡನಾಡು, ನುಡಿ, ನ್ಯಾಯ , ನೀತಿ, ಧರ್ಮ ಮತ್ತು ಕರ್ಮಗಳ ಬಗ್ಗೆ ಅಭಿಮಾನ ಗೌರವಗಳನ್ನು ಜನಸಾಮಾನ್ಯರಲ್ಲಿಯೂ ಕಾಣುವ ಮನೋಭಾವ ಅವರಲ್ಲಿತ್ತು . ಇದರಿಂದ ಕೆಲವು ಸಲ ಅವರ ಲೆಕ್ಕಾಚಾರ ಅಪಾಯವನ್ನು ಎದುರಿಸಬೇಕಾಯಿತು. ಅವರ ಬಾಳು ಗಾಳಿಯಲ್ಲಿ ಇಟ್ಟ ದೀಪದಂತಾಯಿತು. ಆದರೂ ತಮ್ಮ ಮನಸ್ಥೈರ್ಯದಂತೆ ನೈತಿಕ ಮಾರ್ಗಬಿಡದೆ ಬಾಳಿನಲ್ಲಿ ಮುಂದಡಿ ನಡೆದರು. ಆಕರ್ಷಣೆಯನ್ನು ನಿರಾಕರಿಸಿ ತಾವು ತಾವಾಗಿಯೇ ಬೆಳೆದು ಉಳಿದರು. ನ್ಯಾಯಾಂಗದಲ್ಲಿ ಒಳ್ಳೆ ಹೆಸರುಗಳಿಸಿದರೂ, ಅಲ್ಲಿಯೂ ಅಂಟಿಕೊಳ್ಳಲಿಲ್ಲ. ತಮ್ಮ ಕರ್ತವ್ಯ ಕೊನೆಗೊಂಡಂತೆ ಅಲ್ಲಿಂದಲೂ ಕಾಲು ತೆಗೆದರು. ಇವರ ಜೀವನ ನೀರಮೇಲಣ ಪದ್ಮಪತ್ರದಂತೆ ತಾವರೆ ಎಲೆ ನೀರಿನಲ್ಲೇ ಬೆಳೆದಿದ್ದರೂ ನೀರಿಗೆ ಅಂಟಿರುವುದಿಲ್ಲದ ಹಾಗೆ ಆರಾಧ್ಯರು ಎಂದು ಜನಸಾಮಾನ್ಯರು ಮಾತನಾಡುವುದನ್ನು ನಾನು ಕೇಳಿದ್ದೇನೆ.

ಜಿನ್ನಹಳ್ಳಿ ಗುರುಮಠವು ಆರಾಧ್ಯರ ಬಾಲ್ಯದಲ್ಲಿ ನಿರ್ಮಾಣಗೊಂಡಿತ್ತು. ಒಂದು ಶತಮಾನ ಉರುಳಿರುತ್ತದೆ. ಈಗ ಗುರುಮಠ ಶಿಥಿಲಗೊಂಡಿದೆ. ಅದು ಹೊಸರೂಪ ನಿರೀಕ್ಷಿಸುತ್ತಿದೆ. ಅದಕ್ಕವಕಾಶಕೊಡುವುದು ಭಗವಂತನ ಕೃಪೆಯಾಗಿದೆ. ಇದನ್ನು ಕರುಣಿಸಲೆಂದು ಪ್ರಾರ್ಥಿಸಿ ಕಾರ್ಯೋನ್ಮುಖರಾಗಬೇಕಿದೆ. ಸದಾ ನಾಲ್ಕಾರು ವಿದ್ಯಾರ್ಥಿಗಳು ತಮ್ಮ ಮುಂದಿನ ಭವಿಷ್ಯಕ್ಕಾಗಿ ಜಿನ್ನಹಳ್ಳಿ ಗುರುಮಠಕ್ಕೆ ಬಂದು ನೆಲೆಸಿ ತಮ್ಮ ಜೀವನದ ದಾರಿ ರೂಪಿಸಿಕೊಂಡು ಹೋಗುವುದು ರೂಢಿಯಾಗಿತ್ತು. ಸಂಪ್ರದಾಯವಾಗಿ ನಡೆದಿತ್ತು. ಅಂತಹ ವಿದ್ಯಾರ್ಥಿಗಳು, ಪೋಷಕರುಗಳು ಈಗಲೂ ದೊಡ್ಡಬುದ್ಧಿಯವರ ನೆನಪು ತರುತ್ತಾರೆ. ವಿದ್ಯಾರ್ಥಿಗಳಿಗೆ ದಿವಂಗತರು ವಿದ್ಯೆಯ ಜೊತೆಗೆ ಜ್ಯೋತಿಷ್ಯ ಹಾಗೂ ವ್ಯಾವಹಾರಿಕ ಬರವಣಿಗೆಯನ್ನು ತಿಳಿಸುತ್ತಿದ್ದರು. ಅವರು ಗ್ರಾಮೀಣ ಜೀವನಕ್ಕೆ ಮಾರ್ಗದರ್ಶಿಯಾಗಿದ್ದರು. ಬುದ್ಧಿಯವರು ಜೀವನ ಪರ್ಯಂತರವೂ ಚಟುವಟಿಕೆಯಿಂದ ಕೂಡಿ ಹಳ್ಳಿಯ ಸಾಂಸ್ಕೃತಿಕ ಜೀವನದಲ್ಲಿ ಭಾಗಿಯಾಗಿದ್ದರು. ಜಾತಿಬೇಧವಿಲ್ಲದೆ ವಿದ್ಯೆಯನ್ನು ಬೋಧಿಸುತ್ತಲಿದ್ದರು.

ದೊಡ್ಡಗುರುಗಳು ಸಂಗೀತಪ್ರಿಯರು, ವಯೋಲಿನ್ ವಾದಕರು. ಇವರು ಬೆಳಗಿನ ಜಾವದಲ್ಲಿ ಅಭ್ಯಾಸ ನಿರತರಾಗುತ್ತಿದ್ದರು. ಆರಾಧ್ಯರಿಗೆ ಪತ್ರಿಕೆ ಎಂದರೆ ಬಹಳ ಇಷ್ಟ. "ಮೈಸೂರು ಸಾಧ್ವಿ" ದಿನ ಪತ್ರಿಕೆಯ ಚಂದಾದಾರರಾಗಿ ಜೀವನ ಪರ್ಯಂತ ಓದಿದರು.

ಹಾಗೆಯೇ ಇವರಿಗೆ ಒಂದು ಚಟವಿತ್ತು. ಅದೆಂದರೆ, "ನಶ್ಯ" ಹಾಕುವುದು. ಮತ್ತಿತರ ಚಟಗಳಿಂದ ದೂರವಿದ್ದರು. ಕುದುರೆ ಸವಾರಿ ರೂಢಿಸಿಕೊಂಡು ಕುದುರೆಗಳನ್ನು ಸ್ವತಃ ಸಾಕಿದ್ದರು ಮತ್ತು ಪರಿಸರವಾದಿಗಳೂ ಆಗಿದ್ದರು.

ಆರಾಧ್ಯರು ಧಾರ್ಮಿಕ ಕೆಲಸಗಳಿಗೆ ಒತ್ತು ಕೊಟ್ಟವರು. ಹಂಪಾಪುರದ ಬಸ್‌ಸ್ಟ್ಯಾಂಡ್ ಮತ್ತು ಪೋಲೀಸ್ ಸ್ಟೇಷನ್ ನಡುವಿನ ಜಾಗದಲ್ಲಿ ಒಂದು ಅರಳೀಕಟ್ಟೆ ನಿರ್ಮಾಣಗೊಳಿಸಲು ಆಗ ಇದ್ದ ದಫೇದಾರ್ ಶ್ರೀ ನಾಗಪ್ಪನವರು ಇವರ ಜೊತೆಗೆ ಸಹಕಾರ ನೀಡಲಾಗಿ ಇಂದು ಬಸ್ಸಿಗೆ ಕಾಯುವವರಿಗೆ, ದಾರಿಹೋಕರಿಗೆ ದೇವರ ಭಾವನೆ ಮತ್ತು ನೆರಳಿನ ಅವಶ್ಯಕತೆ ದೊರಕಿ ಇಂದೂ ಸಹ ನೆನಪಿಸುವಂತಾಗಿದೆ. ಹಂಪಾಪುರದಲ್ಲಿ ಸಂತೆಕಟ್ಟಲು ಬಹಳ ಶ್ರಮವಹಿಸಿ ಜಿಲ್ಲಾಧಿಕಾರಿಗಳಾಗಿದ್ದ ಶ್ರೀಮಾನ್ ಅನಂತರಾಮನ್‌ರವರಲ್ಲಿ ಬಿನ್ನವಿಸಿಕೊಂಡು ಆದೇಶ ತರುವಲ್ಲಿ ಯಶಸ್ವಿಯಾದರು. ಇಂದೂ ಸಹ ಅದರ ಉಪಯೋಗ ಆ ಪ್ರದೇಶದ ಜನಸಾಮಾನ್ಯರುಗಳಿಗೆ ತಲುಪುತ್ತಲಿದೆ. ನಮ್ಮ ಊರಿನ ಪರಿಶಿಷ್ಟವರ್ಗಕ್ಕೆ ಸೇರಿದ ಬಡಕುಟುಂಬಗಳ ಯುವಕರಿಗಾಗಿ ಪಂಚಕಲ್ಯಾಣವನ್ನು ಜಿಲ್ಲಾಧಿಕಾರಿ ಅನಂತರಾಮನ್ ಅಧ್ಯಕ್ಷತೆಯಲ್ಲಿ ಶ್ರೀಯುತ ಆರಾಧ್ಯರು ಪಟೇಲ್ ಅಬ್ದುಲ್‌ಲತೀಫ್‌ಸಾಹೇಬರು ಮತ್ತು ಮಸ್ತಾನ್ ಸಾಹೇಬರುಗಳು ಸೇರಿ ಮಾಡಿಸಿರುತ್ತಾರೆ. ಇಂದಿಗೂ ಕರಿಗಳ ಬೇಚರಾಕ್ ಆದಾಗ ಕರಿಗಳದ ಶ್ರೀ ಬಸವೇಶ್ವರದೇವರನ್ನು ಹಾಲಿ ಮೈಸೂರು-ಮಾನಂದವಾಡಿ ರಸ್ತೆಯಲ್ಲಿ ನಾಲಾಬದಿಯಲ್ಲಿ ದೇವಸ್ಥಾನ ಕಟ್ಟಿಸಿ ಅದರ ಸ್ಥಾಪನೆ ಹಾಗೂ ನಿರ್ವಹಣೆಯನ್ನು ಮಾಡಿರುತ್ತಾರೆ. ಅದೇ ರೀತಿ ಸುತ್ತ ಮುತ್ತಣ ಗ್ರಾಮಗಳ ದೇವರ ದೇವಸ್ಥಾನದ ಆಗಮಿಕರಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಇಂತಹ ಧಾರ್ಮಿಕ ಕೆಲಸಗಳಲ್ಲಿ ಹೆಚ್ಚು ಆಸಕ್ತಿ ಮತ್ತು ಉತ್ಸಾಹಿಗಳಾಗಿದ್ದರು. ಕಪಿಲಾನದಿ ಮತ್ತು ನುಗುನದಿಗಳ ಸಂಗಮಕ್ಷೇತ್ರದ ಅಭಿವೃದ್ಧಿಗೆ ಅಂದು ಸಹಕರಿಸಿ ಶ್ರಮಿಸಿದವರಲ್ಲಿ ಇವರೂ ಒಬ್ಬರು ಎಂಬುದನ್ನು ಯಾರೂ ಮರೆಯುವಂತಿಲ್ಲ. ಇಂದು ಸಂಗಮಕ್ಷೇತ್ರವು ಅಭಿವೃದ್ಧಿಗೊಂಡು ಒಂದು ಯಾತ್ರಾಸ್ಥಳವಾಗಿ ಬೆಳೆದು ಎಲ್ಲರನ್ನು ಆಕರ್ಷಿಸುತ್ತಿದೆ. ಒಮ್ಮೆ ನೀವು ಹೋಗಿ ಬನ್ನಿ. ನಿಜಕ್ಕೂ ನೋಡುವ ಪುಣ್ಯ ಸ್ಥಳ. ಆರಾಧ್ಯರು ಒಬ್ಬ ಉತ್ತಮ ನಾಗರಿಕರಾಗಿ ತಮ್ಮ ಪ್ರದೇಶದ ಹಿತಚಿಂತಕರಾಗಿ ತಾಲ್ಲೂಕು, ಜಿಲ್ಲೆ ಹಾಗೂ ರಾಜ್ಯಮಟ್ಟದ ಅಧಿಕಾರಿಗಳು ಮತ್ತು ರಾಷ್ಟ್ರ ಹಾಗೂ ಮಂತ್ರಿ ಮಹೋದಯರುಗಳು ಆ ಪ್ರದೇಶಕ್ಕೆ ಬಂದಾಗ ಪ್ರೀತಿ ವಿಶ್ವಾಸದಿಂದ ಗೌರವಿಸಿ, ಹಾರ ಹಾಕಿ, ತುರಾಯಿ ಕೊಟ್ಟು, ಹಣ್ಣು ನೀಡುವ ಸಂಪ್ರದಾಯ ಇವರದು. ಅವರುಗಳಿಂದ ಆಗಬೇಕಾದ ಕೆಲಸಗಳಿದ್ದರೆ ಮನವಿಯನ್ನು ಸಲ್ಲಿಸಿ ನಂತರ ಹಲವಾರು ಬಾರಿ ಅವರ ಕಛೇರಿಗೆ ತಿರುಗಾಡಿ ಆ ಕೆಲಸವನ್ನು ಮಾಡಿಸುವುದು ಅವರ ಜಾಯಮಾನವಾಗಿತ್ತು.

ದೊಡ್ಡಆರಾಧ್ಯರು ಹಂಪಾಪುರದಲ್ಲಿ ಸರಕಾರಿ ಪಶುವೈದ್ಯಶಾಲೆಯನ್ನು ಮಂಜೂರು ಮಾಡಿಸಲು ಹೋರಾಡಿ ನಂತರ ಅದರ ಕಟ್ಟಡಕ್ಕಾಗಿ ಬಹಳ ಶ್ರಮಿಸಿ ಹಂಪಾಪುರದ ಶಿಥಿಲಗೊಂಡ ಛತ್ರದಲ್ಲಿ ಊರಿನ ಪ್ರಮುಖ ಹಿರಿಯರ ಸಹಕಾರದಿಂದ ಎಲ್ಲರ ಮನವೊಲಿಸಿ ಪಶುವೈದ್ಯ ಶಾಲೆಯನ್ನು ಸ್ಥಾಪಿಸಿದರು. ಅದು ಈಗಲೂ ಆ ಪ್ರದೇಶದ ಜನ ಜಾನುವಾರುಗಳಿಗೆ ವೈದ್ಯಕೀಯ ಸೇವೆ ನಡೆಸುತ್ತಿರುವುದನ್ನು ಕಾಣಬಹುದು. ಜಿನ್ನಹಳ್ಳಿ ಆರಾಧ್ಯರು ಎಲ್ಲ ಕೆಲಸಗಳಿಗೂ ಮುಂದಿರುತ್ತಿದ್ದರು. ಆ ಪ್ರದೇಶದ ಆಜುಬಾಜಿನ ಗ್ರಾಮಗಳ ಮುಖಂಡರು ಹಲವರು ಇವರ ಕೆಲಸಗಳನ್ನು ನೋಡಿದವರೆಲ್ಲರೂ ಇವರ ಮುಂದಾಳುತನವನ್ನು ಮೆಚ್ಚಿ, ಇವರಿಗೆ ತಮ್ಮ ಸಹಕಾರ ಹಸ್ತವನ್ನು ನೀಡಿದರು, ಜಿನ್ನಹಳ್ಳಿ ಶ್ರೀಮಾನ್ ಪ|| ಬಸಪ್ಪನವರು, ತಮ್ಮಡಿ ಪುಟ್ಟಪ್ಪನವರು, ಪುಟ್ಟಪ್ಪನವರು, ಕುಟ್ಟಪ್ಪನವರು, ಸಣ್ಣಪ್ಪನವರು, ಕೂಸಪ್ಪನವರು, ಶ್ಯಾ|| ನರಸಿಂಹಮೂರ್ತಿಗಳು, ರಾಘವೇಂದ್ರಶಾಸ್ತ್ರಿಗಳು, ಕೃಷ್ಣಮೂರ್ತಿಗಳು, ಯಜಮಾನ್ ತೋಪನಾಯ್ಕರು, ಗುಜ್ಜನಾಯ್ಕರು, ಚಿಕ್ಕನಾಯ್ಕರು, ಸಾಹುಕಾರ್ ಸೈಯದ್ ರಹೀಮ್ ಸಾಬ್, ಮಲೆ ಮಾದಯ್ಯನವರು, ದಾಖಲೆ ಗ್ರಾಮವಾದ ಮಲಾರದ ಹುಂಡಿ ಬಾಣಾಸುರಗೌಡರು, ಓದು ಚನ್ನೇಗೌಡರು, ಪುಟ್ಟಸೋಮಾಚಾರ್‌ರವರು, ಕಂಬೀಗೌಡರು, ಪುಟ್ಟೇಗೌಡರು, ಹಂಪಾಪುರದ ಛೇರ್ಮನ್ ಮುತ್ತಣ್ಣನವರು, ಶ್ಯಾ|| ಶಾಮರಾಯರು, ಚಿಕ್ಕಣ್ಣಶೆಟ್ಟರು, ಪ|| ಮರಿಗೌಡರು, ಗೋಸೇಗೌಡರು, ಮರಿಮುತ್ತೇಗೌಡರು, ಕೆಂಚೇಗೌಡರು, ಹೊಮ್ಮರಗಳ್ಳಿಯ ಹೆಚ್. ಪಿ. ಬಸಪ್ಪನವರು, ಪ|| ರಾಮಣ್ಣನವರು, ಸುಬ್ಬಪ್ಪನವರು, ಶ್ಯಾ|| ಎನ್. ಶ್ರೀನಿವಾಸಮೂರ್ತಿಗಳು, ಹೆಚ್. ಕೆ. ಕೆಂಗೇಗೌಡರು, ಹೆಚ್. ಕೆ. ತಿಮ್ಮೇಗೌಡರು, ಕೆಂಡಗಣ್ಣಪ್ಪನವರು, ಹೆಚ್. ಬಿ. ಚೆನ್ನಬಸಪ್ಪನವರು. ಮಾರ್ಚಹಳ್ಳಿಯ ಪ|| ಅಬ್ದುಲ್ ಲತೀಫರು, ಮಸ್ತಾನ್ ಸಾಹೇಬರು, ಸೈಯದ್ ಇಬ್ರಾಹಿಂ ಸಾಬರು, ಹತ್ವಾಳ ಪ|| ದೇವಣ್ಣ ಮತ್ತು ಸಂಗಮದ ತಮ್ಮಡಿ ಸಂಗಪ್ಪ ಮುಂತಾದವರು ಮುಖ್ಯರಾದವರು.

ದೊಡ್ಡಆರಾಧ್ಯರು ಜನಸಾಮಾನ್ಯರಿಗಾಗಿ, ನಾಡಿಗಾಗಿ, ಅನೇಕ ವಿಧದಲ್ಲಿ ಶ್ರಮಿಸಿ ಬಡತನದಲ್ಲಿಯೇ ಕೊನೆಯುಸಿರೆಳೆದರು. ಅದ್ಭುತ ಚೇತನಕ್ಕೆ ಇಹದ ಬಂಧನ ಕಳಚಿತ್ತು. ಅವರು ನಮ್ಮಲ್ಲಿ ಬಾಳಿ ಬದುಕಿ ತೋರಿಸಿದ ಮಾರ್ಗ ಮಾದರಿಯಾಗಿ ಇಂದು ಉಳಿದಿದೆ. ಆರಾಧ್ಯರ ಬದುಕು ನೆನಪಿನಲ್ಲಿ ಇಂದು ಬದುಕಿದೆ. ಅವರ ಭವ್ಯಬಾಳು ದಿವ್ಯಜ್ಯೋತಿಯಾಗಿ ಮಾರ್ಗ ತೋರುತ್ತಿದೆ. ಆರಾಧ್ಯರು ಇತರರಂಥಲ್ಲ. ಅವರು ಎಲ್ಲವೂ ಆಗಿದ್ದರು, ಯಾವುದೂ ಆಗಿರಲಿಲ್ಲ. ಸಾರ್ಥಕ ಜೀವನ ನಡೆಸಿದ ಮಹಾನ್ ವ್ಯಕ್ತಿ ರಾಜಕೀಯದಲ್ಲಿ ಓಡಿಯಾಡಿದ್ದರೂ ಸಹ ಹೇಸಿಗೆ ತುಳಿದವರಲ್ಲ. ದೊಡ್ಡಬುದ್ಧಿಯವರು ಮುಕ್ತರು. ಸುಖ ದುಃಖಗಳನ್ನು ಸಮನಾಗಿ ಜೀವನದಲ್ಲಿ ಸ್ವೀಕರಿಸಿದವರು. ತನ್ನಂತೆ ಪರರು ಎಂದು ಅರಿತವರು. ತಮಗೆ ಬರುವ ಕಷ್ಟ ಸುಖಗಳನ್ನು ಜನ್ಮಾಂತರದ ಕರ್ಮ ಕಳೆಯಿತೆಂದು ತಿಳಿದು ಸುಖಿಸುವವರಾಗಿದ್ದರು. ಇದು ಗೋಜಲಿನ ಪ್ರಪಂಚವಾದರೂ ನಿಷ್ಠೆ, ನಿಯತ್ತಿಗೆ ಸದಾ ಕಿಮ್ಮತ್ತು ಇರುತ್ತದೆ ಎಂದು ನಂಬಿ ನುಡಿದವರು. ಇವರ ಬದುಕು ಬಿಸಿಲು - ನೆರಳಾಟ ಇದ್ದಂತೆ, ಬಡತನ, ಸಿರಿತನ ಶಾಶ್ವತವಲ್ಲ ಎಂದು ತಿಳಿದವರಾಗಿದ್ದರು. ಇವರ ಜೀವನ ಕಷ್ಟತಮವಾದರೂ, ಆನಂದದ ಉತ್ಸಾಹದಿಂದ ಬಾಳಿದ ಮಹಾನ್ ಪುರುಷರೆಂದು ತೋರಿಸಿದವರು. ಇಂದಿನ ನಾಗರಿಕರ ನಯ, ನಾಜೂಕುಗಳು ಅವರಲ್ಲಿ

ಕಾಣುತ್ತಿರಲಿಲ್ಲ. ಅವರ ಮನೋಧರ್ಮ ಮನುಷ್ಯನನ್ನು ಕಂಡೊಡನೆ ಇವ ಸಭ್ಯನೆ, ಅಸಭ್ಯನೆ, ಸ್ನೇಹ ಪಾತ್ರನೆ, ಕುತಂತ್ರಿಯೆ, ನಿಃಸ್ವಾರ್ಥಿಯೆ, ಪ್ರಾಮಾಣಿಕನೆ, ಅಪ್ರಾಮಾಣಿಕನೆ, ಪರೋಪಕಾರಿಯೆ, ಸೇವಾಮನೋಭಾವದವನೆ ಎನ್ನುವುದು. ಇದು ಮುಖ್ಯ. ಅನಂತರ ಅವರ ಸಖ್ಯ ಎಂದು ಆಗಾಗ ಅನುಭವದ ಮಾತನಾಡುತ್ತಿದ್ದರು. ಇವರ ಮನೋಧರ್ಮವು ಒಮ್ಮೊಮ್ಮೆ ತಮ್ಮಲ್ಲಿನ ಅಸಂಬದ್ಧತೆಯನ್ನು ಅರಿತಾಗ ಮೇಲರಿಮೆಯನ್ನು, ಪ್ರತಿಷ್ಠೆಯನ್ನು ತೋರಿಸದೆ, ಇದು ಸೃಷ್ಟಿನಿಯಮವೆಂದು ಭಾವಿಸಿ ತೃಪ್ತರಾಗುವ ಮನೋಧರ್ಮ ನನ್ನದೆಂದು ವ್ಯಕ್ತಪಡಿಸುವ ಸ್ವಭಾವದವರಾಗಿದ್ದರು.

ಶ್ರೀಯುತ ಆರಾಧ್ಯರು ಜಿನ್ನಹಳ್ಳಿ ಗ್ರಾಮದ ಛೇರ್ಮನ್ನರಾಗಿ ಊರಿನ ಅಭಿವೃದ್ಧಿಯನ್ನು ಬಯಸಿದವರು. ಜಿನ್ನಹಳ್ಳಿ ಸರಕಾರಿ ಪ್ರಾಥಮಿಕ ಶಾಲೆಯ ಮಂಜೂರಾತಿಗೆ ಶ್ರಮಿಸಿ ಊರಿನ ಮುಖಂಡರೊಡಗೂಡಿ ಒಂದು ಶಾಲಾ ಕಟ್ಟಡವನ್ನು ಗ್ರಾಮದೇವತೆಯ ಗುಡಿಯ ಮುಂಭಾಗದಲ್ಲಿ ನಿರ್ಮಿಸಿದರು. ಗ್ರಾಮದೇವತೆಯ ವಾರ್ಷಿಕ ಹಬ್ಬ ಇವರ ಮಾರ್ಗದರ್ಶನದಲ್ಲಿ ಸಾಗುತ್ತಿತ್ತು. ಹಾಗೆಯೇ ಈಗಲೂ ಗ್ರಾಮಸ್ಥರು ಅದೇ ಪದ್ಧತಿಯನ್ನು ಅವರ ಮನೆತನದವರಲ್ಲಿ ಗೌರವ ತೋರಿಸಿ, ಮಾರ್ಗದರ್ಶನ ಪಡೆಯುವ ಪದ್ಧತಿ ಜೀವಂತವಾಗಿದೆ. ಇವರು ಕಾಲು ನೋವಾಗಿ ಸುಮಾರು ಹತ್ತು ವರ್ಷಗಳು ತಿರುಗಾಡಲು ಸಾಧ್ಯವಿಲ್ಲದೆ, ಮತ್ತಾವ ಕಾಯಿಲೆ ಇಲ್ಲದೆ ಜಿನ್ನಹಳ್ಳಿಯಲ್ಲಿ ವೃದ್ಧದಂಪತಿಗಳಿಬ್ಬರೆ ಜೀವನ ನಡೆಸಿದರೆಂದರೆ ನಿಮಗೆ ಅವರ ಜೀವನ ಮಾರ್ಗದ ಬಗ್ಗೆ ಒಂದು ಸ್ಪಷ್ಟ ಚಿತ್ರಣ ಮತ್ತು ನಂಬಿಕೆ ಬರುತ್ತದೆ. ಇಂತಹ ಸ್ಥಿತಿಯಲ್ಲಿ ಹಾಸಿಗೆಯಲ್ಲಿ ಮಲಗಿದ್ದಾಗಲೂ ಊರಿನವರೆಲ್ಲರೊಡನೆ ವಿಶ್ವಾಸದ ಬಾಳು ನಡೆಸಿ ಎಲ್ಲರ ವಿಶ್ವಾಸ ಗಳಿಸಿದವರು. ಸುಗಮ ಜೀವನ ನಡೆಸಿದವರು.

ವೇ|| ಬ್ರಂ|| ಶ್ರೀ ಜಿನ್ನಹಳ್ಳಿ ಕುಮಾರಾರಾಧ್ಯರು ದಿನಾಂಕ 21-06-1885ರಲ್ಲಿ ಜನಿಸಿ 76 ವರ್ಷದ ಜೀವಿತ ಅವಧಿಯಲ್ಲಿ ತಮಗೆ ಸರಿ ಎನಿಸಿದ ಮಾರ್ಗದಲ್ಲಿ ಉತ್ತಮ ಜೀವನ ನಡೆಸಿ ದಿನಾಂಕ 17-02-1961ರಲ್ಲಿ ಮೈಸೂರು ನಗರದಲ್ಲಿ ಶಿವಸಾಯುಜ್ಯ ಕಂಡರು. ಇವರು ಇಹಲೋಕ ತ್ಯಜಿಸಿ 45 ವರ್ಷಗಳು ಕಳೆದಿರುತ್ತವೆ. ಆದಾಗ್ಯೂ ಇವರ ನೆನಪು ಉಳಿದಿದೆ. ಇದರಿಂದ ಇವರ ಬದುಕು ಮತ್ತು ವ್ಯಕ್ತಿತ್ವ ಎಂತಹದೆಂಬುದು ವೇದ್ಯವಾಗುತ್ತದೆ. ಇವರು ನಮ್ಮ ಮನೆಯ ನಂದಾದೀಪವಾಗಿ ಬೆಳಗುತ್ತಲಿದ್ದಾರೆ. ಶ್ರೀಯುತ ಆರಾಧ್ಯರ ಬಗ್ಗೆ ಈಗಲೂ ಜನ ಸಾಮಾನ್ಯರು ದೊಡ್ಡಬುದ್ಧಿಯವರು ದೇವರಂತಹವರು ಎಂದು ನೆನೆಸುವುದನ್ನು ನೀವು ಕೇಳಬಹುದು. ಇಂತಹ ಮಹಾನ್ ವ್ಯಕ್ತಿಯ ಬಗ್ಗೆ ಆರಾಧ್ಯ ಧರ್ಮಸಭಾ ಟ್ರಸ್ಟ್(ರಿ.) ಮೈಸೂರು, ಇವರ 121ನೆ ವರ್ಷದ ನೆನಪನ್ನು ಆಚರಿಸಿ ಗೌರವಿಸುತ್ತಿದೆ. ಇದರಿಂದ ದಿವಂಗತ ದೊಡ್ಡಗುರುಗಳ ಆತ್ಮಕ್ಕೆ ಶಾಂತಿ ಲಭಿಸುವುದಲ್ಲದೆ, ಅದೇ ಅವರ ಬದುಕು. ಅದೇ ನಮ್ಮ ಬದುಕು ಎಂಬುದನ್ನು ಶ್ರೀಮದ್‌ಭಗವದ್ಗೀತೆಯ ಸಾಲುಗಳು ನೆನಪಿಸುತ್ತವೆ.

*ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |*
*ಮಾ ಕರ್ಮ ಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ||*

ಓ ತತ್‌ಸತ್ ||

* * *

# ಶಿವಾದ್ವೈತಸಿದ್ಧಾಂತ

*ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ*
*ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ||*
*ಪಾರಮೇಶ್ವರಾಗಮ ೧-೪೨*

ವೀರಶೈವ ಮತ ಬಹಳ ಪುರಾತನವಾದುದು. ಇದಕ್ಕೆ ಆರು ಸಾವಿರ ವರ್ಷಗಳ ಇತಿಹಾಸವಿದೆ. ಇದಕ್ಕೆ ಎರಡು ಮಾತಿಲ್ಲ.

ಶಿವಾಗಮಗಳಲ್ಲಿ ಅನಾದಿ ವೀರಶೈವ, ಆದಿ ವೀರಶೈವ, ಮಹಾಶೈವ, ಅನುಶೈವ, ಅವಾಂತರ ಶೈವ, ಯೋಗಶೈವ, ವೀರಶೈವ ಎಂದು ಸಪ್ತ ಶೈವಗಳನ್ನು ನಿರೂಪಿಸಲಾಗಿದೆ.

ವೀರಶೈವದ ಲಕ್ಷಣಗಳನ್ನು ಶ್ರೀ ನಿಜಗುಣಾರಾಧ್ಯ ಶಿವಯೋಗಿಗಳು ಹೀಗೆ ಹೇಳಿದ್ದಾರೆ:

ವೀರಶೈವ ಚರಮುಶರೀರಿ ಸರ್ವೋತ್ತಮುಪ್ರತಿ, ಲೋಕಪಾವನನು. ಅಲ್ಪಕ್ರಿಯೆಯಿಂದ ಅನಂತ ಫಲವಂ ಪಡೆವವನು. ಅಶುಚಿಭಾವನೆಯಂ ತೊರೆದು ಸದಾ ಲಿಂಗಸಂಬಂಧಿಯಾಗಿರುವವನು. ಲಿಂಗಲೋಪವಾದಾಗ ಪ್ರಾಣತ್ಯಾಗವೇ ಸರಿಯೆನ್ನುವವನು. ಗುರುನಿಂದೆ ಶಿವನಿಂದೆ ಶಿವಧರ್ಮನಿಂದೆಗಳನ್ನು ಸೈರಿಸದವನು. ಗುರುಲಿಂಗ ಜಂಗಮರಿಗೆ ತನುಮನಧನವನ್ನು ಅರ್ಪಿಸುವವನು. ಅದ್ವೈತ ಭಾವನೆಯುಳ್ಳವನು, ಪೂಜ್ಯನು ಎಂದು ಹೇಳಿದ್ದಾರೆ.

ಯಾವುದೇ ಒಂದು ಮತಕ್ಕೆ ತನ್ನದೇ ಆದ ಒಂದು ಮತಧರ್ಮವಿರುತ್ತದೆ. ಆ ಮತಕ್ಕೆ ಒಂದು ತತ್ತ್ವ ಸಿದ್ಧಾಂತವಿರುತ್ತದೆ.

ಭಾರತದಲ್ಲಿ ನಾವು ಕಾಣುವ ಮತಸಿದ್ಧಾಂತವೆಂದರೆ ದ್ವೈತ ಸಿದ್ಧಾಂತ, ಅದ್ವೈತ ಸಿದ್ಧಾಂತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತ.

ದ್ವೈತ ಸಿದ್ಧಾಂತವೆಂದರೆ, ಬ್ರಹ್ಮ ಮತ್ತು ಜೀವ ಬೇರೆ ಬೇರೆ ಎಂದು ಪ್ರತಿಪಾದಿಸುವುದು. ಅದ್ವೈತ ಸಿದ್ಧಾಂತವೆಂದರೆ, ಬ್ರಹ್ಮ ಮತ್ತು ಜೀವ ಬೇರೆ ಬೇರೆಯಲ್ಲ. ಎರಡೂ ಒಂದೇ



- ಬಿ. ಎಂ. ಎಂ. ಆರಾಧ್ಯ
ಎಂ. ಎ., ಎಲ್‌ಎಲ್.ಬಿ.,
ವಕೀಲರು ಮತ್ತು ಅಧ್ಯಕ್ಷರು,
ಆರಾಧ್ಯ ವಿವಿಧೋದ್ದೇಶ ಸಂಘ
ರಿ. ಬೆಂಗಳೂರು.
ದೂ. 26654628

ಎಂದು ಪ್ರತಿಪಾದಿಸುವುದು. ವೀರಶೈವ ಧರ್ಮದಲ್ಲಿ ಶಿವ-ಜೀವದ ಏಕತೆಯನ್ನು ಪ್ರತಿಪಾದಿಸುವುದಕ್ಕೆ ಶಿವಾದ್ವೈತ ಸಿದ್ಧಾಂತವೆನ್ನುತ್ತಾರೆ.

*"ಯಥಾಗ್ನೇಃಕ್ಷುದ್ರಾವಿಸ್ಫುಲಿಂಗಾಃ"*

ಎಂದರೆ ಅಗ್ನಿಯಿಂದ ಸಣ್ಣ ಸಣ್ಣ ಕಿಡಿಗಳು ಹೊರಹೊಮ್ಮುವಂತೆ ಶಿವನಿಂದ ಜೀವಿಗಳು ಜನಿಸುತ್ತಾರೆ. ಇದರಿಂದ ಜೀವಿಯು ಶಿವನ ಅಂಶವಾಗಿದ್ದಾನೆ ಎಂಬುದು ಸತ್ಯ.

*"ನದೀನಾಂ ಸಾಗರೋಗತಿಃ"* ಎಂದರೆ, ವಿಶ್ವದ ನದಿಗಳೆಲ್ಲಾ ಸಾಗರಕ್ಕೆ ಹೋಗಿ ಸೇರುತ್ತವೆ. ಆದರೆ ಆ ನದಿಗಳು ಸಾಗರದಲ್ಲಿ ಲೀನವಾಗಿ ತಮ್ಮ ಹೆಸರುಗಳನ್ನು ಕಳೆದುಕೊಳ್ಳುತ್ತವೆ. ಹಾಗೆಯೇ ಜೀವಿಗಳು ತಮ್ಮ ನಾಮ ರೂಪಗಳನ್ನು ಕಳೆದುಕೊಂಡು ಶಿವನಲ್ಲಿ ಲೀನವಾಗುತ್ತವೆ ಎಂದು ಶ್ರುತಿಗಳು ಹೇಳುತ್ತವೆ.

*"ಜಲೇ ಜಲಮಿವವ್ಯಸ್ತಾಂ ವಗ್ನೌ ವಹ್ನಿ ರಿವಾರ್ಪಿತಂ"*

ಜಲದಲ್ಲಿ ಜಲವು ಬೆರೆವಂತೆ. ಅಗ್ನಿಯಲ್ಲಿ ಅಗ್ನಿಯು ಬೆರೆತಂತೆ. ಶಿವನಲ್ಲಿ ಜೀವನು ಬೆರೆಯುವನು ಎಂದು ಜಗದ್ಗುರು ರೇಣುಕಾಚಾರ್ಯರು ಹೇಳಿದ್ದಾರೆ.

ವೀರಶೈವಸಿದ್ಧಾಂತವನ್ನು ಶಿವಾದ್ವೈತಸಿದ್ಧಾಂತ, ಶಕ್ತಿವಿಶಿಷ್ಟಾದ್ವೈತಸಿದ್ಧಾಂತ, ವಿಶೇಷಾದ್ವೈತ, ದ್ವೈತಾದ್ವೈತ, ಅತಿವರ್ಣಾಶ್ರಮಧರ್ಮ, ಷಟ್‌ಸ್ಥಲಧರ್ಮ ಎಂದು ಅನೇಕ ಬಗೆಯಾಗಿ ಕರೆಯುತ್ತಾರೆ.

ವಿಶ್ವದ ಎಲ್ಲ ಮತಗಳ ಸಿದ್ಧಾಂತಗಳೂ ಮುಖ್ಯವಾಗಿ ದೇವರು, ಜೀವಿಪ್ರಕೃತಿ ಇವುಗಳ, ನಡುವಿನ ಸಂಬಂಧವನ್ನು ನಿರೂಪಿಸುತ್ತವೆ.

ಭೂಮಿಯಲ್ಲಿ ಕಲ್ಲು ಮಣ್ಣಿನೊಳಗೆ ಅಡಗಿರುವ ಬಂಗಾರವನ್ನು ಅಗೆದು ತೆಗೆದು ಕಲ್ಲು ಮಣ್ಣುಗಳಿಂದ ಬೇರ್ಪಡಿಸಿ, ಕಾಯಿಸಿ, ಕರಗಿಸಿ, ಬಡಿದು, ಚಚ್ಚಿ, ಉಜ್ಜಿ ಬೇಕಾದ ಆಕಾರದ ಒಡವೆಗಳನ್ನು ಮಾಡುವಂತೆ ಮಾನವ ಜೀವಿಯನ್ನು ಎಚ್ಚರಿಸಿ ಸಂಸ್ಕರಿಸಿ ಮೋಕ್ಷಾಸಾಧನೆಯತ್ತ ಕೈಹಿಡಿದು ನಡೆಸುವುದೇ ಶೈವಸಿದ್ಧಾಂತ. ಎಲ್ಲ ಮತಗಳ ಸಿದ್ಧಾಂತವೂ ಅದೇ ಆಗಿದೆ.

*"ಸದ್ಯೋಜಾತಾತ್ತಥಾ ಭೂಮಿರ್ವಾಮದೇವಾದ್ಭವೇ ಜಲಂ*
*ಅಘೋರಾದ್ವಹ್ನಿ ರಿತ್ಯುಕ್ತಾ ಸ್ತತ್ಪುರುಷಾದ್ವಾಯುರುಚ್ಯತೇ ||*
*ಈಶಾನಾದ್ಗಗನಾಕಾರಂ ಪಂಚಬ್ರಹ್ಮ ಮಯಂ ಜಗತ್*
*ಭೂತಪಂಚಮಯಂ ಸರ್ವಂ ಶಿವವಕ್ತ್ರ ಸಮುದ್ಭವಂ ||*

ಶಿವನ ಪಂಚಮುಖಗಳಿಂದ ಭೂಮಿ, ನೀರು, ಅಗ್ನಿ, ವಾಯು, ಆಕಾಶ ಎಂಬ ಪಂಚಭೂತಗಳು ಉತ್ಪತ್ತಿಯಾಗುತ್ತವೆ. ಈ ಪಂಚಭೂತಗಳಿಂದ ಜೀವಿಯು ಸೃಷ್ಟಿಸಲ್ಪಡುತ್ತಾನೆ. ಆದ್ದರಿಂದ ಶಿವ-ಜೀವಿಗಳು ಬೇರೆ ಬೇರೆಯಲ್ಲ. ಒಂದೇ ಎಂದು ದೃಢಪಡಿಸುತ್ತದೆ.

ಜೀವದಲ್ಲಿ ಜಡತ್ವವಿರುತ್ತದೆ. ಮಲತ್ರಯಗಳಿಂದ ಕಲುಷಿತನಾಗಿರುವವನು.

*"ಆಣವಂಗರ್ಭಸಂಬಂಧಮಣುರೂಪಂ ವ್ಯವಸ್ಥಿತಂ*
*ಮಾಯಕಂ ಜಾತಿಬೇಧಂ ಚ ಮೋಹ ಇತ್ಯಭಿಧೀಯತೇ ||*
*ಕಾರ್ಮಿಕಂ ದ್ರವ್ಯಸಂಬಂಧಮೀಷಣತ್ರಯಸಂಯುತಂ*
*ಇದಂ ಮಲತ್ರಯಂ ದೋಷಂ ಗುರುಶ್ಚೈವ ವಿಮೋಚಯೇತ್ ||*

ತಾಯಿ, ತಂದೆ, ಹೆಂಡತಿ, ಮಕ್ಕಳು, ಬಂಧು ಬಳಗವೆಂಬ ದುರಭಿಮಾನವನ್ನು ಹೊಂದಿರುವುದು ಆಣವಮಲ, ಜಾತಿಕುಲ, ಗೋತ್ರ, ಮೇಲು ಕೀಳೆಂಬ ಭಾವನೆಗಳಿಂದ ಕಲುಷಿತವಾಗಿರುವುದು ಮಾಯಾಮಲ. ಹಣ, ಸಂಪತ್ತು, ಆಸ್ತಿ ನನ್ನದು ತನ್ನದು ಎಂಬ ದುರಭಿಮಾನದಿಂದ ಸುತ್ತುವರಿಯಲ್ಪಟ್ಟಿರುವುದು ಕಾರ್ಮಿಕಮಲ.

ಈ ಮಲತ್ರಯುಗಳು ಜಡಜೀವನವನ್ನು ಆಶ್ರಯಿಸಿರುವ ತನಕ ಜೀವಿಯು ಶಿವಾನುಭವವನ್ನು ಪಡೆದು ಶಿವನಾಗಲಾರನು. ಗುರುಕರುಣೆಯಿಂದ ಶಿವದೀಕ್ಷೆ ಪಡೆದು ಈ ಮಲತ್ರಯಗಳನ್ನು ತೊಡೆದುಹಾಕಿ ಮುಕ್ತನಾದರೆ ಅವನು ಶಿವನಲ್ಲಿ ಸೇರುತ್ತಾನೆ. ಅವನೇ ಶಿವನಾಗುತ್ತಾನೆ ಎಂದು ಜಗದ್ಗುರು ರೇಣುಕಾಚಾರ್ಯರು ಹೇಳಿದ್ದಾರೆ.

ಪರಮೇಶ್ವರನಿಂದ ನಿರ್ಮಿತವಾದ ಜಗತ್ತು ಶಾಶ್ವತ ಮತ್ತು ಪರಿವರ್ತನಾತ್ಮಕವಾದದ್ದು. ಜಗತ್ತು ಸತ್ಯ, ಪರಲೋಕದಂತೆ.

*"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ*
*ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ*
*ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ*
*ಕೂಡಲಸಂಗಮದೇವಾ."*

*- ಬಸವಣ್ಣನವರ ವಚನ.*

ಶಿವನೇ ಜಗತ್ತಿಗೆ ಕಾರಣನು. ತಾನು ಅವನ ಅಂಶಮಾತ್ರವೆಂದು ತಿಳಿದು ಸಂಸಾರಿಯಾಗಿ ಗುರು, ಲಿಂಗ, ಜಂಗಮರಿಗೆ ದಾಸೋಹ ಮಾಡಿ ಜೀವನ ನಡೆಸಿದರೆ ದುಃಖ ಪ್ರಾಪ್ತಿಯಾಗದೆ ಜೀವನ ಸುಖಮಯವಾಗುವುದು.

ಎಣ್ಣೆ ಕುಡುಗೋಲುಗಳ ಸಹಾಯದಿಂದ ಕೈ ಅಂಟಾಗದಂತೆ ಹಲಸಿನ ಹಣ್ಣನ್ನು ಬಿಡಿಸುವಂತೆ ಸಂಸಾರದಲ್ಲಿ ಅಹಂಕಾರವೆಂಬ ಮುಳ್ಳು ಮಮಕಾರವೆಂಬ ಅಂಟುಗಳನ್ನು ನಿವಾರಿಸಿಕೊಂಡು ಬಾಳಿದರೆ ಶಿವನು ಮೆಚ್ಚುವನು. ಜೀವನು ಶಿವನಲ್ಲಿ ಒಂದಾಗುವನು.

ಜೀವಿಯ ದೇಹ ಪವಿತ್ರವಾದುದು. ದೇವಾಲಯರೂಪವಾದುದು. ಶಿವನ ನೆಲೆ ಏನುಎಂಬುದೇ ಶಿವಾದ್ವೈತಸಿದ್ಧಾಂತ. ಜೀವ ಮತ್ತು ಶಿವ ಬೇರೆ ಬೇರೆಯಲ್ಲ. ಶಿವನಲ್ಲಿ ಜೀವನು. ಜೀವನಲ್ಲಿ ಶಿವನು ಅಡಗಿರುವರು ಎಂಬುದು ಸತ್ಯ.

ಸೂರ್ಯನ ಕಿರಣಗಳು ಸಂಜೆಯಲ್ಲಿ ಸೂರ್ಯನಲ್ಲಿಯೇ ಲೀನವಾಗುತ್ತವೆ. ಹಾಗೆಯೇ ಜೀವಿಗಳೆಲ್ಲರೂ ಶಿವನಲ್ಲಿ ಲೀನವಾಗುವರು. ಶಿವ ಬೇರೆ ಅಲ್ಲ. ಜೀವ ಬೇರೆ ಅಲ್ಲ ಎಂಬುದೇ ಶಿವಾದ್ವೈತಸಿದ್ಧಾಂತ.

ಇಂತಹ ಜೀವನ್ಮುಕ್ತಿಗೆ ವೀರಶೈವಪರಿಭಾಷೆಯಲ್ಲಿ ಲಿಂಗಾಂಗಸಾಮರಸ್ಯ ಎನ್ನುವುದುಂಟು.

ಜೀವನ್ಮುಕ್ತಿಗೆ ವೀರಶೈವಧರ್ಮದಲ್ಲಿ ಷಟ್‌ಸ್ಥಲ, ಅಷ್ಟಾವರಣ ಮತ್ತು ಪಂಚಾಚಾರಗಳೇ ದಾರಿ. ಇವುಗಳ ಸಾಧನೆಯಿಂದ ಜೀವನು ಶಿವನಲ್ಲಿ ಲೀನವಾಗುತ್ತಾನೆ. ಇದೇ ಶಿವಾದ್ವೈತ ಸಿದ್ಧಾಂತ.

***

## ಮಾತೃದೇವೋಭವ

ಇದು ಉಪನಿಷತ್ ವಾಕ್ಯ, ಘೋಷಣೆ, ಸಂದೇಶ, ಸುವಾರ್ತೆ ಮತ್ತು ಅದ್ಭುತ ನುಡಿ.

'ಮಾತೃ' ಎಂದರೆ, ನಿರ್ಮಾತೃ. ಅಂದರೆ ಶರೀರವನ್ನು ನೀಡಿದ ತಾಯಿ. ಈ ತಾಯಿ ತನ್ನ ಗರ್ಭದಲ್ಲಿ ಒಂಬತ್ತು ತಿಂಗಳುಗಳು ಪೋಷಿಸಿ, ನಿರ್ಮಿಸಿ, ನಮ್ಮನ್ನು ಈ ಜಗಕ್ಕೆ ಕೊಡುಗೆಯಾಗಿ ನೀಡಿದ ಮಾಹಾಮಾತೆ. ಈ ತನುವೆಂಬ ಶರೀರದ ಮನೆಯನ್ನು ನಿಜಕ್ಕೂ ಸುಂದರವಾಗಿ ಕಟ್ಟಿಕೊಟ್ಟ ಮಹಾಶಿಲ್ಪಿ ತಾಯಿದೇವರು. ಈಕೆಯನ್ನು ಎಷ್ಟು ಪೂಜಿಸಿದರೂ ಕಡಮೆಯೇ, ಎಷ್ಟು ಗೌರವಿಸಿದರೂ ಸಾಲದು. ಈ ತಾಯಿಯ ಋಣವು ಮಹತ್ತರವಾದುದು. ಈ ನಮ್ಮ ಆತ್ಮ ತಾಯಿಯ ಸಹಾಯದಿಂದ ಬೆಳಕನ್ನು ಅಂದರೆ ಜ್ಞಾನವನ್ನು ಕಾಣಲು ಹಂಬಲಿಸುತ್ತದೆ. 'ಅಮೃತಸ್ಯ ಪುತ್ರಾಃ'- ಎಂದು ಸುಭಾಷಿತ ಹೀಗೆ ಸೂಚಿಸುತ್ತದೆ. ಭೂಮಿಯ ಮೇಲೆ ಬದುಕುವವರು ಅಮೃತ ಸಮಾನರು. ಇದಕ್ಕೆ ತಾಯಿ ಮೂಲ ಕಾರಣ. ಇದನ್ನು ಸ್ಮರಿಸು ಮನವೇ ಎಂದಿದ್ದಾರೆ ಜ್ಞಾನಿಗಳು.

## ಉನ್ನತಿ

ಔನ್ನತ್ಯ ಸಾಧಿಸಬೇಕಾದ್ದಲ್ಲಿ ಅತ್ಯಂತ ಪರಿಶ್ರಮ ಪಡಬೇಕು. ಶ್ರದ್ಧಾಪೂರ್ವಕವಾಗಿ ಪ್ರಯತ್ನಪಡಬೇಕು. ಸತ್ಯ, ನ್ಯಾಯ, ಧರ್ಮ, ಸಚ್ಚಾರಿತ್ರ್ಯದ ವ್ರತ ಪಾಲಿಸಬೇಕು. ತಂದೆ, ತಾಯಿ, ಗುರು-ಹಿರಿಯರ ಅನುಭವದ ಮಾರ್ಗದರ್ಶನ ಪಡೆದು ಅದನ್ನು ಚಾಚು ತಪ್ಪದಂತೆ ಪರಿಪಾಲಿಸಬೇಕು. ಇದು ನಿಜವಾಗಿಯೂ ತುಂಬಾ ಕಠಿಣ. ಇಂಥ ಕಷ್ಟ ಸಾಧ್ಯವಾದ ಸತ್ಯ, ನ್ಯಾಯಪೂರ್ಣ ಮಾರ್ಗಾವಲಂಬನದ ಬದುಕು ಸಾರ್ಥಕವಾಗುತ್ತದೆ. ನಮ್ಮ ಜೀವಿತದಲ್ಲಿ ಔನ್ನತ್ಯ ಸಾಧಿಸಲು ಪಣತೊಟ್ಟು ಪ್ರಾಮಾಣಿಕವಾಗಿ ಶ್ರದ್ಧಾಪೂರ್ಣ ಪರಿಶ್ರಮದಿಂದ ಗುರಿ ಸಾಧಿಸಬೇಕೇ ಹೊರತು ಅಪಮಾರ್ಗ ತುಳಿಯಬಾರದು.

# ಉತ್ತಮಮಾನವನ ಲಕ್ಷಣಗಳು

ಕುಟುಂಬದಲ್ಲಿ, ಸಮಾಜದಲ್ಲಿ ಮಾನವಸಂಬಂಧಗಳಲ್ಲಿ ಬಿರುಕು ಬರದೆ ಇರಲು, ಬಂದಿರುವ ಬಿರುಕುಗಳು ದೊಡ್ಡದಾಗದೆ ಇರಲು …………

## ಅನುಸರಿಸಬೇಕಾದ ಮಾರ್ಗೋಪಾಯಗಳು

- ಸಮಾಜದಲ್ಲಿ ನಾನೇ ದೊಡ್ಡವನು, ನಾನೇ ಉತ್ತಮನಾದವನು ಎನ್ನುವ ಅಹಂಕಾರವನ್ನು ಬಿಟ್ಟು ಬಿಡಿ.
- ಅರ್ಥವಿಲ್ಲದೆ, ಮುಂದೆ ಬರುಫ ಪರಿಣಾಮವನ್ನು ಅರಿಯದೆ ಮಾತಾಡುವುದನ್ನು ನಿಲ್ಲಿಸಿ.
- ಯಾವ ವಿಷಯವನ್ನು, ಸಮಸ್ಯೆಗಳನ್ನು ನಾಜೂಕಾಗಿ ಎದುರಿಸಿ.
- ಕೆಲವು ಸಮಯಗಳಲ್ಲಿ ಕೆಲವು ಸಂಕಟಗಳನ್ನು ಅನುಭವಿಸಲೇಬೇಕು ಎಂದು ಅರ್ಥೈಸಿಕೊಳ್ಳಿ.
- ನೀವು ಹೇಳಿದ್ದೇ ಸರಿ, ಮಾಡಿದ್ದೇ ಸರಿ ಎಂದು ವಾದ ಮಾಡಬೇಡಿ.
- ಸಂಕುಚಿತಮನೋಭಾವವನ್ನು ಹೋಗಲಾಡಿಸಿಕೊಳ್ಳಿ.
- ಸತ್ಯ ಯಾವುದು, ಮಿಥ್ಯ ಯಾವುದು ಎಂದು ವಿಚಾರಿಸದೆ ಇಲ್ಲಿ ಕೇಳಿದ್ದನ್ನು ಅಲ್ಲಿ ಹೇಳುವುದನ್ನು, ಅಲ್ಲಿ ಕೇಳಿದ್ದನ್ನು ಇಲ್ಲಿ ಹೇಳುವುದನ್ನು ಮಾಡಬೇಡಿ.
- ಮತ್ತೊಬ್ಬರಿಗಿಂತ ನಮ್ಮನ್ನು ನಾವೇ ದೊಡ್ಡದಾಗಿ ನೆನೆಸಿ ಗರ್ವಪಡಬೇಡಿ.
- ಮಿತಿಗಿಂತ ಅಧಿಕವಾಗಿ, ಅವಶ್ಯಕ್ಕಿಂತ ಅಧಿಕವಾಗಿ ಆಸೆ ಪಡಬೇಡಿ.
- ಎಲ್ಲರಲ್ಲಿಯೂ ಎಲ್ಲ ವಿಷಯಗಳನ್ನು ಅವರಿಗೆ ಸಂಬಂಧವಿದೆಯೊ, ಇಲ್ಲವೋ ಹೇಳಿಕೊಂಡಿರಬೇಡಿ.
- ಕೇಳಿದ ಎಲ್ಲ ವಿಷಯಗಳನ್ನು ನಂಬಬೇಡಿ.
- ಅಲ್ಪ ವಿಷಯಗಳನ್ನು ದೊಡ್ಡದಾಗಿಸಬೇಡಿ.
- ನಿಮ್ಮ ಅಭಿಪ್ರಾಯಗಳನ್ನು ಹಠ ಹಿಡಿಯದೆ, ಸ್ವಲ್ಪ ಮಣಿದುಕೊಳ್ಳಬೇಕು.



- ಸಿ. ಪ್ರೇಮಕುಮಾರ್ ಆರಾಧ್ಯ
ಕಾರ್ಯದರ್ಶಿ, ಖಜಾಂಚಿ
ಶ್ರೀ ರೇವಣಸಿದ್ಧೇಶ್ವರಸ್ವಾಮಿ
ಆರಾಧ್ಯ ಸೇವಾ ಸಮಿತಿ ರಿ.
ಮೈಸೂರು - ೧೯
ದೂ. : 2439335

- ಮತ್ತೊಬ್ಬರ ಅಭಿಪ್ರಾಯಗಳನ್ನು, ಕ್ರಿಯೆಗಳನ್ನು, ನಡೆಯುತ್ತಿರುವ ಸಂಭವಗಳನ್ನು ತಪ್ಪಾಗಿ ಅರ್ಥೈಸಿಕೊಳ್ಳಬೇಡಿ.
- ಮತ್ತೊಬ್ಬರಿಗೆ ಮರ್ಯಾದೆ ಕೊಡುವುದು, ಸಿಹಿಯಾದ, ಹಿತವಾದ ಪದಗಳನ್ನು ಬಳಸಲು ತಪ್ಪಬೇಡಿ.
- ಮುಗುಳುನಗೆ ತೋರಿಸುವುದು ಕೆಲವು ಪ್ರೀತಿಯ ಪದಗಳನ್ನು ಹೇಳಲೂ ಸಹ ಸಮಯವಿಲ್ಲದ ಹಾಗೆ ನಡೆದುಕೊಳ್ಳಬೇಡಿ.
- ಮಾತಿನಲ್ಲಿ, ನಡತೆಯಲ್ಲಿ, ಸಭ್ಯತೆಯಿಲ್ಲದ ವಾರ್ತೆಗಳನ್ನು, ಅವಶ್ಯವಿಲ್ಲದೆ ನಟಿಸುವುದನ್ನು ತಪ್ಪಿಸಿ, ಸಂಯಮವನ್ನು ಸಭ್ಯತೆಯನ್ನು ತೋರಿಸಿ.
- ಆಗಾಗ ನೇರವಾಗಿ ಸ್ಪಂದಿಸಿ, ಮನಬಿಚ್ಚಿ ಮಾತಾಡಿ.
- ಸಮಸ್ಯೆಗಳು ಏರ್ಪಟ್ಟಾಗ, ಮತ್ತೊಬ್ಬರು ಇಳಿದು ಬರಲಿ ಎಂದು ಕಾಯದೆ, ನೀವೇ ಮಾತಾಡಲು ಮುಂದೆ ಬನ್ನಿ.
- ಈ ಎಲ್ಲವನ್ನು ಪಾಲಿಸುವಲ್ಲಿ ನೀವು ಉತ್ತಮಮನುಷ್ಯರಾಗುವಿರಿ. ಅದೇ ಜೀವನ. ಬದುಕು ಪಾವನ.

* * *

## ಆಷಾಢಪೂಜೆ

ಆಷಾಢಮಾಸದಲ್ಲಿ ಮುಂಗಾರು ಪ್ರಾರಂಭಗೊಳ್ಳುವುದರಿಂದ ವ್ಯವಸಾಯಗಾರರ ಹೊಲಗದ್ದೆಗಳಲ್ಲಿ ಕಾರ್ಯಚಟುವಟಿಕೆ ಆರಂಭಗೊಂಡಿರುತ್ತದೆ. ಅವರಿಗೆ ಬಿಡುವಿಲ್ಲದ ಕೆಲಸ ಪ್ರಾರಂಭಗೊಳ್ಳುತ್ತದೆ. ಈ ಮಾಸದಲ್ಲಿ ಮಳೆ ಪ್ರಾರಂಭವಾಗುತ್ತದೆ. ಓಡಾಡುವುದು ಕಷ್ಟ. ಇತರೆ ಎಲ್ಲ ಕೆಲಸ ಕಾರ್ಯಗಳು ಕಷ್ಟಸಾಧ್ಯ. ಅದಕ್ಕಾಗಿಯೇ ನಮ್ಮ ಹಿರಿಯರು ಸಂಪ್ರದಾಯಗಳನ್ನು ನಿರ್ಮಿಸಿರುವುದು. ಇಂಥಹ ಸಂಪ್ರದಾಯಗಳನ್ನು ನಾವು ವಿವೇಚಿಸಿದಾಗ ಅರ್ಥ ಪೂರ್ಣಗೊಳ್ಳುತ್ತದೆ. ಆದಕಾರಣ ಆಷಾಢದಲ್ಲಿ ಕೃಷಿ ಬಿಟ್ಟು ಶುಭ ಸಮಾರಂಭಗಳು, ದೇವತಾಕಾರ್ಯಗಳು ಹಾಗೂ ವಿವಾಹಾದಿಕಾರ್ಯಗಳನ್ನು ಹೆಚ್ಚು ಮುತುವರ್ಜಿವಹಿಸಲು ಆಗದ ಕಾರಣ ಬಿಟ್ಟಿರುತ್ತಾರೆ ವಿನಹ ಈ ಮಾಸದಲ್ಲಿ ಮಂಗಳಕಾರ್ಯ ನಡೆಸಬಾರದೆಂದು ಯಾವ ಪುರಾಣಶಾಸ್ತ್ರಗಳಲ್ಲಿಯೂ ತಿಳಿಸಿದ ಮಾಹಿತಿ ಕಂಡು ಬಂದಿಲ್ಲವೆಂದು ತಜ್ಞರ ಅಭಿಪ್ರಾಯವಾಗಿದೆ.

ಆಷಾಢಮಾಸದಲ್ಲಿ ಪೂಜೆ ಪುನಸ್ಕಾರಗಳಿಗೆ ಒತ್ತು ಕೊಟ್ಟಂತೆ ಕಾಣದಿದ್ದರೂ ಆಷಾಢದಲ್ಲಿಯೂ ಆಷಾಢಶುಕ್ರವಾರದ ಲಕ್ಷ್ಮೀಪೂಜೆ, ಗುರುಪೂರ್ಣಿಮೆ, ಶ್ರೀ ಚಾಮುಂಡೇಶ್ವರೀ ಜನ್ಮೋತ್ಸವ ಹಾಗೂ ಮಾಸಶಿವರಾತ್ರಿ/ಶ್ರೀ ಕೃಷ್ಣನಿಗೆ ಮಹಾಭಿಷೇಕ, ವಿಷ್ಣುಶಯನೋತ್ಸವ ಶಿವಶಯನೋತ್ಸವ, ಮೇಲುಕೋಟೆಯಲ್ಲಿ ಮಹಾಭಿಷೇಕ ಮತ್ತು ಕಲ್ಯಾಣೋತ್ಸವ ಮುಂತಾದವುಗಳು ಇರುವುದರಿಂದ ನಮಗೆ ಈ ಮಾಸದಲ್ಲಿ ಶುಭಸಮಾರಂಭ ನಡೆಸಬಾರದೆಂದು ಎಲ್ಲಿಯೂ ಸೂಚಿಸಿಲ್ಲ. ನಮ್ಮಗಳ ವ್ಯವಹಾರದ ತೊಂದರೆಯಿಂದಾಗಿ ಅಷ್ಟಾಗಿ ಚಟುವಟಿಕೆಗಳು ಕಂಡುಬರುವುದಿಲ್ಲ. ಇದು ರೂಢಿಗೆ ಬಂದಿದೆ.

# ಕೃಷಿಲೋಕ

*ಕೃಷಿತೋ ನಾಸ್ತಿ ದುರ್ಭಿಕ್ಷಂ - ಇದು ವೇದವಾಕ್ಯವಾಗಿರುತ್ತದೆ!*

ಕೃಷಿಯನ್ನು ವ್ಯವಸಾಯ, ಆರಂಭ ಮತ್ತು ಜಿರಾಯ್ತು ಎಂಬುದಾಗಿ ಕರೆಯುತ್ತಾರೆ. ಈ ಕಾರ್ಯಾರಂಭಕ್ಕೆ ನಿಧಾನವಾಗಿ ಪರಿಶೀಲಿಸಿ, ತಾಳ್ಮೆ ಕಳೆದುಕೊಳ್ಳದೆ, ದೂರವಾಗಿ ಆಲೋಚನೆ ಮಾಡುವುದು ಸೂಕ್ತವಾಗಿರುತ್ತೆ. ಜಮೀನುಗಳು ಯಾವ ಕಾಲದಲ್ಲೂ ಕೂಳೆ ಆಗದ ರೀತಿ ಬೇಲಿ ಹಾಕಿ ಭದ್ರವಾಗಿ ಕಾಪಾಡಿದರೆ ಮುಂದಿನ ಕಾರ್ಯಗಳಿಗೆ ಸೌಕರ್ಯ ಇರುತ್ತದೆ. ಅಲ್ಲದೆ ಇಳುವರಿಯು ಹೆಚ್ಚುವುದರಲ್ಲಿ ಸಂಶಯ ಇಲ್ಲ. ಸಾಧ್ಯವಾದಷ್ಟು ಜಮೀನುಭಾಗವನ್ನು ತಟ್ಟೆಯಷ್ಟು ಮಟ್ಟಸವಾಗಿರಿಸುವುದು ಬೇಸಾಯಗಾರನ ಕರ್ತವ್ಯ. ವಿಶಾಲಭೂ ಭಾಗವಿದ್ದರೆ ಎರಡು ಅಥವಾ ಮೂರು ಎಕರೆಗಳಲ್ಲಿ ಮಧ್ಯೆ ಮಧ್ಯೆ ಭದ್ರವಾಗಿ ಬಾಂದುಗಳನ್ನು ನಿರ್ಮಿಸಬೇಕು. ಪ್ರತಿ ಬೆಳೆಯಲ್ಲೂ ಬರುವ ಕಳೆಯನ್ನು ತೆಗೆಯಬೇಕು. ಜಮೀನಿನಲ್ಲಿ ಗರಿಕೆ ಬೆಳೆಗೆ ಅವಕಾಶವೇ ಇರಕೂಡದು. ಉಳುಮೆ ಮಾಡುವಾಗ ತೇವಾಂಶ ಇದ್ದಷ್ಟು ಆರಂಭದ ಮುಂದಿನ ಕಾರ್ಯಕ್ಕೆ ಸೌಖ್ಯ. ಈ ಕಾರ್ಯಕ್ಕೆ ಬರುವ ಸಿಬ್ಬಂದಿಗಳನ್ನು ಪ್ರೀತಿಯಿಂದ ಕಂಡು ನಮ್ಮ ಮನೆ ಜನರೊಡನೆ ವರ್ತಿಸುವಂತೆ ಇರಬೇಕು. ಸರ್ವಜ್ಞ ಪದದ ರೀತಿ "ನಂಬಬೇಕು, ನಂಬಿದಂತೆ ಇರಬೇಕು."

ಹಳ್ಳಿಗಾಡಿನ ಹಳಬರ ' ನಾಣ್ನುಡಿಯಂತೆ ಜಿರಾಯ್ತುದಾರನಿಗೆ, ಎತ್ತು ಮುಖ್ಯ "ಎತ್ತಿಲ್ಲದವನಿಗೆ ಎದೆ ಇರುವುದಿಲ್ಲ", ಎಂಬಂತೆ ನಾವು ಎಷ್ಟೇ ಹಣ ಒದಗಿಸಿದರೂ ಮತ್ತೆ ಎಷ್ಟು ಜನ ಸಹಾಯಕರು ಇದ್ದರೂ, ಜಮೀನು ಇರುವ ಅಳತೆಗೆ ತಕ್ಕಂತೆ ಏರುಗಳನ್ನು ಇಡಬೇಕು.

ವಿರಾಮ ಇರುವಾಗ ವ್ಯವಸಾಯಕ್ಕೆ ಬೇಕಾದ ಸಾಮಾನುಗಳನ್ನು ಅಂದರೆ, ಬಿತ್ತನೆಗೆ ಸಣ್ಣ ನೇಗಿಲು, ಆರಂಭಕ್ಕೆ ದೊಡ್ಡ ನೇಗಿಲು ಈ ಮಧ್ಯೆ ಇರುವ ಕೆಲಸಕ್ಕೆ ಹರಗುವ ಕುಂಟೆಗಳು ಮುಂತಾದವುಗಳನ್ನು ಮಾಡಿಕೊಳ್ಳಬೇಕು.



**- ಕಾಶಿ ಆರಾಧ್ಯ**
"ಚಂದ್ರಶೇಖರ ನಿಲಯ"
ಬಸದಿ ಗುಡಿ ರಸ್ತೆ
ಚಾಮರಾಜನಗರ.

ಕಮ್ಮಾರನಲ್ಲಿ ಕುಡಣ್ಣಗಳು, ನೇಗಿಲುಗಳನ್ನು ಮೊನಚಾಗಿಮಾಡಿಸಿ ತೇವದ ಅಂಶ ತಿಳಿದು ಬಿತ್ತನೆ ಕಾರ್ಯ ಆರಂಭಿಸುವುದು ಸೂಕ್ತ. ಈ ಮೊದಲೆ ಬಿತ್ತನೆ ವಿಭಾಗಕ್ಕೆ ಗೊಬ್ಬರವನ್ನು ನಮ್ಮ ಚೈತನ್ಯಕ್ಕೆ ತಕ್ಕಂತೆ ಹರಡಿಕೊಂಡರೆ, ಉತ್ಪಾದನೆಯಲ್ಲಿ ಮುಂದಿರುತ್ತೆ. ಗ್ರಾಮಾಂತರ ನಾಣ್ಣುಡಿಯಂತೆ "*ಹೆಡ್ಡನ ಆರಂಭಕ್ಕೆ ಗೊಬ್ಬರದ ತ್ರಾಣವೇ ಕಾರಣ*".

ನಾವು ಬೇಲಿ ಬೆಳೆಸುವಾಗ ಪಕ್ಕದಲ್ಲಿ ಕೆಲವು ಸೊಪ್ಪಿನ ಮರಗಳನ್ನು ಬೆಳೆಸುವುದು ಸೂಕ್ತ. ಇದರಿಂದ ಗೊಬ್ಬರ ಉತ್ಪತ್ತಿಯಾಗುತ್ತದೆ. ಮನೆಗೆ ಸೌದೆ ಒದಗುತ್ತದೆ. ವಿರಾಮ ಕಾಲದಲ್ಲಿ ಸೊಪ್ಪಿನ ಗುಂಡಿಗಳಿಗೆ ಕೆರೆಯ ಮಣ್ಣು ತುಂಬುವುದು ಉತ್ತಮ.

ವ್ಯವಸಾಯಕ್ಕೆ ಇರುವ ಎತ್ತುಗಳನ್ನು ಮನೆಯ ಮಕ್ಕಳನ್ನು ಎಷ್ಟು ಸೂಕ್ಷ್ಮವಾಗಿ ನೋಡಿಕೊಳ್ಳುತ್ತೇವೆಯೋ ಅಷ್ಟೇ ಸೂಕ್ಷ್ಮವಾಗಿ ನೋಡಬೇಕು; ಅವುಗಳನ್ನು ಹಿಡಿತದಲ್ಲಿಡಬೇಕಾದಾಗ ಅವುಗಳಿಗೆ ಉಪಯೋಗಿಸುವ ಹಗ್ಗ, ಮೂಗುದಾರವನ್ನು ಪರಿಶೀಲಿಸುವುದು ಉಚಿತ. ಅವುಗಳ ನಡವಳಿಕೆಯಲ್ಲಿ ಬಹಳ ಎಚ್ಚರ ಇರಬೇಕು. ಅಂದರೆ "*ದನವೊ ದಾಯಾದಿಯೊ* "ಎಂಬಂತೆ ಇದು ಗ್ರಾಮಾಂತರ ಭಾಷೆ ವೈಖರಿಯಾಗಿರುತ್ತೆ.

ಜಿರಾಯ್ತು ಕಾರ್ಯಕ್ಕೆ ಸೋಂಬೇರಿತನ ಇರಕೂಡದು. ಬಿತ್ತನೆ ಕಾರ್ಯಕ್ಕೆ ತೊಡೆ ಗಾತ್ರದ ನೇಗಿಲುಗಳು ಬಹಳ ಸೂಕ್ತ. ಎತ್ತುಗಳು ದೃಢಕಾಯವಾಗಿದ್ದರೆ ಎರಡು ನೇಗಿಲು ಹಾಕಬಹುದು. ಇದರ ತಿಳವಳಿಕೆ ಬಹಳ ಇರುತ್ತದೆ. ಸೇರಸಾಲಿನಿಂದ ಕೆಲಸವು ಬಹಳ ಸೂಕ್ಷ್ಮವಾಗಿ ಸಂಪೂರ್ಣತೆ ಇರುತ್ತದೆ. ಸಾಲಿನ ಆಳವು 3 ಅಥವಾ 31/2 ಅಂಗುಲದಲ್ಲಿ ಇರುವುದು ಸೂಕ್ತ. ಬಿತ್ತನೆಕಾರ್ಯಕ್ಕೆ ಹೋಗುವಾಗ ಕೈಯಲ್ಲಿ ಮಚ್ಚು ಮತ್ತು ಕುಡಿಯುವ ನೀರು ಇರುವುದು ಒಳ್ಳೆಯದು. ಸುಸೂತ್ರ ಬಿತ್ತನೆ ಕಾರ್ಯಕ್ಕೆ ನಾನಾವರ್ಗದ ಜನರು ಬರುತ್ತಾರೆ. ಅವರೊಡನೆ ಹೊಂದಾಣಿಕೆ ಮಾಡಿಕೊಳ್ಳಬೇಕು. ಅವರಲ್ಲಿ ಮಾತುಗಳ ಘರ್ಷಣೆಗೆ ದಾರಿಕೊಡದ ಹಾಗೆ ನೋಡುವುದು ಎಚ್ಚರ! ತೇವಾಂಶ ಕಡಮೆಯಿದ್ದರೆ ಹಲ್ಲುವೆ ಕಾರ್ಯಾಚರಣೆ ಸೂಕ್ತ. ಬಿತ್ತನೆ ಕಾರ್ಯ ಸರಿ ಇರಬೇಕು. ಇಲ್ಲದಿದ್ದರೆ ಗ್ರಾಮಾಂತರ ನಾಣ್ಣುಡಿಯಂತೆ "*ಉತ್ತವನ ಹೊಲ ಬಿತ್ತಿದವನು ಕೆಡಿಸಿದ; ಬಿತ್ತಿದವನ ಹೊಲವನ್ನು ಹರಗಿದವನು ಕೆಡಿಸಿದಂತೆ*" ತಿಳಿಯಿರಿ.

ಗಾದೆಗಳು ವೇದವಾಕ್ಯ ಇದ್ದಂತೆ. ಕೆಲವು ನಡವಳಿಕೆ ಪೂರ್ವಿಕರ ಸಿದ್ಧಾಂತದಂತೆ ಹೋಗುವುದು ಉತ್ತಮವಾಗಿಯೇ ಇರುತ್ತದೆ ಮುಂಗಾರು ಮಳೆ ಸೌಕರ್ಯವಾಗಿ ನಡೆಸಿಕೊಟ್ಟರೆ ವಿರಾಮ ಇಲ್ಲದೆ ಕಾರ್ಯಕ್ರಮಗಳು ಇರುತ್ತವೆ. ಅಂದರೆ, ರಾಗಿ, ಕಡಲೆಕಾಯಿ ಮತ್ತು ಹಿಪ್ಪುನೇರಳೆ ವಿಭಾಗದ ಜಮೀನು ಉಳುಮೆಗಳು ಇರುತ್ತವೆ. ರಾಗಿ ಹೊಲದ ಉಳುಮೆ ತೇವಾಂಶ ಇದ್ದಷ್ಟು ಉತ್ತಮ ಫಸಲು ಬರುವುದರಲ್ಲಿ ಸಂಶಯವಿಲ್ಲ. ರಾಗಿ ಹರಗಣೆಯನ್ನು ಎರಡು ಸಾರಿ ಮುಗಿಸಿ ನಂತರ ಕಳೆ ತೆಗೆಯುವುದು ಉಚಿತ. ರಾಗಿ ಬಿತ್ತಿದ 2-3ನೆ ದಿವಸ ಅವರೆಕಾಳು ಮತ್ತು ಮಕರಜೋಳದ ಸಾಲು ಹಾಕುವುದು ನಡವಳಿಕೆ. ಅದೇ ಸಾಯಂಕಾಲ ಎತ್ತುಗಳಿಗೆ ಸ್ನಾನ ಅಲ್ಲದೆ, ಉಪಯೋಗಿಸಿದ ಉಪಕರಣಗಳಿಗೆ ಪೂಜೆ ಮತ್ತು ಕೆಲಸ ಕಾರ್ಯಕ್ಕೆ ಬಂದಿದ್ದವರು ಮತ್ತು ಅಕ್ಕಪಕ್ಕದ ಮನೆಯವರಿಗೆ ಔತಣವನ್ನು ನಡೆಸುತ್ತಾರೆ.

ಶ್ರಾವಣದಲ್ಲಿ ಜೋಳದ ಕಟಾವು ಹತ್ತಿರವಾಗುತ್ತೆ. ಆಗ ಜಮೀನು ಮಧ್ಯಭಾಗದಲ್ಲಿ ಕಾವಲು ಕಾಯುವುದಕ್ಕೆ ಒಂದು ಗುಡಾರವನ್ನು ಭದ್ರವಾಗಿ ಹಾಕಿಕೊಳ್ಳಬೇಕು. ರಾತ್ರಿ ಕಾವಲಿಗೆ ಬೆಳಕು ಇರಬೇಕು. ಕಾಯುವವರು ಯಾವ ಜಾಗದಲ್ಲಿ ಇರುತ್ತಾರೆ ಎಂಬುದು ಅವರಿಗೆ ತಿಳಿಯದ ರೀತಿ ತಿರುಗಾಡುತ್ತ ಸದ್ದು ಮಾಡಿಕೊಂಡು ಹೋಗಬೇಕು. ತೆನೆಗಳು ಬರುವ ಸಂದರ್ಭದಲ್ಲಿ ಬೆಳಿಗ್ಗೆ ಮತ್ತು ಸಾಯಂಕಾಲದ ವೇಳೆ ಶಬ್ದಗಳನ್ನು ಮಾಡಿ ಪಕ್ಷಿಗಳಿಂದ ಸಂರಕ್ಷಿಸಬೇಕು. ಇದು ಬಹಳ ಜಾಗ್ರತೆಯ ಕಾರ್ಯವಾಗಿರುತ್ತೆ.

ಜೋಳದ ಕಟಾವು ಮಾಡಬಹುದು. ನಂತರ ಆ ಭಾಗಕ್ಕೆ ಹೆಸರು, ಅಲಸಂದೆ ಮತ್ತು ಉದ್ದನ್ನು ಕುಂಟೆ ಹೊಡೆಸಿ ಬಿತ್ತನೆ ಮಾಡಿದರೆ ಉತ್ತಮ ಫಸಲು ನಿರೀಕ್ಷಿಸಬಹುದು.

ಜಿರಾಯ್ತುದಾರನದು ಸಂಪೂರ್ಣವಾಗಿ ಪ್ರಕೃತಿಸಹಕಾರದ ಜೀವನೋಪಾಯ ವಾಗಿರುವುದರಿಂದ, ಆಧ್ಯಾತ್ಮಿಕಜೀವಿಗಳ ಜೊತೆಗೆ ಸೇರಿದ ತರಹ ಇರುತ್ತೆ. ನಾವು ಏನೇ ಸಾಧನೆ ಮಾಡಿದರೂ ಅದಕ್ಕೆ ದೈವಸಹಕಾರ ಇರಬೇಕು. ವ್ಯವಸಾಯಕಾರ್ಯವೂ ಸಾಮಾನ್ಯವಾಗಿ ಹೊಸ ವರ್ಷದ ಆದಿಯಿಂದಲೇ ಪ್ರಾರಂಭ. ಅದಕ್ಕೋಸ್ಕರವೆ ರೈತರು ಯುಗಾದಿ ಹಬ್ಬದ ದಿನ ಹೊಸ ವರ್ಷಾರಂಭಕ್ಕೆ ಬಹಳ ಪ್ರಾಧಾನ್ಯ ಕೊಟ್ಟಿರುತ್ತಾರೆ. ಆ ಪ್ರಾರಂಭದ ದಿನದಂದು ಎತ್ತು ಗಾಡಿಗಳಿಗೆ ವಿಶೇಷಪೂಜೆ ಮತ್ತೆ ನೇಗಿಲುಗಳನ್ನು ಪೂಜಿಸಿ ಗಾಡಿಗೆ ಗೊಬ್ಬರವನ್ನು ತುಂಬಿ ಕುಟುಂಬದ ಯಜಮಾನರು ಏರನ್ನು ಜಮೀನು ಭಾಗಕ್ಕೆ ಹೊಡೆದುಕೊಂಡು ಹೋಗಿ ಗೊಬ್ಬರವನ್ನು ಅಂಗಳದಲ್ಲಿ ಕೆಡವಿ ಬರುತ್ತಾರೆ. ಆ ದಿನ ಅವರು ಹೊಸ ಉಡುಪನ್ನು ಧರಿಸುವರು. ಇತ್ತೀಚೆಗಷ್ಟೇ ಗೊಬ್ಬರವು ನಾನಾ ತರಹದಲ್ಲಿ ಇರುತ್ತೆ. ಇಷ್ಟಕ್ಕೂ ದನದ ಮತ್ತು ಕುರಿಯ ಅಲ್ಲದೆ ನಾವು ಸ್ವತಹಃ ಮಾಡಿಕೊಳ್ಳುವ ಸೊಪ್ಪು ಕಸದಗುಂಡಿಯಲ್ಲಿ ತಯಾರಾಗುವುದು ಇರುತ್ತೆ. ಇತ್ತೀಚೆಗೆ ವ್ಯವಸಾಯವು ವ್ಯಾಪಾರದ ರೀತಿ ಮಾರ್ಪಾಡು ಆಗುತ್ತಿದೆ. ಇದಕ್ಕೆ ಆರ್ಥಿಕ ಮುಗ್ಗಟ್ಟೆ ಕಾರಣ. ರೈತನಿಗೆ ತನ್ನ ಜೀವಿತಕಾಲಾವಧಿಯಲ್ಲಿ ಆರ್ಥಿಕ ಮುಗ್ಗಟ್ಟನ್ನು ಸರಿದೂಗಿಸುವುದೆ ಒಂದು ಸಾಧನೆಯಾಗಿರುತ್ತೆ.

ಬಿತ್ತನೆಯನ್ನು ಬೇಕಾಬಿಟ್ಟಿ ಮಾಡಕೂಡದು. ಲೆಕ್ಕಾಚಾರವಾಗಿ ನಡೆಸಬೇಕು. ಅಂದರೆ ಎಕರೆ ಒಂದಕ್ಕೆ ಬಿತ್ತನೆ ಜೋಳ 21/2 ಸೇರಿಂದ 3 ಸೇರು ಬೇಕು. ಈ ಜೋಳದ ನಡುವೆ ಒಂದರಂತೆ ಹತ್ತು ಸಾಲಿಗೆ ಮಧ್ಯೆ ತೊಗರಿ ಮತ್ತು ಹರಳು ಬಿತ್ತನೆ ರೂಢಿ ಇರುತ್ತದೆ. ರಾಗಿಯನ್ನು 4ರಿಂದ 5 ಸೇರು ಚೆಲ್ಲಿ ಬಿತ್ತನೆ ನಂತರ 6 ಅಡಿ ಅಂತರಕ್ಕೆ ಅವರೆಕಾಳು ಮಕರ ಜೋಳ ಬಿತ್ತನೆ ನಡೆಸಬೇಕು. ಹೆಸರು, ಅಲಸಂದೆ ಮತ್ತು ಉದ್ದು 3 ಸೇರು ಕಾಳನ್ನು ಉಪಯೋಗಿಸಬೇಕು. ಜೋಳದ ಕಟಾವಾದನಂತರ ತೇವದ ಆರಂಭ ಮಾಡಿಕೊಂಡು ಕೊತ್ತಂಬರಿ ಮತ್ತು ಹಸಿಕಡಲೆಯನ್ನು 2 1/2 -3 ಇಂಚು ಆಳದಲ್ಲಿ ಬಿತ್ತಬೇಕು.

ತೆವರಿನ ಪಕ್ಕ ಸ್ವಲ್ಪ ಎತ್ತರ ಪ್ರದೇಶ ಅಂದರೆ ಭೂ ವಿಸ್ತೀರ್ಣಕ್ಕೆ 2-3 ಇಂಚು ಎತ್ತರಕ್ಕೆ 25 ಅಥವಾ 30 ಅಡಿ ಸುತ್ತಳತೆಗೆ ಕೊಠಾರವನ್ನು ಮಾಡಿಕೊಳ್ಳಬೇಕು. ಸ್ವಂತ ಜಮೀನು

ಭಾಗದಲ್ಲಿ ಕೊಠಾರ ಮಾಡಿಕೊಳ್ಳುವುದರಿಂದ ಕನಿಷ್ಠ ವರ್ಷಕ್ಕೆ 20-25 ಗಾಡಿಯಷ್ಟು ಗೊಬ್ಬರ ಶೇಖರಣೆಯಾಗುತ್ತದೆ. ಒಕ್ಕಣೆಗಳು ಮುಗಿಯುತ್ತ ಇರುವಾಗಲೇ ಹುಲ್ಲು ಮೆದೆಗಳನ್ನು ಜಾಗರೂಕತೆಯಿಂದ ಅನುಭವೀ ಆಳುಗಳನ್ನು ಸೇರಿಸಿ ಕಾರ್ಯ ನಡೆಸಬೇಕು. ಮೆದೆಗಳನ್ನು ಒಂದೇ ದಿನದಲ್ಲಿ ಸಂಪೂರ್ಣವಾಗಿಸುವ ಬದಲು ಎರಡು ದಿನಗಳು ತಂಗಿದ ನಂತರ ಪೂರ್ತ ಮಾಡಿಸಿದರೆ ಆ ಪದಾರ್ಥ ಶುದ್ಧವಾಗಿ ಇರುತ್ತೆ.

ಕೃಷಿಯಲ್ಲಿ ಖುಷ್ಕಿ, ತರಿ, ಮತ್ತು ಬಾಗಾಯ್ತು ಎಂಬುದಾಗಿ ಮೂರು ವಿಭಾಗವಿರುತ್ತೆ.

ಮಳೆ ಆಶ್ರಯದಲ್ಲಿ ಮಾಡುವ ಕೆಲಸಗಳು ಖುಷ್ಕಿ ಎಂತಲೂ, ನೀರಾವರಿ ವ್ಯವಸಾಯಕ್ಕೆ ತರಿ ಎಂತಲೂ ಮತ್ತೆ ಬಾಗಾಯ್ತು ಅಂದರೆ ತೋಟಗಾರಿಕೆ. ಇದರಲ್ಲಿ ತೆಂಗು. ಮಾವು ಮತ್ತು ಇತರೆ ಹಣ್ಣು ಹಂಪಲು ಬೆಳೆಗಳನ್ನು ಬೆಳೆಯುವುದರ ಜೊತೆಗೆ ಉತ್ತಮ ಜಾತಿಯ ಮರಗಳನ್ನು ತೋಟಗಾರಿಕೆಯಲ್ಲಿ ಬೆಳೆಯುತ್ತಾರೆ. ಸರಕಾರವು ಇತ್ತೀಚೆಗಷ್ಟೆ ತೋಟಗಾರಿಕೆಗೆ ನಾನಾ ತರಹ ಸಾಲ ಸೌಲಭ್ಯವನ್ನು ಮಾಡಿಕೊಡುತ್ತಿದೆ. ಇವತ್ತಿನ ಹವಾಮಾನ ಪ್ರಕೃತಿಯಲ್ಲಿ ತೋಟಗಾರಿಕೆ ವ್ಯವಸಾಯವು ಸೂಕ್ತವೆಂಬುದಾಗಿ ಕಾಣುತ್ತೆ.

* * *

## ವಿದ್ಯೆ

*'ವಿದ್ಯಾ ದದಾತಿ ವಿನಯಂ'*- ವಿದ್ಯೆಯಿಂದ ಮೊದಲು ದೊರೆಯುವಂಥದು ವಿನಯ. ಆದ್ದರಿಂದಲೇ ಪೂರ್ಣವಿದ್ಯಾವಂತನಾದವನು ವಿನಯವಂತನಾಗಿರತಕ್ಕದ್ದು. ಇತರರ ಅಜ್ಞಾನವನ್ನು ಎತ್ತಿ ಆಡದೇ, ಹಂಗಿಸದೆ, ಸಾಧ್ಯವಾದ ಮಟ್ಟಿಗೂ ಅಂಥವರ ಅಜ್ಞಾನವನ್ನು ವಿನಯಪೂರ್ವಕವಾಗಿ ನೀಗಿಸಲು ಯತ್ನಿಸಬೇಕು. ತನ್ನ ಸುತ್ತಲಿನವರು ಅಜ್ಞಾನಿಗಳು ಎಂಬುದು ವಾಸ್ತವಾಂಶವಾಗಿದ್ದರೂ ಅದನ್ನು ಪಂಡಿತನಾದವನು ಅವರೆದುರು ಹೇಳಿ ಹೀಯ್ಯಾಳಿಸಬಾರದು.

## ಶ್ರೀಗುರು

ಶ್ರೀಗುರುವು ಬ್ರಹ್ಮ, ವಿಷ್ಣು, ಮಹೇಶ್ವರನಾಗಿ ಸರ್ವಸ್ವವೂ ಆಗಿರುತ್ತಾನೆ. ಗುರುವೆಂದರೆ ಕೇವಲ ವ್ಯಕ್ತಿತ್ವವಲ್ಲ. ಸ್ವಯಂಪ್ರಕಾಶ. ಅಂಧಕಾರದ ನಿವಾರಣೆ, ಗುರುವೆಂದರೆ ಸಾಕ್ಷಾತ್ ಭಗವಂತನೇ ಎಂಬಷ್ಟು ನಂಬಿಕೆ. ಗುರುವೆಂದರೆ ವಿಶೇಷವಾದ ಬೆಳಕು, ಜ್ಞಾನ, ಚೇತನ, ಮಾರ್ಗದರ್ಶನ ನೀಡುವ ಪೂಜ್ಯವ್ಯಕ್ತಿ ಮತ್ತು ಶಕ್ತಿ. ಅಜ್ಞಾನವನ್ನು ದೂಡಿ ಸುಜ್ಞಾನವನ್ನು ನೀಡುವವನೇ ಗುರು. *ಹರ ಮುನಿದರೆ ಗುರು ಕಾಯ್ವ, ಗುರು ಮುನಿದರೆ ಕಾಯುವವರಾರು* ಮತ್ತು *ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ* ಮುಕುತಿ ಎಂದಿದ್ದಾರೆ ಕವಿಗಳು.

# ನಾನು - ನನ್ನಂತೆ

'ಬರುವಾಗ ಬೆತ್ತಲೆ, ಹೋಗುವಾಗ ಬೆತ್ತಲೆ ಬಂದು ಹೋಗುವ ನಡುವೆ ಬರೀ ಕತ್ತಲೆ.' ಪುರಂದರದಾಸರ ಕೀರ್ತನೆಯಲ್ಲಿ ಬರುವ ಮಾತುಗಳು ಅಕ್ಷರ ಸಹ ಎಷ್ಟು ಸತ್ಯ ಎನಿಸಿವೆಯಲ್ಲವೆ? ಈ ನುಡಿಯನ್ನು ಎಷ್ಟು ಮಂದಿ ಓದಿ ಅರ್ಥೈಸಿಕೊಂಡು ಪರಿಪಾಲಿಸುತ್ತಿದ್ದಾರೆ? ಇಂದಿನ ಗಣಕ ಯಂತ್ರದ ಆವಿಷ್ಕಾರದಲ್ಲಿ ದಾಸರ, ಶರಣರ, ಕೀರ್ತನೆಗಳನ್ನು ಮಹಾತ್ಮರ ನುಡಿಗಳನ್ನು ಓದುವುದಿರಲಿ, ಅಂಥ ಅಧ್ಯಾತ್ಮ ಮತ್ತು ಪಾರಮಾರ್ಥಿಕದ ಕಡೆ ಗಮನ ಹರಿಸುವುದಕ್ಕೆ ಇಂಟರೆಸ್ಟ್ ಕೊಡುವವರಾರು? ನಾವು ಭಾರತೀಯರು, ಸಂಸ್ಕೃತಿಯುಳ್ಳವರು, ವಿಶಾಲಹೃದಯಿಗಳು, ಅನ್ಯರಿಗೆ ಕರುಣೆ ತೋರಿಸಿ ಆಶ್ರಯ ಕೊಡುವುದರ ಜೊತೆಗೆ ಅವರುಗಳ ಸಂಸ್ಕೃತಿಯನ್ನೂ ಸಹ ನಮ್ಮ ಸಂಸ್ಕೃತಿಯ ಜೊತೆ ಬೆರೆಸಿ ಆಚರಣೆಗೆ ತರುತ್ತಿರುವುದು ಒಂದು ದೊಡ್ಡ ವಿಪರ್ಯಾಸ. ನಮ್ಮ ಸಂಸ್ಕೃತಿಯನ್ನು ಪಾಲಿಸುತ್ತಿರುವವರು ಬೆರಳೆಣಿಕೆಯಷ್ಟು ಮಾತ್ರ. ನಮ್ಮ ಸಂಸ್ಕೃತಿಯನ್ನು ಮೆಚ್ಚಿ ವಿದೇಶಿಯರು ಇದನ್ನು ಪಾಲಿಸುತ್ತಿದ್ದರೆ, ಅವರ ಸಂಸ್ಕೃತಿಯನ್ನು ನಾವು ಪಾಲಿಸುತ್ತಿದ್ದೇವೆ.'ಇಂದು ಎಂಥಾ ದೇಶವಯ್ಯ' ಎಂದು ಕೊರಗಿ ಮರುಗುತ್ತಿರುವ ಹಲವರಲ್ಲಿ ನಾನೂ ಒಬ್ಬ. ಇದೇನಪ್ಪಾ ಇಳಿವಯಸ್ಸಿನಲ್ಲಿ ಬರುವ ಆಲೋಚನೆಗಳು ಈ ಯುವಕನಲ್ಲಿ ಬಂದುದಾದರೂ ಹೇಗೆ? ಎಂದು ಹುಬ್ಬೇರಿಸಬಹುದು. ಹೌದು ಈ ಯುವಕನಲ್ಲಿ ಇಂಥಾ ಆಲೋಚನೆಗಳು ಈಗಲೇ ಬಂದಿದೆ ಎಂದರೆ ನಮ್ಮ ಸಂಸ್ಕೃತಿಯ ಮೇಲೆ ಇರುವಂಥಾ ಪ್ರೀತಿ, ಕಾಳಜಿಯನ್ನು ಎತ್ತಿ ತೋರಿಸುತ್ತದೆ. ನಾನು ಹೆಚ್ಚು ವಿಷದವಾಗಿ ಹೇಳಲು ಇಷ್ಟಪಡುವುದಿಲ್ಲ. ಏಕೆಂದರೆ ನನ್ನ ಇಂಥಾ ಆಲೋಚನೆಗಳಿಗೆ ಸ್ಪಂದಿಸುವ ಯುವಕರು ಯಾರೂ ಇಲ್ಲ ಎಂದು ಹೇಳಲು ತುಂಬಾ ದುಃಖವಾಗುತ್ತದೆ. ದುಃಖಿಸುವುದಕ್ಕೆ ನನಗೆ ಇಷ್ಟವಿಲ್ಲ. ಏಕೆಂದರೆ ನಾನು ಸದಾ ಅರಳಿ ನಗುವ ಹೂವಿನಂತಿರಲು ಇಷ್ಟ ಪಡುವ ವ್ಯಕ್ತಿ. ಹೇಗೆ ತಾಳಕ್ಕೆ ತಕ್ಕಂತೆ ಕುಣಿದರೆ ಚೆಂದವೊ ಹಾಗೆ ಕಾಲಕ್ಕೆ ತಕ್ಕಂತೆ ನಡೆದರೆ ಈಗಿನ ಕಾಲದಲ್ಲಿ ಬದುಕಲು ಸಾಧ್ಯ ಎಂದು ನನ್ನ ನಂಬಿಕೆ. ಯಾರು ಹೇಗೆ ಇರಲಿ, ನಾನು ನನ್ನಂತಿರಲು ಇಷ್ಟಪಡುವ ವ್ಯಕ್ತಿ. 'ಪರರ ಚಿಂತೆ ನಮಗೆ ಏಕೆ ಅಯ್ಯ; ಪರರ ಚಿಂತೆ ನಮಗೆ ಏಕೆ '.



ಲೇಖಕ
**ಎಂ. ಪಿ. ಸಂಪತ್ ಆರಾಧ್ಯ**
ಮಲೆಯೂರು - 571 128
ಚಾಮರಾಜನಗರ ಜಿಲ್ಲೆ

* * *

# ಮಾನವನಲ್ಲಿ ಕಲೆ.

*"ಹೇಳಿದ್ದೆ ಹೇಳುವರು, ಕೇಳಿದ್ದೆ ಕೇಳುವರು*
*ಕೇಳಿದ್ದೆ ಕೇಳಿ ಸುಖಿಸುವರು-ಗುರುಗಳ*
*ಹೇಳಿಕೆಯೆ ಬೇರೆ ಸರ್ವಜ್ಞ".*

ಎಂಬ ವಚನದಂತೆ ಸಂಪ್ರದಾಯಮಾರ್ಗವನ್ನೇ ಛಲ ಹಿಡಿಯದೆ, ವಿಶ್ವಕವಿತವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು ಜನ್ಮಾಂತರದ ದರ್ಶನಗಳು, ಮುಂತಾದವುಗಳನ್ನು ಇತ್ತೀಚೆಗೆ ಬಿಟ್ಟು ಮೂಲೆ ಗುಂಪಾಗುತ್ತಿರುವ ಕಲೆಯ ಬಗ್ಗೆ ಸಹಜತೆಯಿಂದ ಒಂದೆರಡು ಮಾತಿನಲ್ಲಿ ನನ್ನ ಚಿಂತನೆಯನ್ನು ಹಂಚಿಕೊಳ್ಳಲು ಪ್ರಯತ್ನ ಪಟ್ಟಿರುತ್ತೇನೆ .

ಸಹೃದಯರೇ,

ಕನ್ನಡ ನಾಡನ್ನು ವಾಸ್ತುಸಿರಿಯ ಹಾಗೂ ಕಾಷ್ಠಶಿಲ್ಪ ಸಿರಿಯ ತವರೂರು ಎಂದಿದ್ದಾರೆ. ಅಲ್ಲಲ್ಲಿ (ಅಳಿದುಳಿದ) ಇರುವ ದೇಗುಲಗಳು, ಕರಕುಶಲಕಲಾಕಾರರುಗಳನ್ನು, ಕುಸುರಿ ಕೆಲಸದ ಕಲಾವಂತಿಕೆಗಳನ್ನು ಗುರುತಿಸಿಯೇ ಈ ನಾಡನ್ನು ಪುಣ್ಯಕ್ಷೇತ್ರಗಳ ಬೀಡು, ಸಾಹಿತಿ - ಕಲಾವಿದರ ಬೀಡು ಎಂದು ಕರೆದಿದ್ದಾರೆ, ಅಲ್ಲದೆ ಈ ನಾಡಿನಲ್ಲಿ ಸಾಂಸ್ಕೃತಿಕ ಸೊಬಗು ಪ್ರಕೃತಿಯಷ್ಟೇ ಸಮೃದ್ಧಿಯೂ ಆಗಿದೆ, ಹಾಗಾಗಿ, ಕಲೆಯ ಬಲೆಯಲ್ಲಿ ಈ ನಾಡು ಮಿನುಗುತ್ತಿದೆ; ಎಂಬುದು ಹುಸಿ ನುಡಿಯಲ್ಲ.

ಹದಿನಾಲ್ಕನೆ ಶತಮಾನದ ಟಸ್ಕಾನಿನ ಒಬ್ಬ ವರ್ಣ ಚಿತ್ರಕಾರ ಜಗತ್ತಿನ ಕಲಾವಿದರನ್ನು ಕುರಿತು ನೀಡಿದ ಸಲಹೆ ಎಂದರೆ, ಕೆಲವು ಕಾಲ, ಚಿತ್ರ ಕಲೆಯ ಅಭ್ಯಾಸ ಮಾಡಿದ ಮೇಲೆ, ಪ್ರಖ್ಯಾತ ಕಲಾವಿದರ, ಶ್ರೇಷ್ಠಚಿತ್ರಗಳ ನಕಲನ್ನು, ಅವುಗಳ ಪ್ರತಿರೂಪಗಳನ್ನು , ರಚಿಸುತ್ತ ಹೋಗಿರಿ, ಆಗ ದಿನದಿಂದ ದಿನಕ್ಕೆ ನಿಮ್ಮ ಶೈಲಿ ರೂಪಗೊಳ್ಳತೊಡಗುತ್ತದೆ ಮತ್ತು ಮಹಾನ್ ಕಲಾವಿದರ ವ್ಯಕ್ತಿತ್ವವೂ ನಿಮ್ಮದಾಗಿಬಿಡುತ್ತದೆ. ಈ ಮಾತು,



***- ಹರಂಬಳ್ಳಿ ರೇಣುಕಾರಾಧ್ಯ***
ಬಿ. ಎ., ಎಲ್ ಎಲ್. ಬಿ.,
ವಕೀಲರು
#120,7 ನೇ ಕ್ರಾಸ್,
'ಹೆಚ್' ಬ್ಲಾಕ್, ರಾಮಕೃಷ್ಣನಗರ
ಮೈಸೂರು - 23
ದೂ. : 2462329

ಅಕ್ಷರಶಃ ಸತ್ಯ. ಯಾವುದೇ ಕಾಲದಲ್ಲಿ ಕಾರ್ಯದಲ್ಲಿ ನಿಮ್ಮ ಪರಿಶ್ರಮದ ಫಲಿತಾಂಶ, ಪ್ರತಿಫಲಿಸದೆ ಇರಲು ಸಾಧ್ಯವೆ ಇಲ್ಲ; ಎಂಬ ದೃಢನಂಬಿಕೆ ಮುಂದೊಂದು ದಿನ ಬರುವುದರಲ್ಲಿ ಸಂದೇಹವೆ ಇಲ್ಲ.

ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲ್ ಹೇಳಿರುವ ಹಾಗೆ ಮಾನವ ಒಬ್ಬ ಸಮಾಜಜೀವಿ, ಪ್ರತಿಯೊಬ್ಬ ವ್ಯಕ್ತಿಯು ತನ್ನ ಅಂತರ್‌ಸಾಮರ್ಥ್ಯವನ್ನು ಸಂಪೂರ್ಣವಾಗಿ ಬಳಸಿಕೊಂಡು ಸಾರ್ಥಕತೆಯ ಸಮಾಧಾನವನ್ನು ಪಡೆಯುವುದು ಸಾಧ್ಯವಾಗದ ಮಾತು. ಎಲ್ಲವನ್ನು ನಾನೆ ಮಾಡಿ ಪೂರೈಸುತ್ತೇನೆಂಬುದು, ಅಹಂಕಾರದ ಮಾತಲ್ಲದೆ; ವಾಸ್ತವಕ್ಕೆ ದೂರ. ಮುನ್ನೂರು ವರ್ಷಗಳ ಕಾಲ ಆಂಗ್ಲರ ದಬ್ಬಾಳಿಕೆಗೆ ಗುರಿಯಾಗಿದ್ದ ಭಾರತೀಯರಿಗೆ ಮುಕ್ತಸಮಾಜದ ಕಲ್ಪನೆ ಇನ್ನೂ ಸರಿಯಾಗಿ ಮೂಡಿಲ್ಲವೆನ್ನುವುದು ಅಪ್ರಿಯವಾದ ಸತ್ಯವೇ ಆಗಿದೆ. ಇದು ನಿಜಕ್ಕೂ ದುರಂತವೇ ಸರಿ. ಸ್ವಾತಂತ್ರ್ಯಪ್ರಾಪ್ತಿಯಾಗಿ ಐದು ಆರು ದಶಕಗಳು ಕಳೆದರೂ, ಇನ್ನೂ ಸಾಮಾನ್ಯ ಮನುಷ್ಯ ತೀವ್ರತರವಾದ ಶೋಷಣೆಗೆ ಗುರಿಯಾಗಿರುತ್ತಿರುವುದು ತುಂಬ ವಿಷಾದನೀಯ. "ಅಧಿಕಾರ ಚಲಾಯಿಸುವ ಮನೋಭಾವ ಹೋಗಿ, 'ಸೇವೆ ಸಲ್ಲಿಸುವ' ಮನೋಭಾವ ಎಲ್ಲರಲ್ಲಿ ಬಂದಾಗಲೇ ಒಳ್ಳೆಯ ಸಮಾಜಸ್ಥಾಪನೆ ಸಾಧ್ಯವಾಗುತ್ತದೆ.

'ಕಲೆ'ಎಂದಾಕ್ಷಣ ಎಲ್ಲರಲ್ಲಿ ಒಂದು ಆದರ, ಪ್ರೀತಿ, ಗೌರವ ಹುಟ್ಟುತ್ತದೆ. ಆದರೆ, ಅದನ್ನೇ ವೃತ್ತಿಯಾಗಿ ಸ್ವೀಕರಿಸಿರುವವರ ಬಗ್ಗೆ ಕೀಳರಿಮೆ ಹಾಗೂ ಉದಾಸೀನ ಮನಸ್ಸಿನ ಜನರನ್ನು ನಾವು ಕಾಣಬಹುದಾಗಿದೆ. 'ನೀನೇನೋ ಕಲಾವಿದ'. ಒಳ್ಳೆಯದು ಆದರೆ ಜೀವನಕ್ಕೇನು ಮಾಡುತ್ತೀಯೇ? ಎಂಬ ಪ್ರಶ್ನೆಗಳನ್ನು ಕೇಳುವವರಿದ್ದಾರೆ, ಅಂದರೆ ಕಲೆಯನ್ನು ಆರಾಧಿಸುವ ಜನರಿಗೆ, ಸಾಮಾಜಿಕ ಸೆಕ್ಯುರಿಟಿ ಇಲ್ಲದೆ ಇರುವುದೆ, ಕಲಾವಿದರಿಗೆ ಒಂದು ಕಪ್ಪು ಚುಕ್ಕೆ. ಇತ್ತೀಚೆಗೆ ಸರ್ಕಾರ 'ಕಲೆ'ಗೆ ಹೆಚ್ಚು ಪ್ರೋತ್ಸಾಹ ನೀಡುತ್ತಿರುವುದು ಕಂಡು ಬರುತ್ತಿದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚು ಪರಿಶ್ರಮದ ಅಗತ್ಯ ಅವಶ್ಯಕ.

"ಮುಪ್ಪು ಮಿಡುಕಾಟ, ಹೋಯಿತೆನ್ನ ಯೌವನದ ಬಿಸಿರಕ್ತ, ಎಲೆ ಮುಪ್ಪೆ ಸಾರತ್ತ, ಯೌವನವೆ ಬಾರಿತ್ತ"ಎಂಬ ಷೇಕ್ಸ್‌ಪಿಯರ್ ಅಭಿಪ್ರಾಯದಂತೆ ಹೋಯಿತೆನ್ನ ಸುಮ್ಮಾನ, ದುಮ್ಮಾನವೀಗ. ಅಳಿಸಿತೆನ್ನ ಅಂಹಕಾರ ಕುರುಹದೋರದ ಪರಿಯೊಳು. ಜಡವಾಗಿ ಕಡೆದಿರುವುದೆಲ್ಲ ಜೀವಕಳೆತುಂಬಿ ಪ್ರೇಮವುಕ್ಕುವುದು. 'ಕಲೆ'ಯಾಗಿ ನನ್ನ ಜೀವನದಲ್ಲಿ ಕಳೆದುಳಿದ ಬದುಕು ಮಿರುಗು ಬಣ್ಣಕ್ಕೆ ಮೆರೆದಾಯ್ತು, ನೆಮ್ಮದಿ ಕಳೆದುಹೋಯಿತು. 'ಓ'ದೇವ ಇಷ್ಟು ದಿನ ಸಲಹಿರುವೆ ಈ ಮೂರ್ಖನನ್ನು. ಊದು ಉಸಿರನ್ನು. ತುಂಬು ನಂಬುಗೆಯನ್ನು ನನ್ನೆದೆಯೊಳು. ಹೊಸತನವ ಚೆಲ್ಲುವ, ಒಲುಮೆ ಮಾತುಗಳೆಲ್ಲ ಮರೆಯುತಿಹವು. ಹೃದಯಗಳು ಕಲೆತು, ಒಲುಮೆ ಚಂಚಲಗಳೆ ಹಲುಬಿ, ಇಲ್ಲ ಒಲಿವಿಲ್ಲ, ಎಂದು ಜನರಾಡಿಕೊಳ್ಳುತಿರಲು, ಕಾಲನೂಕುತಿರುವೆನು, ನಾನಿಲ್ಲಿ ಹಿಂದಿನ ನೆನಪಿನಲಿ -ಓ, ಸ್ನೇಹಿತ, ನಿನ್ನ ಒಲುಮೆಯ ಮರುಕದಲಿ ಮೃದುವಾಗಿ, ನಾ ಹಾಡುವೆನು. ನಿನ್ನ ಗುಣಗಾನ, ಹೇಗೆ ಬಂದೆನು ನಾನು ಹೇಗೆ ಹೋಗುವೆನು - "*ಕೊಡುವಾತ ಭಗವಂತ ಕ್ಷೇಮ ಅದೆ ನನಗೆ -ನನ್ನ ಜೀವನಕಲೆಗೆ*"ಎಂಬಂತಿರಬೇಕು ಕಲೆ ಒಳಗಿನ ಕಲಾವಿದ.

* * *

# ಮಹದೇಶ್ವರರಿಗೆ ನಮನ



ಎಲ್ಲರ ಕಾಯುವ ಶ್ರೀ ಮಹದೇಶ್ವರ ಇರುವನು ಇಲ್ಲಿ
ಅದನರಿವ ಶಕ್ತಿ ಸ್ವಚ್ಛಮನಸಿರಲಿ ಓ ಭಕ್ತನೆ ನಿನ್ನಲ್ಲಿ |ಪ|

ಜಿನ್ನಹಳ್ಳಿಯ ಪುಣ್ಯಭೂಮಿಯ ಒಡಲಲ್ಲಿ
ಜೀವನದಿ ಕಪಿಲೆಯ ದಡದಲ್ಲಿ
ನುಗು ಕಿರುನದಿಯ ಬದಿಯಲ್ಲಿ
ದಿವ್ಯ ಊರ ಮುರುಟಿಯ ಅಡಿಯಲ್ಲಿ
ಭವ್ಯಸಂಗಮ ಧರ್ಮಕ್ಷೇತ್ರದ ಗಡಿಯಲ್ಲಿ ||೧||

ನೆಲೆಸಿರುವ ದೈವ ಶ್ರೀ ಮಹದೇಶ್ವರರಿಲ್ಲಿ
ಶಿರಬಾಗಿ ಭಕ್ತ ಸದಾ ನಮಿಸುವನಿಲ್ಲಿ
ಗುರುದೇವಸಾರ್ವಭೌಮರ ಕೃಪೆಯಲ್ಲಿ
ಸಕಲ ಜೀವಕೋಟಿಗೆ ಭಯವಿನ್ನೆಲ್ಲಿ
ಭಕ್ತರನೆಲ್ಲ ಶ್ರೀ ಮಹದೇಶ್ವರ ಸಂರಕ್ಷಿಸುವಲ್ಲಿ ||೨||

ನಿನ್ನ ಪ್ರಾರ್ಥನೆಯನ್ನು ಸಲ್ಲಿಸು ಭಕ್ತಿಯಲಿ
ಸಿದ್ಧಹಸ್ತ ಮಹದೇಶ್ವರ ನೆಲೆಸಿರುವನಿಲ್ಲಿ
ಪ್ರೀತಿಯ ದೈವ ಸದಾ ನಿನ್ನ ಮನದಾಳದಲಿರುವಲ್ಲಿ
ಅದನರಿತು ಬದುಕೋ ದೃಢಮನಸಿರಲಿ ನಿನ್ನಲ್ಲಿ
ನಿನಗಾವ ಭಯವಿಲ್ಲ ಜೀವವೆ ದೃಢಸಂಕಲ್ಪ ನಿನಗಿರಲಿ ||೩||



ಲೇಖಕ :
- **ಆರಾಧಕ**, ಮೈಸೂರು.

* * *

# ಎಂದೆಂದಿಗೂ ನಿನ್ನ ಹೆತ್ತವರನ್ನು ಮರೆಯದಿರು

1. ಬೇಕಿದ್ದರೆ ಸರ್ವಸ್ವವನ್ನು ಮರೆ, ನಿನ್ನ ಹೆತ್ತವರನ್ನು ಮಾತ್ರ ಮರೆಯದಿರು. ನಿನಗೋಸ್ಕರ ಅವರು ಕಷ್ಟಗಳನ್ನು ಅನುಭವಿಸಿ ತಮ್ಮ ಸರ್ವಸ್ವವನ್ನು ತ್ಯಾಗಮಾಡಿರುತ್ತಾರೆ.
2. ನಿನ್ನ ಮೊಗದಲ್ಲಿ ಮುಗುಳ್ನಗು ಬೆಳಗಲೆಂದು ಅವರು ಕಲ್ಲುದೇವತೆಗಳನ್ನು ಪೂಜಿಸಿರುತ್ತಾರೆ. ಆದುದರಿಂದ ನೀನು ಕೃತಘ್ನ ಹಾಗೂ ಕಠಿಣಹೃದಯನಾಗಿ ಅವರ ವಿರುದ್ಧ ಕಲ್ಲಿನಂತಹ ಮುಖ ತೋರಿಸಿ ಅವರ ಹೃದಯವನ್ನು ನೋಯಿಸದಿರು.
3. ನಿನಗೋಸ್ಕರ ಅವರು ತಮ್ಮನ್ನೇ ಮರೆತು ನೀನು ಉಂಡು ತಿಂದು ಸುಖವಾಗಿರುವಂತೆ ಹೆಣಗಿದ್ದಾರೆ. ನಿನಗೆ ಅಮೃತ ಕುಡಿಸಿರುವವರು ಅವರು. ನೀನಾದರೂ ಅವರಿಗೆ ವಿಷವುಣಿಸಬೇಡ.
4. ನೀನು ಬಯಸಿದುದನ್ನೆಲ್ಲ ಕೊಟ್ಟು ಸಲಹಿರುವವರು ಅವರು, ನೀನಾದರೂ ಹೃದಯ ಹೀನನಾಗಿ ಅವರ ನಿರೀಕ್ಷೆ ಹಾಗೂ ಆಶಯಗಳನ್ನು ತುಳಿದುಬಿಡಬೇಡ.
5. ನೀನು ನಿನ್ನ ಸ್ವಂತ ಸಂಪಾದನೆಯಿಂದ ನಿನ್ನ ಸುತ್ತ ಸುಂದರ ಅರಮನೆಯನ್ನು ಕಟ್ಟಿರಬಹುದು. ಆದರೆ ನಿನ್ನ ಸಂಪತ್ತು ಅವರ ವೇದನೆಗೆ ಕಾರಣವಾದರೆ, ಅದಕ್ಕೇನು ಬೆಲೆ ಬಂದಂತಾಯಿತು ?
6. ನಿನ್ನ ಹೆತ್ತವರನ್ನು ಕಂಡಂತೆಯೇ ನಿನ್ನ ಮಕ್ಕಳು ಮುಂದೆ ನಿನ್ನನ್ನು ಕಾಣುವರೆಂದು ಮರೆಯದಿರು.
7. ನೀನು ನಡೆಯುವ ದಾರಿಯಲ್ಲಿ ನಿನ್ನ ಹೆತ್ತವರು ಹೂ ಚೆಲ್ಲಿದ್ದಾರೆ. ಅವರ ದಾರಿಯಲ್ಲಿ ನೀನು ಮುಳ್ಳಾಗುವುದೆ?
8. ನಿನ್ನ ಸಂಪತ್ತಿನಿಂದ ನೀನು ಪ್ರಪಂಚವನ್ನೇ ಕೊಂಡುಕೊಳ್ಳಬಲ್ಲೆ. ಆದರೆ ನಿನ್ನ ಹೆತ್ತವರನ್ನೆಂದೂ ಕೊಂಡುಕೊಳ್ಳಲಾರೆ.
9. ಮನೆಯಲ್ಲಿ ಹಿರಿಯರೊಬ್ಬರು ಜೀವಂತ ಇರುವುದು, ಅಮೂಲ್ಯವಾದ ರತ್ನವೊಂದಿರುವುದಕ್ಕಿಂತ ಹೆಚ್ಚು ಎಂದು ತಿಳಿ.

ಕೃಪೆ : ಎಸ್. ವೈದ್ಯನಾಥಯ್ಯ.

* * *



ಶುಭಮಸ್ತು

"ಆರಾಧ್ಯಸುರಭಿ" ಗ್ರಂಥ ಪ್ರಕಟಣೆಗೆ ಸ್ವಯಂ ಪ್ರೇರಣೆಯಿಂದ ಸಹಾಯ ಹಸ್ತ ನೀಡಿದ
ಈ ಕೆಳಕಂಡ ಮಹನೀಯರಿಗೆ ನಮನಗಳು



| | | |
|---|---|---|
| ಶ್ರೀ ಕಾಶೀ ಆರಾಧ್ಯರು | - | ಚಾಮರಾಜನಗರ |
| ಶ್ರೀ ಸಿ. ಜಿ. ಉತ್ತಪ್ಪನವರು | - | ಮೈಸೂರು |
| ಶ್ರೀ ಡಾ\|\|ವಿಶ್ವೇಶ್ವರರವರು | - | ಮೈಸೂರು |
| ಶ್ರೀ ಕೆ. ಎ. ಕರುಂಬಯ್ಯರವರು | - | ಮೈಸೂರು |
| ಶ್ರೀ ಪ್ರೊ\|\| ಎಂ. ರುದ್ರಾರಾಧ್ಯರು | - | ಮೈಸೂರು |
| ಶ್ರೀ ಡಿ. ಎಸ್. ಎಲ್. ಆರಾಧ್ಯರು | - | ಮದ್ದೂರು |
| ಶ್ರೀ ಕ್ಯಾತನಹಳ್ಳಿ ರಾಮಣ್ಣನವರು | - | ಬೋಗಾದಿ |
| ಶ್ರೀ ದಿ\|\| ಗುರುದೇವಾರಾಧ್ಯರು | - | ಮೈಸೂರು |
| ಶ್ರೀ ಬಿ. ಅಪ್ಪಾಜಿಗೌಡರು , ವಕೀಲರು | - | ಮದ್ದೂರು |
| ಶ್ರೀ ಎಲ್. ರಾಮಯ್ಯನವರು | - | ಮದ್ದೂರು |
| ಶ್ರೀ ಸಿಂದಘಟ್ಟ ಚಂದ್ರಶೇಖರಾರಾಧ್ಯರು | - | ಪಾಂಡವಪುರ |
| ಶ್ರೀ ಜಯಶಂಕರಾರಾಧ್ಯರು | - | ಕೂನೂರು |
| ಶ್ರೀ ರೇವಣಾರಾಧ್ಯರು | - | ಮಂಡ್ಯ |
| ಮಾನ್ಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು<br>ನಾಗರೀಕ ಹಿತರಕ್ಷಣಾ ಸಮಿತಿ, | - | ಮದ್ದೂರು |

